॥ ಶ್ರೀಃ ॥

# ೨೬ ಏಕಾದಶೀಮಹಾತ್ಮ್ಯೆ

## (ಮೂಲ ಹಾಗೂ ಕನ್ನಡಾನುವಾದ)

ಗೌರವ ಸಂಪಾದಕರು

ಪಂಡಿತಕೇಸರೀ

ಶ್ರೀ ರಾಜಾ ಎಸ್. ಗಿರಿಆಚಾರ್ಯರು

ಅನುವಾದಕ

ಆ.ರಾ. ಪಂಚಮುಖಿ



---

ಶ್ರೀಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠ

ಶ್ರೀರಾಘವೇಂದ್ರಸ್ವಾಮಿ ಮಠ

ಮಂತ್ರಾಲಯ

# ಶ್ರೀಮದಾನಂದತೀರ್ಥ ಭಗವತ್ಪಾದರು



ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ ॥

# ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು



ದುರ್ವಾದಿಧ್ವಾಂತರವಯೇ ವೈಷ್ಣವೇಂದೀವರೇಂದವೇ ।
ಶ್ರೀರಾಘವೇಂದ್ರಗುರವೇ ನಮೋಽತ್ಯಂತದಯಾಲವೇ ॥

# ಶ್ರೀಸುಜಯೀಂದ್ರತೀರ್ಥರು



ಸುಯಮೀಂದ್ರಕರಾಬ್ಜೋತ್ಥಂ ಸುವಿದ್ಯಾಬೋಧಕಂ ಸದಾ ।
ಸುಮೂಲರಾಮಪೂಜಾಢ್ಯಂ ಸುಜಯೀಂದ್ರಗುರುಂ ಭಜೇ ॥

# ಮುನ್ನುಡಿ

''ಏಕಾದಶೀ ಸಮಂ ಕಿಂಚಿತ್ ಪಾಪತ್ರಾಣಂ ನ ವಿದ್ಯತೇ'' ಎಂದಂತೆ ''ಏಕಾದಶೀ'' ದಿನಕ್ಕೆ ಸಮಾನವಾದ ಪಾಪಪರಿಹಾರಕ ದಿನ ಮತ್ತೊಂದು ಇಲ್ಲ. ಇಂಥಹ ಪರಮ ಪವಿತ್ರವಾದ ಏಕಾದಶೀ ದಿನದಂದು ಮಾಡಬೇಕಾದ ವಿಧಿ ವಿಧಾನಗಳ ಮತ್ತು ಮಹಾತ್ಮ್ಯೆಗಳು ಪುರಾಣಗಳಲ್ಲಿ ಸವಿಸ್ತಾರವಾಗಿ ನಿರೂಪಿತವಾಗಿವೆ. ಇಂಥಹ ಏಕಾದಶೀ ಮಹಾತ್ಮ್ಯೆಗಳನ್ನು ಕನ್ನಡ ಅನುವಾದ ಸಹಿತ ಏಕತ್ರ ಮುದ್ರಣ ಮಾಡುತ್ತಿರುವುದು ಇದೇ ಮೊದಲ ಬಾರಿ. ಈ ಕಾರ್ಯವನ್ನು ಮಾಡಲು ಶ್ರೀಶ್ರೀಪಾದಂಗಳವರ ಆಜ್ಞಾ ಪ್ರಕಾರ ಶ್ರೀಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠದ ಪತಿಯಿಂದ ವಿದ್ವಾನ್ ಆ. ರಾ. ಪಂಚಮುಖಿಯವರಿಗೆ ಒಪ್ಪಿಸಲಾಗಿತ್ತು. ಈ ಅನುವಾದ ಕಾರ್ಯವನ್ನು ಬಹು ಸುಂದರವಾಗಿ ಸ್ವಲ್ಪ ಕಾಲದಲ್ಲಿ ಮಾಡಿ ಸುಂದರವಾಗಿ ಮುದ್ರಿಸಿ ಒದಗಿಸುತ್ತಿರುವುದು ಬಹಳ ಸಂತೋಷದ ಸಂಗತಿಯಾಗಿದೆ. ಈ ಕೃತಿಯನ್ನು ಮುಮುಕ್ಷುಗಳ ಉಪಯೋಗಕ್ಕಾಗಿ ಶ್ರೀಮಠದಿಂದ ಮುದ್ರಿಸಲಾಗಿದೆ. ಕಾರಣ ಇದರ ಸದುಪಯೋಗವನ್ನು ಸಜ್ಜನರು ಪಡೆದು ಈ ಗ್ರಂಥ ಪ್ರತಿಪಾದ್ಯರಾದ ಶ್ರೀರಾಘವೇಂದ್ರ, ಗುರ್ವಂತರ್ಗತ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಸೀತಾಪತಿ ಶ್ರೀಮೂಲರಾಮಚಂದ್ರ ದೇವರ ಅನುಗ್ರಹಕ್ಕೆ ಪಾತ್ರರಾಗಬೇಕಾಗಿ ಕೋರುತ್ತೇವೆ.

ಅಧ್ಯಕ್ಷರು
ಶ್ರೀಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠ,
ಮಂತ್ರಾಲಯ

ಯುವ ಸಂ ॥ ಆಷಾಢ
ಬ॥ ತ್ರಯೋದಶೀ

॥ ಶ್ರೀಃ ॥

# ಪ್ರಸ್ತಾವನೆ

ಚೈತ್ರದಿಂದ ಫಾಲ್ಗುಣಮಾಸದ ವರೆಗಿನ ಒಂದು ವರ್ಷದ ಪ್ರತಿತಿಂಗಳಿನಲ್ಲಿ ಬರುವ ಶುಕ್ಲಪಕ್ಷ ಮತ್ತು ಕೃಷ್ಣಪಕ್ಷದ ಏಕಾದಶೀ ವ್ರತಗಳ ಮಹಾತ್ಮೆಗಳನ್ನು ವಿವಿಧ ಪುರಾಣಗಳಿಂದ ಸಂಗ್ರಹಿಸಿ ಈ ಗ್ರಂಥದಲ್ಲಿ ಕನ್ನಡಾನುವಾದದೊಂದಿಗೆ ಕೊಡಲಾಗಿದೆ. ಇಲ್ಲಿ ಹನ್ನೆರಡು ತಿಂಗಳುಗಳ ೨೪ ಏಕಾದಶೀವ್ರತಗಳು ಮತ್ತು ಅಧಿಕಮಾಸದ ೨ ಏಕಾದಶೀ ವ್ರತಗಳು ಹೀಗೆ ಒಟ್ಟು ೨೬ ಏಕಾದಶೀ ವ್ರತಗಳ ಮಹಾತ್ಮೆ, ವ್ರತಾನುಷ್ಠಾನದ ವಿಧಾನ ಮುಂತಾದವುಗಳು ಅಲ್ಲಲ್ಲಿ ಪೌರಾಣಿಕ ಕಥೆಗಳೊಂದಿಗೆ ವಿವರಿಸಲ್ಪಟ್ಟಿವೆ. ಒಂದೊಂದು ಏಕಾದಶಿಯು ಒಂದೊಂದು ಹೆಸರಿನಿಂದ ಪ್ರಸಿದ್ಧವಾಗಿರುವದು ಕಂಡುಬರುವದು. ''ಮಾಸಾನಾಂ ಮಾರ್ಗಶೀರ್ಷೋಽಹಂ'' ಎಂದು ಗೀತಾಚಾರ್ಯ ಶ್ರೀಕೃಷ್ಣನ ಉಕ್ತಿಯನ್ನು ಅನುಸರಿಸಿ ಈ ಸಂಗ್ರಹದಲ್ಲಿ ಮಾರ್ಗಶೀರ್ಷಮಾಸದ ಏಕಾದಶೀ ವ್ರತಗಳಿಂದ ವ್ರತಮಹಾತ್ಮೆಗಳನ್ನು ಪ್ರಾರಂಭಿಸಿದ್ದು ಸೂಕ್ತವಾಗಿದೆ.

ಏಕಾದಶೀವ್ರತವು ಇತರೆಲ್ಲ ವ್ರತಗಳು ಹಾಗೂ ದಾನ ಧರ್ಮಗಳಿಗಿಂತ ಶ್ರೇಷ್ಠವಾಗಿರುವುದರಿಂದಲೇ ''**ವ್ರತಗಳೆಲ್ಲವು ಹರಿವಾಸರ ವ್ರತದ ಹಿಂದೆ**'' ಎಂದು ಶ್ರೀಪುರಂದರದಾಸರು ಹೇಳಿದ್ದಾರೆ. ''**ನೇದೃಶಂ ಪಾವನಂ ಕಿಂಚಿನ್ನರಾಣಾಂ ಭುವಿ ವಿದ್ಯತೇ । ಯಾದೃಶಂ ಪದ್ಮನಾಭಸ್ಯ ದಿನಂ ಪಾತಕಹಾನಿದಮ್ ॥**'' ಎಂದು ಬ್ರಹ್ಮಾಂಡಪುರಾಣದಲ್ಲಿ ಏಕಾದಶಿಯ ಮಹತ್ವವನ್ನು ತಿಳಿಸಲಾಗಿದೆ. ಮನುಷ್ಯನು ಪ್ರತಿದಿನ ತನ್ನ ಏಕಾದಶೇಂದ್ರಿಯಗಳಿಂದ ಒಂದಿಲ್ಲೊಂದು ಪಾಪಕರ್ಮವನ್ನು ಮಾಡುತ್ತಲೇ ಇರುತ್ತಾನೆ. ಈ ಎಲ್ಲ ಪಾಪಗಳು ಏಕಾದಶಿಯ ವ್ರತಾನುಷ್ಠಾನದಿಂದ ನಾಶವಾಗುವವೆಂದು ಪದ್ಮಪುರಾಣವು ತಿಳಿಸುತ್ತದೆ. '**ಏಕಾದಶೇಂದ್ರಿಯೈಃ ಪಾಪಂ ಯತ್ಕೃತಂ ಭವತಿ ಪ್ರಭೋ । ಏಕಾದಶ್ಯುಪವಾಸೇನ ತತ್ಸರ್ವಂ ವಿಲಯಂ ವ್ರಜೇತ್** '॥ (ಪದ್ಮ ಪು. ಅ. ೨೩.೪-೧೧).

**ಏಕಾದಶೀ ವ್ರತಾನುಷ್ಠಾನ:** - ೨೬ ಏಕಾದಶೀ ವ್ರತಾನುಷ್ಠಾನದ ಪೂಜಾ ವಿಧಾನಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸವಿರುವುದಾದರೂ ದಶಮೀ, ಏಕಾದಶೀ, ದ್ವಾದಶೀ, ಈ ದಿನತ್ರಯಗಳಲ್ಲಿಯ ಆಚರಣೆಯ ಸಾಮಾನ್ಯ ಕ್ರಮವು ಒಂದೇ

ಬಗೆಯಾಗಿರುವುದು. ದಿನತ್ರಯಗಳ ಸಾಮಾನ್ಯ ನಿಯಮಗಳನ್ನು ಹೀಗೆ ತಿಳಿಸಲಾಗಿದೆ.

**ಶಾಕಂ ತೈಲಂ ದಿವಾ ಸ್ವಾಪಂ ಪುನರ್ಭೋಜನ ಮೈಥುನೇ ।**
**ಉಷ್ಣೋದಕಾತ್ಯಂಬುಪಾನಂ ದಶಮ್ಯಾಂ ವೈಷ್ಣವಸ್ತ್ಯಜೇತ್ ॥**

ದಶಮಿಯ ದಿನ ಶಾಕಗಳು, ತೈಲ, ಹಗಲುನಿದ್ರೆ, ಎರಡನೆಯ ಭೋಜನ ಮೈಥುನ, ಬಿಸಿನೀರಿನ ಸ್ನಾನ, ಪಾನ, ಅತಿ ಜಲಪಾನ ಇವುಗಳನ್ನು ತ್ಯಜಿಸಬೇಕು.

**ಅಸಕೃಜ್ಜಲಪಾನಂ ಚ ಹಿಂಸಾ ವೈರಮಸತ್ಯತಾಮ್ ।**
**ತಾಂಬೂಲಂ ದಂತಕಾಷ್ಠಂ ಚ ದಿವಾಸುಪ್ತಿಂ ಚ ಸಂಗಮಮ್ ।**
**ದ್ಯೂತಕ್ರೀಡಾಂ ನಿಶಾನಿದ್ರಾಂ ವರ್ಜಯೇದ್ಧರಿವಾಸರೇ ॥**

ಇನ್ನು ಏಕಾದಶಿಯ ದಿನ ದಶಮೀದಿನ ಹೇಳಿದವುಗಳನ್ನಲ್ಲದೇ, ಒಂದಕ್ಕಿಂತ ಹೆಚ್ಚು ಸಲ ತೀರ್ಥಪ್ರಾಶನ, ಹಿಂಸಾ, ವೈರ, ಅಸತ್ಯಭಾಷಣ, ತಾಂಬೂಲ, ದಂತಧಾವನ, ಹಗಲುನಿದ್ರೆ, ರಾತ್ರಿನಿದ್ರೆ, ದ್ಯೂತಕ್ರೀಡಾ ಇವೆಲ್ಲವುಗಳನ್ನು ಬಿಡಬೇಕು. ಹಾಗೂ

**ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ ।**
**ನ ಶ್ರಾದ್ಧಹೋಮೌ ಕುರ್ವೀತ ದೇವಾದೀನ್ನ ತು ತರ್ಪಯೇತ್ ॥**

ಉಭಯ ಪಕ್ಷಗಳ ಏಕಾದಶೀ ತಿಥಿಗಳಂದು ಭೋಜನ, ಶ್ರಾದ್ಧ, ಹೋಮ, ದೇವಋಷಿಪಿತರ್ತರ್ಪಣಗಳನ್ನು ಮಾಡಕೂಡದು.

ಏಕಾದಶೀವ್ರತವು ಏಕಾದಶೇಂದ್ರಿಯಗಳನ್ನು ನಿಗ್ರಹಿಸಿ ಪರಮಾತ್ಮನನ್ನು ಏಕಾಗ್ರತೆಯಿಂದ ಧ್ಯಾನಿಸಲು ಶ್ರೇಷ್ಠವಾದ ಸಾಧನವಾಗಿದೆ. ಧರ್ಮಸಾಧನಗೆ ಅತ್ಯವಶ್ಯವಾದ ದೇಹಾರೋಗ್ಯವನ್ನು ಕಾಪಾಡಲೂ ಈ ವ್ರತವು ಸಹಾಯಕವಾಗಿದೆ.

**ಏಕಾದಶಿಯಂದೇ ಆಹಾರ ನಿಷೇಧ :** ಜಗತ್ತಿನಲ್ಲಿ ಬ್ರಹ್ಮಹತ್ಯಾದಿ ಪಾಪಗಳೇನಿವೆಯೋ ಅವೆಲ್ಲವೂ ಏಕಾದಶಿಯ ದಿನ ಆಹಾರವನ್ನು ಆಶ್ರಯಿಸಿರುತ್ತವೆಯಾದ್ದರಿಂದ ಅಂದು ಆಹಾರಸೇವನೆ ವರ್ಜ್ಯವಾಗಿದೆ.

**ಪೃಥಿವ್ಯಾಂ ಯಾನಿ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ।**
**ಅನ್ನಮಾಶ್ರಿತ್ಯ ತಿಷ್ಠಂತಿ ಸಂಪ್ರಾಪ್ತೇ ಹರಿವಾಸರೇ ॥**

**ಬೃಹನ್ನಾರದೀಯ ಪುರಾಣ ಅ. ೨೧-೮.**

ಆಹಾರ ವರ್ಜನೆಗೆ ಇದೊಂದು ಧಾರ್ಮಿಕ ಕಾರಣವಾದರೆ ನಮ್ಮ ಮನಸ್ಸಿಗೆ ಒಪ್ಪಿಗೆಯಾಗುವಂಥ ವೈಜ್ಞಾನಿಕ ಕಾರಣವೊಂದು ವಾಚಸ್ಪತ್ಯದಲ್ಲಿ ಈ ರೀತಿಯಾಗಿ ಹೇಳಲ್ಪಟ್ಟಿದೆ-

''ಸಾ (ಏಕಾದಶೀ) ತು ಶುಕ್ಲಪಕ್ಷೇ ಸೂರ್ಯಮಂಡಲಾತ್ ಚಂದ್ರಮಂಡಲಸ್ಯ ನಿರ್ಗಮರೂಪೈಕಾದಶಕಲಾಕ್ರಿಯಾರೂಪಾ, ಕೃಷ್ಣಪಕ್ಷೇ ಸೂರ್ಯಮಂಡಲೇ ಚಂದ್ರಮಂಡಲಸ್ಯ ಪ್ರವೇಶರೂಪಾ ಏಕಾದಶ ಕಲಾಕ್ರಿಯಾರೂಪಾ ।''

ಏಕಾದಶಿಗೂ ಚಂದ್ರಮಂಡಲದ ಗತಿಗೂ ಸಂಬಂಧವಿದೆ. ಶುಕ್ಲಪಕ್ಷದ ಏಕಾದಶಿಯ ದಿನ ಚಂದ್ರನು ಸೂರ್ಯಮಂಡಲದಿಂದ ದೂರ ಸರಿದು ಪೃಥ್ವಿಯ ಕಾಂತಿವೃತ್ತಕ್ಕೆ ಬರುವನು. ಹಾಗೂ ಕೃಷ್ಣಪಕ್ಷದ ಏಕಾದಶಿಯ ದಿನ ಪೃಥ್ವಿಯ ಕಾಂತಿವೃತ್ತದಿಂದ ಸರಿದು ಸೂರ್ಯಮಂಡಲವನ್ನು ಪ್ರವೇಶಿಸುತ್ತಾನೆ. ಅನ್ನಾಭಿಮಾನಿಯಾದ ಚಂದ್ರನು (ಅನ್ನಾಭಿಮಾನೀ ಚಂದ್ರಸ್ತು) ಈ ಎರಡೂ ದಿನಗಳಲ್ಲಿ ಪೂರ್ಣಪ್ರಭಾವದಿಂದ ಯುಕ್ತನಾಗಿರುವುದಿಲ್ಲ. ಈ ಕಾರಣದಿಂದ ಏಕಾದಶೀ ದಿನ ಸೇವಿಸಿದ ಆಹಾರವು ದೇಹಕ್ಕೆ ಹಾನಿಕರವಾಗಿರುವದು ಮತ್ತು ಅನೇಕ ರೋಗಗಳ ಉತ್ಪತ್ತಿಗೆ ಕಾರಣವಾಗುವದು.

ಈ ಪ್ರಕಾರದ ಧಾರ್ಮಿಕ ಮತ್ತು ವೈಜ್ಞಾನಿಕ ಪ್ರಮಾಣಗಳಿಂದ ಉತ್ತಮ ಆರೋಗ್ಯವನ್ನು ಕಾಪಾಡಿಕೊಳ್ಳಲು ಏಕಾದಶಿಯ ದಿನ ಆಹಾರಸೇವನೆಯು ನಿಷೇಧಿಸಲ್ಪಟ್ಟಿರುವುದು. ಇದನ್ನು ಗಮನಿಸಿದಾಗ ಆರೋಗ್ಯ ರಕ್ಷಣೆಗೆ ಪೌಷ್ಟಿಕ ಆಹಾರ ಸೇವನೆಯಂತೆ ನಿಯಮಿತ ದಿನಗಳಲ್ಲಿ ಆಹಾರ ವರ್ಜನೆಯೂ ಅವಶ್ಯವಾಗಿರುವುದು ಕಂಡುಬರುವದು. ಇದನ್ನರಿತೇ ಹಿಂದಕ್ಕೆ ಅಂಬರೀಷ, ರುಕ್ಮಾಂಗದ ಮೊದಲಾದ ಮಹಾರಾಜರು ಏಕಾದಶೀವ್ರತವನ್ನು ತಮ್ಮ ರಾಜ್ಯದಲ್ಲಿ ಕಡ್ಡಾಯಗೊಳಿಸಿದ್ದರು. ಅನೇಕ ರಾಜಮಹಾರಾಜರುಗಳು, ಆಬಾಲಸ್ತ್ರೀವೃದ್ಧರು ಏಕಾದಶೀ ವ್ರತವನ್ನು ಶ್ರದ್ಧೆಯಿಂದ ಆಚರಿಸಿ ಐಹಿಕ ಮತ್ತು ಪಾರತ್ರಿಕ ಸುಖವನ್ನು ಹೊಂದಿದ ಅನೇಕ ದೃಷ್ಟಾಂತಗಳು ಈ ಏಕಾದಶೀ ಮಹಾತ್ಮೆಯಿಂದ ತಿಳಿಯುವವು.

**ಏಕಾದಶೀ ಉಪವಾಸವು ಸಕಲ ಮಾನವರಿಗೂ ಕಡ್ಡಾಯವಾಗಿದೆ -**

ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತಥಾ ।
ಬ್ರಾಹ್ಮಣೋ ಕ್ಷತ್ರಿಯೋ ವೈಶ್ಯಃ ಶೂದ್ರೋ ಭರ್ತೃಮತೀ ತಥಾ ॥

ಅಭರ್ತೃಕಾ ತಥಾಽನ್ಯೇ ಚ ಸೂತವೈದೇಹಿಕಾದಯಃ ।
ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ ॥

- ಕೃಷ್ಣಾಮೃತ ಮಹಾರ್ಣವ

ಬ್ರಹ್ಮಚಾರೀ, ಗೃಹಸ್ಥ, ವಾನಪ್ರಸ್ಥ ಯತಿಗಳೆಂಬ ನಾಲ್ಕು ಆಶ್ರಮದವರೂ ಬ್ರಾಹ್ಮಣಾದಿ ನಾಲ್ಕು ವರ್ಣದವರೂ; ಕನ್ಯೆಯರು, ಮುತ್ತೈದೆಯರು,

ವಿಧವೆಯರು ಮೊದಲಾದ ಎಲ್ಲ ಸ್ತ್ರೀಯರೂ; ಸೂತ, ವೈದೇಹಿಕಾದಿಗಳೂ, ಪ್ರತಿಮಾಸದ ಉಭಯ ಪಕ್ಷಗಳಲ್ಲಿ ಬರುವ ಏಕಾದಶಿಯ ದಿನ ಯಾವ ಆಹಾರವನ್ನೂ ಸೇವಿಸಬಾರದು. ಎಂಟು ವರ್ಷ ಮೀರಿದ ಮತ್ತು ಎಂಭತ್ತು ವರ್ಷ ಮೀರದ ಎಲ್ಲರೂ ಏಕಾದಶೀ ವ್ರತವನ್ನು ಆಚರಿಸಬೇಕು. ಆ ದಿನ ತಪ್ಪಿ ಆಹಾರ ಸೇವಿಸಿದರೆ ನರಕಭಾಗಿಯಾಗಬೇಕಾಗುತ್ತದೆ.

**ಅಷ್ಟವರ್ಷಾಧಿಕೋ ಯಸ್ತು ಹ್ಯಶೀತಿರ್ನ ಹಿ ಪೂರ್ಯತೇ ।**
**ಯೋ ಭುಂಕ್ತೇ ಮಾನವಃ ಪಾಪೋ ವಿಷ್ಣೋರಹನಿ ಚಾಗತೇ ॥**
**-ಕೃಷ್ಣಾಮೃತ ಮಹಾರ್ಣವ**

ಆಹಾರ ಸೇವಿಸಿದವನು ನರಕಭಾಗಿಯಾಗುವದಂತೂ ನಿಶ್ಚಿತ. ಇನ್ನು ಆ ದಿನ ಇನ್ನೊಬ್ಬನಿಗೆ 'ಉಣ್ಣು' 'ತಿನ್ನು' ಎಂದು ಹೇಳುವವರೂ ಅಷ್ಟೇ ಪಾಪಭಾಗಿಯಾಗುತ್ತಾರೆ.

**ಭುಂಕ್ಷ್ವ ಭುಂಕ್ಷ್ವೇತಿ ಯೋ ಬ್ರೂಯಾದ್ಯೋ ಭುಂಕ್ತೇ ಹರಿವಾಸರೇ।**
**ತಾವುಭೌ ನರಕಂ ಯಾತೋ ಯಾವದಾಭೂತಸಂಪ್ಲವಮ್ ॥**
**- ಸ್ಮೃತಿಮುಕ್ತಾವಲಿ**

ಆದ್ದರಿಂದ ಏಕಾದಶಿಯ ದಿನ ತಾನು ಆಹಾರವರ್ಜನೆ ಮಾಡುವಷ್ಟೇ ಬೇರೆಯವರಿಂದ ಉಪವಾಸ ಮಾಡಿಸುವದೂ ಮಹತ್ವದ್ದಾಗಿದೆ.

ಏಕಾದಶೀ ಉಪವಾಸವೆಂದರೆ ಕೇವಲ ಆಹಾರ ವರ್ಜನೆಯಲ್ಲ. ಉಪವಾಸದ ದಿನ ಪಾಪಕರ್ಮಗಳಿಂದ ದೂರವಿದ್ದು, ಇಂದ್ರಿಯಗಳನ್ನು ನಿಗ್ರಹಿಸಿ ಕೇವಲ ಪುಣ್ಯಕರ್ಮಗಳನ್ನು ಮಾಡುವದು, ಸತ್ಸಂಗದಲ್ಲಿರುವುದು, ಪರಮಾತ್ಮನನ್ನು ಸದಾ ಧ್ಯಾನಿಸುವುದು, ಇದೇ ಉಪವಾಸವೆಂದು ಕರೆಸಿಕೊಳ್ಳಲ್ಪಡುವುದು. -

**"ಉಪಾವೃತಸ್ತು ಪಾಪೇಭ್ಯೋ ಯಸ್ಯ ವಾಸೋ ಗುಣೈಸ್ಸಹ ।**
**ಉಪವಾಸಃ ಸ ವಿಜ್ಞೇಯಃ ಸರ್ವಭೋಗವಿವರ್ಜಿತಃ ॥**

(ವಿಷ್ಣುಧರ್ಮೋತ್ತರ ಪು.)

ಉಪವಾಸದ ದಿನ ಶ್ರೀಹರಿಯ ಜಪ, ಧ್ಯಾನ, ಕಥಾಶ್ರವಣಾದಿಗಗಳು, ಅರ್ಚನೆ, ನಾಮಸ್ಮರಣೆ, ನಾಮಕೀರ್ತನೆ, ಜಾಗರ ಮುಂತಾದವುಗಳನ್ನು ತಪ್ಪದೇ ಆಚರಿಸಬೇಕು.

**ತಜ್ಜಾಪ್ಯಂ ತದ್ಗತಂ ಧ್ಯಾನಂ ತತ್ಕಥಾಶ್ರವಣಾದಿಕಮ್ ।**
**ತದರ್ಚನಂ ಚ ತನ್ನಾಮಕೀರ್ತನಶ್ರವಣಾದಯಃ ॥**

ಉಪವಾಸಕೃತಾವೇತೇ ಗುಣಾಃ ಪ್ರೋಕ್ತಾಃ ಮನೀಷಿಭಿಃ ॥

- ವಿ. ಧ. ಪುರಾಣ

ದೇಹಾರೋಗ್ಯ ಹಾಗೂ ಧರ್ಮಾರ್ಥಕಾಮ ಮೋಕ್ಷರೂಪವಾದ ಚತುರ್ವಿಧ ಪುರುಷಾರ್ಥಗಳನ್ನು ಪಡೆಯಲು ಅತ್ಯವಶ್ಯವಾದ ಏಕಾದಶೀ ವ್ರತದ ಮಹಾತ್ಮೆಗಳನ್ನು ಸಂಗ್ರಹಿಸಿ ಅನುವಾದಿಸಿದ ಈ ಸಂಪುಟವನ್ನು ಶ್ರೀರಾಘವೇಂದ್ರಸ್ವಾಮಿಗಳ ಮಠದ ಶ್ರೀಗುರುಸಾರ್ವಭೌಮಸಂಸ್ಕೃತ ವಿದ್ಯಾಪೀಠದಿಂದ ಪ್ರಕಟಿಸುವಂತೆ ಶ್ರೀಶ್ರೀಗಳವರ ಆಜ್ಞಾನುಸಾರವಾಗಿ ವಿದ್ಯಾಪೀಠದ ಅಧ್ಯಕ್ಷರಾದ ಪೂಜ್ಯ ಶ್ರೀಪಾದಪುತ್ರ ಪಂಡಿತಕೇಸರೀ ಶ್ರೀ ರಾಜಾ ಎಸ್. ಗಿರಿ ಆಚಾರ್ಯರು ಸೂಚಿಸಿದರು. ತಮ್ಮ ಅನುಗ್ರಹವಚನಗಳಿಂದ ಆಶೀರ್ವದಿಸಿದ ಪರಮಪೂಜ್ಯ ಶ್ರೀಶ್ರೀ ೧೦೦೮ ಶ್ರೀಸುಶಮೀಂದ್ರತೀರ್ಥ ಶ್ರೀಪಾದಂಗಳವರ ಚರಣಕಮಲಗಳಲ್ಲಿ ಮೊದಲು ಅನಂತದಂಡ ಪ್ರಣಾಮಗಳನ್ನು ಸಲ್ಲಿಸುತ್ತೇನೆ. 'ಏಕಾದಶೀ ಮಹಾತ್ಮೆ'ಯು ಬೆಳಕುಕಾಣಲು ಪ್ರೋತ್ಸಾಹಿಸಿದ ಪೂಜ್ಯ ಶ್ರೀಪಾದಪುತ್ರ ಶ್ರೀರಾಜಾ ಎಸ್. ಗಿರಿಆಚಾರ್ಯರಿಗೆ ನನ್ನ ಸಾ. ನಮಸ್ಕಾರಗಳನ್ನು ಸಲ್ಲಿಸುತ್ತೇನೆ.

ಈ ಏಕಾದಶೀ ಮಹಾತ್ಮೆಯು ಪ್ರಕಟವಾಗುವಲ್ಲಿ ಪೂಜ್ಯ ಶ್ರೀಶ್ರೀ ಸುಜಯೀಂದ್ರತೀರ್ಥ ಶ್ರೀಪಾದಂಗಳವರ ಪೌತ್ರರೂ, ಶ್ರೀಪಾದಪುತ್ರ ಶ್ರೀ ರಾಜಾ ಎಸ್. ಗಿರಿ ಆಚಾರ್ಯರ ಪುತ್ರರೂ ಆದ ಶ್ರೀ ರಾಜಾ ಎಸ್. ಪವಮಾನಾಚಾರ್ಯರ ಪಾತ್ರ ಬಹಳ ಪ್ರಧಾನವಾದುದು. ಇತ್ತೀಚಿನ ೩-೪ ವರ್ಷಗಳಲ್ಲಿ ಶ್ರೀರಾಘವೇಂದ್ರಸ್ವಾಮಿಗಳ ಮಠದಿಂದ ನೂರಾರು ಗ್ರಂಥಗಳು ಪ್ರಕಟವಾಗಲು ತಂದೆಯಂತೆಯೇ ಶ್ರೀಪವಮಾನಾಚಾರ್ಯರು ಪಟ್ಟ ಶ್ರಮವು ಉಲ್ಲೇಖನೀಯವಾಗಿದೆ. ಶ್ರೀರಾಘವೇಂದ್ರಸ್ವಾಮಿಗಳವರ ಮಠವು ವಿದ್ಯಾಮಠವೆಂದು ಪರಂಪರೆಯಿಂದ ಬಂದ ಖ್ಯಾತಿಯು ಮುಂದುವರೆಯುವಂತೆ ಕೀರ್ತಿಶೇಷರಾದ ಪರಮಪೂಜ್ಯ ಶ್ರೀ ೧೦೦೮ ಶ್ರೀಸುಜಯೀಂದ್ರತೀರ್ಥ ಶ್ರೀಪಾದಂಗಳವರು ಹಲವು ಯೋಜನೆಗಳನ್ನು ಹಾಕಿಕೊಂಡಿದ್ದರು. ಅವುಗಳಲ್ಲಿಯ ಕೆಲ ಯೋಜನೆಗಳನ್ನು ಅಧುನಾಪೀಠದಲ್ಲಿ ವಿರಾಜಮಾನರಾದ ಪೂಜ್ಯ ಶ್ರೀ ಶ್ರೀ ೧೦೦೮ ಶ್ರೀಸುಶಮೀಂದ್ರತೀರ್ಥ ಶ್ರೀಗಳವರು ಕಾರ್ಯರೂಪದಲ್ಲಿ ತರುತ್ತಿರುವಲ್ಲಿ ಶ್ರೀಪಾದಪುತ್ರ ಶ್ರೀ ರಾಜಾ ವ್ಹಿ. ಕೃಷ್ಣಾಚಾರ್ಯರ, ರಾಜಾ ಎಸ್. ಗಿರಿ ಆಚಾರ್ಯರ ಹಾಗೂ ಶ್ರೀ ರಾಜಾ ಎಸ್. ಪವಮಾನಾಚಾರ್ಯರ ಪಾತ್ರ ಪ್ರಮುಖವಾದುದೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಹತ್ತಿರದಿಂದ ಕಂಡವನಾದ್ದರಿಂದ ಸತ್ಯಸಂಗತಿಯನ್ನು ಧೈರ್ಯದಿಂದ ಬರೆದಿದ್ದೇನೆ. ಶ್ರೀ ಶ್ರೀ ಗುರುಸಾರ್ವಭೌಮರ

ಅನುಗ್ರಹವಿಶೇಷವಿರುವದರಿಂದಲೇ ಅವರಿಂದ ಶ್ರೀಮಠದಲ್ಲಿ ಇಂಥ ಜ್ಞಾನಕಾರ್ಯಗಳು ಅವ್ಯಾಹತವಾಗಿ ನಡೆಯುತ್ತಲಿವೆ. ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ವಿದ್ಯಾಪ್ರಸಾರವು ಸುವ್ಯವಸ್ಥಿತವಾಗಿ ನಡೆಯಲಿ ಎಂದು ಸನ್ನಿಧಿಯಲ್ಲಿ ವಿಜ್ಞಾಪಿಸುತ್ತೇನೆ. ಶ್ರೀಗುರುರಾಜರ ಸೇವೆಯಲ್ಲಿ ಭಾಗಿಯಾಗಲು ಈ ಮೂಲಕ ಅವಕಾಶ ಕಲ್ಪಿಸಿಕೊಟ್ಟ ಶ್ರೀಪಾದಪುತ್ರರಾದ ಶ್ರೀರಾಜಾ ವ್ಹಿ. ಕೃಷ್ಣಾಚಾರ್ಯರನ್ನೂ, ಶ್ರೀ ರಾಜಾ ಎಸ್. ಗಿರಿಆಚಾರ್ಯರನ್ನೂ ಹಾಗೂ ಶ್ರೀಪಾದ ಪೌತ್ರ ಶ್ರೀ ರಾಜಾ ಎಸ್. ಪವಮಾನಾಚಾರ್ಯರನ್ನೂ ಈ ಸಂದರ್ಭದಲ್ಲಿ ವಿಶೇಷವಾಗಿ ಅಭಿವಂದಿಸುತ್ತೇನೆ.

ಏಕಾದಶೀಮಹಾತ್ಮೆಯ ಶ್ಲೋಕಗಳಹಸ್ತಪ್ರತಿಯನ್ನು ತಯಾರಿಸುವಲ್ಲಿ ಸಹಕರಿಸಿದ ಶ್ರೀ ಆದೋನಿ ರಾಘವೇಂದ್ರಾಚಾರ್ಯರು ಪ್ರೂಫು ತಿದ್ದುವಲ್ಲಿ ಸಹಕರಿಸಿದ ಕುಟುಂಬದ ಸದಸ್ಯರು, ಟೈಪುಸೆಟು, ಮುದ್ರಣಾದಿಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ ಆಧ್ಯಾತ್ಮಿಕ ಬಂಧುಗಳು ಇವರೆಲ್ಲರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಈ ಗ್ರಂಥದ ಮೂಲ ಹಾಗೂ ಅನುವಾದಗಳಲ್ಲಿ ಏನಾದರೂ ಲೋಪದೋಷಗಳು ಕಂಡು ಬಂದರೆ ಸಹೃದಯ ವಾಚಕರು ಮನ್ನಿಸಿ ಅವುಗಳನ್ನು ನನ್ನ ಗಮನಕ್ಕೆ ತಂದುಕೊಡುವಂತೆ ಸವಿನಯ ಪ್ರಾರ್ಥನೆ ಅಂದರೆ ಮರುಮುದ್ರಣದಲ್ಲಿ ತಿದ್ದಿಕೊಳ್ಳಲು ಅನುಕೂಲವಾಗುವದು.

ಈ ಕೃತಿಯನ್ನು ಅಸ್ಮತ್ ಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸೀತಾಪತಿ ಮೂಲರಾಮಾಭಿನ್ನ ಕುಲಸ್ವಾಮಿ ಶ್ರೀಲಕ್ಷ್ಮೀವೆಂಕಟೇಶನ ಪಾದಾರವಿಂದಗಳಲ್ಲಿ ಭಕ್ತಿಪೂರ್ವಕ ಸಮರ್ಪಿಸುತ್ತೇನೆ.

**ಆ. ರಾ. ಪಂಚಮುಖಿ.**

॥ ಶ್ರೀಃ ॥

# ವಿಷಯಾನುಕ್ರಮಣಿಕಾ

|| ಶ್ರೀ ಗುರುಭ್ಯೋ ನಮಃ ||
|| ಹರಿಃ ಓಂ ||

# || ಏಕಾದಶೀವ್ರತ ಮಾಹಾತ್ಮ್ಯಮ್ ||

**ಸೂತ ಉವಾಚ**

ಅಥ ದ್ವಾದಶಮಾಸೇಷು ಏಕಾದಶ್ಯೋ ಭವಂತಿ ಯಾಃ |
ಅಧಿಕೇ ಮಾಸಿ ಚಾಪ್ಯನ್ಯೇ ಯೇ ಚ ದ್ವೇ ಭವತಃ ಶುಭೇ || ೧ ||

ಏವಂ ಷಡ್ವಿಂಶಸಂಖ್ಯಾಕಾ ಏಕಾದಶ್ಯೋ ಭವಂತಿ ಹಿ |
ತಾಸಾಂ ನಾಮಾನ್ಯಹಂ ವಚ್ಮಿ ಶೃಣುಧ್ವಂ ಸುಸಮಾಹಿತಾಃ || ೨ ||

ಉತ್ಪನ್ನಾ ಮೋಕ್ಷದಾ ಚಾಪಿ ಸಫಲಾ ಪುತ್ರದಾ ತಥಾ |
ಷಟ್ತಿಲಾಖ್ಯಾ ಜಯಾಖ್ಯಾ ಚ ವಿಜಯಾ ऽऽ ಮಲಕೀತಿ ಚ || ೩ ||

ಪಾಪಮೋಚನಿಕಾಖ್ಯಾ ಚ ಕಾಮದಾ ಚ ವರೂಥಿನೀ |
ಮೋಹಿನೀ ಚಾಪರಾಖ್ಯಾ ಚ ನಿರ್ಜಲಾ ಯೋಗಿನೀ ತಥಾ || ೪ ||

ವಿಷ್ಣೋರ್ದೇವಸ್ಯ ಶಯನೀ ಪವಿತ್ರಾ ಪುತ್ರದಾ ತ್ವಜಾ |
ಪರಿವರ್ತಿನೀಂದಿರಾಖ್ಯಾ ತಥಾ ಪಾಪಾಂಕುಶಾ ರಮಾ || ೫ ||

ದೇವೋತ್ಥಾನೀತಿ ಚ ಪ್ರೋಕ್ತಾಶ್ಚತುರ್ವಿಂಶತಿನಾಮಭಿಃ |
ದ್ವೇ ಚಾಪ್ಯಧಿಕಮಾಸಸ್ಯ ಪದ್ಮಿನೀ ಪರಮೇತಿ ಚ || ೬ ||

ಅನ್ವರ್ಥಾನಿ ಚ ನಾಮಾನಿ ಸರ್ವಾಸಾಂ ವಿದ್ಧಿ ನಿಶ್ಚಿತಮ್ |
ತದ್ಧಿ ಸರ್ವಂ ಕಥಾಭಿಸ್ತು ಸ್ಫುಟತೋ ಯಾಸ್ಯತಿ ಧ್ರುವಮ್ || ೭ ||

ವ್ರತಮುದ್ಯಾಪನಂ ಚಾಸಾಂ ಯದಿ ಕರ್ತುಂ ನ ಶಕ್ನುಯಾತ್ |
ತದಾ ಸಂಕೀರ್ತನಾನ್ನಾಮ್ನಾಂ ಸದ್ಯಸ್ತತ್ಫಲಮಾಪ್ನುಯಾತ್ || ೮ ||

# ಮಾರ್ಗಶೀರ್ಷ ಕೃಷ್ಣ ಏಕಾದಶೀ ವ್ರತ ಕಥಾ

**ಸೂತ ಉವಾಚ**

ಏವಂ ಪ್ರೀತ್ಯಾ ಪುರಾ ವಿಪ್ರಾಃ ಶ್ರೀಕೃಷ್ಣೇನ ಪರಂ ವ್ರತಮ್ |
ಮಾಹಾತ್ಮ್ಯಂ ವಿಧಿಸಂಯುಕ್ತಮುಪದಿಷ್ಟಂ ವಿಶೇಷತಃ || ೧ ||

ಉತ್ಪತ್ತಿಂ ಯಃ ಶ್ರುಣೋತ್ಯೇವಮೇಕಾದಶ್ಯಾಂ ದ್ವಿಜೋತ್ತಮ |
ಭುಕ್ತ್ವಾ ಭೋಗಾನನೇಕಾಂಸ್ತು ವಿಷ್ಣುಲೋಕಂ ಪ್ರಯಾತಿ ಸಃ || ೨ ||

**ಪಾರ್ಥ ಉವಾಚ**

ಉಪವಾಸಸ್ಯ ನಕ್ತಸ್ಯ ಏಕಭುಕ್ತಸ್ಯ ಚ ಪ್ರಭೋ |
ಕಿಂ ಪುಣ್ಯಂ ಕಿಂ ವಿಧಾನಂ ಚ ಬ್ರೂಹಿ ಸರ್ವಂ ಜನಾರ್ದನ || ೩ ||

**ಶ್ರೀ ಕೃಷ್ಣ ಉವಾಚ**

ಹೇಮಂತೇ ಚೈವ ಸಂಪ್ರಾಪ್ತೇ ಮಾಸಿ ಮಾರ್ಗಶಿರೇ ಶುಭೇ |
ಶುಕ್ಲಪಕ್ಷೇ ತಥಾ ಪಾರ್ಥ ಏಕಾದಶ್ಯಾಮುಪೋಷಯೇತ್ || ೪ ||

ನಕ್ತಂ ದಶಮ್ಯಾಂ ಕುರ್ಯಾತ್ತು ದಂತಧಾವನಪೂರ್ವಕಮ್ |
ದಿವಸಸ್ಯಾಷ್ಟಮೇ ಭಾಗೇ ಮಂದೀಭೂತೇ ದಿವಾಕರೇ || ೫ ||

---

ಸೂತರು ಹೇಳುತ್ತಾರೆ - "ಭೋ ಶೌನಕಾದಿ ಋಷಿಗಳೇ, ಶ್ರೀಕೃಷ್ಣನಿಂದ ಅನುಗ್ರಹ ಪೂರ್ವಕವಾಗಿ ಹೇಳಲ್ಪಟ್ಟ ಶ್ರೇಷ್ಠ ವ್ರತದ ಉತ್ಪತ್ತಿ, ಆದರ ಮಹಿಮೆ ಮತ್ತು ವಿಧಾನಗಳನ್ನು || ೧ || ಏಕಾದಶಿಯ ದಿನ ಯಾವನು ಭಕ್ತಿಯಿಂದ ಶ್ರವಣ ಮಾಡುವನೋ ಅವನು ಇಹಲೋಕದಲ್ಲಿ ವಿವಿಧ ಭೋಗಗಳನ್ನು ಹೊಂದಿ ಮರಣಾನಂತರ ವಿಷ್ಣುಲೋಕವನ್ನು ಪಡೆಯುತ್ತಾನೆ || ೨ || ಕುಂತೀಪುತ್ರನಾದ ಅರ್ಜುನನು ಅಥವಾ ಧರ್ಮರಾಯನು ಶ್ರೀ ಕೃಷ್ಣನನ್ನು ಕುರಿತು - ಹೇ ಪ್ರಭೋ, ಉಪವಾಸ ವ್ರತ, ನಕ್ತವ್ರತ ಹಾಗೂ ಏಕಭುಕ್ತ ವ್ರತ ಇವುಗಳ ಅನುಷ್ಠಾನದಿಂದ ಬರುವ ಪುಣ್ಯಫಲವೇನು ? ಮತ್ತು ವ್ರತಗಳ ವಿಧಾನವಾವುದು? ಎಂಬುದನ್ನು ತಿಳಿಸಬೇಕು. ಎಂದು ಪ್ರಾರ್ಥಿಸಲು || ೩ || ಶ್ರೀ ಕೃಷ್ಣನು ಹೇಳಿದನು - ಹೇ ಪಾರ್ಥ, ಹೇಮಂತ ಋತುವು ಬರಲು ಮಾರ್ಗಶೀರ್ಷಮಾಸದ ಶುಕ್ಲಪಕ್ಷದ ಏಕಾದಶಿಯ ದಿನ ಉಪವಾಸ ಮಾಡಬೇಕು || ೪ || ದಶಮಿಯ ದಿನ ಹಗಲಿನ ಆನೆಯ ಭಾಗದಲ್ಲಿ ಸೂರ್ಯನ ಪ್ರಕಾಶವು ಕಡಿಮೆಯಾಗುತ್ತಿರಲು ದಂತಧಾವನ ಮಾಡಿಕೊಂಡು ನಕ್ತಭೋಜನನನ್ನು ಮಾಡಬೇಕು ||೫|| ಸಾಯಂಕಾಲದಲ್ಲಿ ಮಾಡುವ ಭೋಜನಕ್ಕೆ

ತತ್ರ ನಕ್ತಂ ವಿಜಾನೀಯಾನ್ನ ನಕ್ತಂ ನಿಶಿ ಭೋಜನಮ್ |
ತತಃ ಪ್ರಭಾತಸಮಯೇ ಸಂಕಲ್ಪಂ ನಿಯತಶ್ಚರೇತ್ || ೬ ||

ಮಧ್ಯಾಹ್ನೇ ಚ ತಥಾ ಪಾರ್ಥ ಶುಚಿಃ ಸ್ನಾತಃ ಸಮಾಹಿತಃ |
ನದ್ಯಾಂ ತಡಾಗೇ ವಾಪ್ಯಾಂ ವಾ ಹ್ಯುತ್ತಮಂ ಮಧ್ಯಮಂ ತ್ವಧಃ || ೭ ||

ಕ್ರಮಾತ್ಜ್ಞೇಯಂ ತಥಾ ಕೂಪೇ ತದಭಾವೇ ಪ್ರಶಸ್ಯತೇ |
ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೆ || ೮ ||

ಮೃತ್ತಿಕೆ ಹರ ಮೇ ಪಾಪಂ ಯನ್ಮಯಾ ಪೂರ್ವಸಂಚಿತಮ್ |
ತ್ವಯಾ ಹತೇನ ಪಾಪೇನ ಗಚ್ಛಾಮಿ ಪರಮಾಂ ಗತಿಮ್ || ೯ ||

ಅನೇನ ಮೃತ್ತಿಕಾಸ್ನಾನಂ ವಿದಧೀತ ವ್ರತೀ ನರಃ |
ನಾಲಪೇತ್ ಪತಿತೈಶ್ಚೋರೈಸ್ತಥಾ ಪಾಖಂಡಿಭಿಃ ಸಹ || ೧೦ ||

ಮಿಥ್ಯಾಪವಾದಿನೋ ದೇವವೇದಬ್ರಾಹ್ಮಣನಿಂದಕಾನ್ |
ಅನ್ಯಾಂಶ್ಚೈವ ದುರಾಚಾರಾನಗಮ್ಯಾಗಾಮಿನಸ್ತಥಾ || ೧೧ ||

---

ನಕ್ತಭೋಜನವೆನ್ನಬೇಕೇ ಹೊರತು ರಾತ್ರಿ ಮಾಡುವ ಭೋಜನಕ್ಕಲ್ಲ. ಅನಂತರ ಮರುದಿನ ಪ್ರಭಾತ ಸಮಯದಲ್ಲಿ ವಿಧಿಪೂರ್ವಕ ಏಕಾದಶೀವ್ರತದ ಸಂಕಲ್ಪ ಮಾಡಿ || ೬ || ನಂತರ ಶುದ್ಧ ಮನಸ್ಕನೂ, ಶಾಂತ ಚಿತ್ತನೂ ಆಗಿದ್ದು ಮಧ್ಯಾಹ್ನ ಸಮಯದಲ್ಲಿ ಸ್ನಾನ ಮಾಡಬೇಕು. ನದೀಸ್ನಾನ, ತಟಾಗಸ್ನಾನ ಮತ್ತು ಇಳಿಯುವ ಬಾವಿಯ ಜಲಸ್ನಾನ ಇವು ಕ್ರಮವಾಗಿ ಉತ್ತಮ, ಮಧ್ಯಮ ಹಾಗೂ ಅಧಮವೆಂದು ತಿಳಿಯಲ್ಪಟ್ಟಿವೆ || ೭ || ಇವು ಯಾವವೂ ಲಭ್ಯವಾಗದಿದ್ದರೆ ಸೇದುವ ಬಾವಿಯ ಜಲವು ಸ್ನಾನಕ್ಕೆ ಸ್ವೀಕಾರ್ಯವಾಗುವದು. ಹೇ ಅಶ್ವಕ್ರಾಂತೆ, ಹೇ ರಥಕ್ರಾಂತೇ, ರೇ ವಿಷ್ಣುಕ್ರಾಂತೇ, ಹೇ ವಸುಂಧರೇ || ೮ || ಹೇ ಮೃತ್ತಿಕೆ, ನನ್ನ ಸಂಚಿತವಾದ ಪಾಪಗಳನ್ನೆಲ್ಲ ನಾಶಪಡಿಸು. ನೀನು ನನ್ನ ಪಾಪಗಳನ್ನು ಕಳೆದರೆ ಮಾತ್ರ ನಾನು ಪರಮಗತಿಯನ್ನು ಹೊಂದಲು ಸಾಧ್ಯವಾಗುವದು || ೯ || ಈ ಪ್ರಕಾರ ಮೃತ್ತಿಕಾ ಪ್ರಾರ್ಥನೆಯನ್ನು ಮಾಡಿ ಏಕಾದಶೀವ್ರತವನ್ನು ಧಾರಣ ಮಾಡಿದ ನರನು ಮೃತ್ತಿಕಾಸ್ನಾನವನ್ನು ಮಾಡಬೇಕು. ಪತಿತರು ಚೋರರ ಹಾಗೂ ಪಾಖಂಡಿಗಳು || ೧೦ || ಮಿಥ್ಯಾವಾದಿಗಳು, ದೇವ, ವೇದ ಹಾಗೂ ಬ್ರಾಹ್ಮಣ ನಿಂದಕರು ಇವರೊಂದಿಗೆ ಆ ದಿನ ಸಂಭಾಷಣಾದಿಗಳನ್ನು ಮಾಡಬಾರದು. ಇದರಂತೆ ಇತರ ದುರಾಚಾರಿಗಳು, ಅಗಮ್ಯ ಸ್ತ್ರೀಯರ ಗಮನ ಮಾಡುವವರು || ೧೧ || ಪರರ ದ್ರವ್ಯವನ್ನು ಅಪಹರಿಸುವವರು ಹಾಗೂ ದೇವದ್ರವ್ಯವನ್ನು ಅಪಹರಿಸುವವರು ಇವರೇ ಮೊದಲಾದವರೊಂದಿಗೂ ಕೂಡ ಮಾತನಾಡಬಾರದು. ಒಂದು ಸಮಯ ಇವರಲ್ಲಿ ಯಾರೊಬ್ಬರೊಂದಿಗಾದರೂ ಮಾತನಾಡಿದರೆ ಪ್ರಾಯಶ್ಚಿತ್ತಕ್ಕಾಗಿ

ಪರದ್ರವ್ಯಾಪಹರ್ತೄಂಶ್ಚ ದೇವದ್ರವ್ಯಾಪಹಾರಿಣಃ |
ವ ಸಂಭಾಷೇತ ದೃಷ್ಟ್ವಾಽಪಿ ಭಾಸ್ಕರಂ ಚಾವಲೋಕಯೇತ್ || ೧೨ ||

ತತೋ ಗೋವಿಂದಮಭ್ಯರ್ಚ್ಯ ನೈವೇದ್ಯಾದಿಭಿರಾದರಾತ್ |
ದೀಪಂ ದದ್ಯಾದ್ ಗೃಹೇ ಚೈವ ಭಕ್ತಿಯುಕ್ತೇನ ಚೇತಸಾ || ೧೩ ||

ತದ್ದಿನೇ ವರ್ಜಯೇತ್ ಪಾರ್ಥ ನಿದ್ರಾಂ ಮೈಥುನಮೇವ ಚ |
ಗೀತಾಶಾಸ್ತ್ರವಿನೋದೇನ ದಿವಾರಾತ್ರಂ ನಯೇದ್ವ್ರತೀ || ೧೪ ||

ರಾತ್ರೌ ಜಾಗರಣಂ ಕೃತ್ವಾ ಭಕ್ತಿಯುಕ್ತೇನ ಚೇತಸಾ |
ವಿಪ್ರೇಭ್ಯೋ ದಕ್ಷಿಣಾಂ ದತ್ವಾ ಪ್ರಣಿಪತ್ಯ ಕ್ಷಮಾಪಯೇತ್ || ೧೫ ||

ಯಥಾ ಶುಕ್ಲಾ ತಥಾ ಕೃಷ್ಣಾ ಮಾನ್ಯಾ ವೈ ಧರ್ಮತತ್ಪರೈಃ |
ಏಕಾದಶ್ಯೋರ್ದ್ವಯೋ ರಾಜನ್ ವಿಭೇದಂ ನೈವ ಕಾರಯೇತ್ || ೧೬ ||

ಏವಂ ಹಿ ಕುರುತೇ ಯಸ್ತು ಶೃಣು ತಸ್ಯಾಪಿ ಯತ್ಫಲಮ್ |
ಶಂಖೋದ್ಧಾರೇ ನರಃ ಸ್ನಾತ್ವಾ ದೃಷ್ಟ್ವಾ ದೇವಂ ಗದಾಧರಮ್ || ೧೭ ||

ಏಕಾದಶ್ಯುಪವಾಸಸ್ಯ ಕಲಾಂ ನಾರ್ಹಂತಿ ಷೋಡಶೀಮ್ |
ವ್ಯತೀಪಾತೇ ಚ ದಾನಸ್ಯ ಲಕ್ಷಮೇಕಂ ಫಲಂ ಸ್ಮೃತಮ್ || ೧೮ ||

---

ಸೂರ್ಯನಾರಾಯಣನ ದರ್ಶನ ಮಾಡಿಕೊಳ್ಳಬೇಕು ||೧೨|| ಸ್ನಾನಾನಂತರ ಶ್ರೀಹರಿಗೋವಿಂದನನ್ನು ನೈವೇದ್ಯಾದಿಗಳಿಂದ ಪೂಜಿಸಿ ಭಕ್ತಿಯಿಂದ ಮನೆಯಲ್ಲಿ ದೀಪದಾನವನ್ನು ಕೊಡಬೇಕು || ೧೩ || ಹೇ ಪಾರ್ಥ, ವ್ರತಿಯಾದವನು ಆ ದಿನ ರಾತ್ರಿ ನಿದ್ದೆ ಹಾಗೂ ಸ್ತ್ರೀಸಂಗವನ್ನೂ ತ್ಯಜಿಸಬೇಕು. ಹಗಲು ರಾತ್ರಿ ದೇವರ ಕೀರ್ತನೆಗಳನ್ನು ಹಾಡುತ್ತಾ ಶಾಸ್ತ್ರಾರ್ಥ ವಿಚಾರ ಮಾಡುತ್ತ ಕಾಲಕ್ಷೇಪ ಮಾಡಬೇಕು || ೧೪ || ಭಕ್ತಿಯುತನಾಗಿದ್ದು ರಾತ್ರಿ ಜಾಗರಣ ಮಾಡಿ ಮರುದಿನ ಬೆಳಿಗ್ಗೆ ಯೋಗ್ಯ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು ನಮಸ್ಕರಿಸಿ ಜ್ಞಾತಾಜ್ಞಾತದೋಷಪರಿಹಾರಕ್ಕಾಗಿ ಬ್ರಾಹ್ಮಣರ ಕ್ಷಮಾಪಣೆಯನ್ನು ಕೇಳಬೇಕು || ೧೫ || ಪಾರ್ಥ, ಧರ್ಮಾನುಷ್ಠಾನರತರಾದವರಿಂದ ಶುಕ್ಲ ಪಕ್ಷದ ಏಕಾದಶಿಯಂತೆಯೇ ಕೃಷ್ಣಪಕ್ಷದ ಏಕಾದಶಿಯೂ ಕೂಡ ಆಚರಿಸಲ್ಪಡುತ್ತದೆ. ಶುಕ್ಲ ಮತ್ತು ಕೃಷ್ಣಪಕ್ಷಗಳ ಏಕಾದಶಿಗಳಲ್ಲಿ ಯಾವ ಪ್ರಕಾರದ ಭೇದವನ್ನೂ ಮಾಡಬಾರದು || ೧೬ || ಈ ಪ್ರಕಾರವಾಗಿ ಯಾವನು ಆಚರಿಸುವನೋ ಅವನಿಗೆ ಪ್ರಾಪ್ತವಾಗುವ ಫಲವಿಶೇಷವನ್ನು ತಿಳಿಸುವೆನು ಕೇಳು. ಶಂಖೋದ್ಧಾರವೆಂಬ ಕ್ಷೇತ್ರದಲ್ಲಿ ಸ್ನಾನಮಾಡಿ ಗಯಾಗದಾಧರದೇವನ ದರ್ಶನ ಮಾಡಿಕೊಂಡ ಪುರುಷನು || ೧೭ || ಪಡೆಯುವ ಫಲವೂ ಕೂಡ ಏಕಾದಶೀ ಉಪವಾಸ ಫಲದ ೧೬ನೆಯ ಒಂದು ಭಾಗಕ್ಕೂ ಸಮನಾಗುವದಿಲ್ಲ.

ಸಂಕ್ರಾಂತಿಷು ಚತುರ್ಲಕ್ಷಂ ಯೋ ದದಾತಿ ಧನಂಜಯ |
ಕುರುಕ್ಷೇತ್ರೇ ಚ ಯತ್ಪುಣ್ಯಂ ಗ್ರಹಣೇ ಚಂದ್ರಸೂರ್ಯಯೋಃ || ೧೯ ||

ತತ್ಸರ್ವಂ ಲಭತೇ ಯಸ್ತು ಏಕಾದಶ್ಯಾಮುಪೋಷಿತಃ |
ಅಶ್ವಮೇಧಸ್ಯ ಯಜ್ಞಸ್ಯ ಕರಣಾದ್ಯತ್ಫಲಂ ತಭೇತ್ || ೨೦ ||

ತತಃ ಶತಗುಣಂ ಪುಣ್ಯಮೇಕಾದಶ್ಯುಪವಾಸತಃ |
ತಪಸ್ವಿನೋ ಗೃಹೇ ನಿತ್ಯಂ ಲಕ್ಷಂ ಯಸ್ಯ ಚ ಭುಂಜತೇ || ೨೧ ||

ಷಷ್ಟಿ ವರ್ಷಸಹಸ್ರಾಣಿ ತಸ್ಯ ಪುಣ್ಯಂ ಚ ಯದ್ಭವೇತ್ |
ಏಕಾದಶ್ಯುಪವಾಸೇನ ಪುಣ್ಯಂ ಪ್ರಾಪ್ನೋತಿ ಮಾನವಃ || ೨೨ ||

ಗೋಸಹಸ್ರೇ ಚ ಯತ್ಪುಣ್ಯಂ ದತ್ತೇ ವೇದಾಂಗಪಾರಗೇ |
ತಸ್ಮಾತ್ಪುಣ್ಯಂ ದಶಗುಣಮೇಕಾದಶ್ಯುಪವಾಸಿನಾಮ್ || ೨೩ ||

ನಿತ್ಯಂ ಚ ಭುಂಜತೇ ಯಸ್ಯ ದಶ ಚೈವ ದ್ವಿಜೋತ್ತಮಾಃ |
ಭವೇತ್ತದ್ವೈ ದಶಗುಣಂ ಭೋಜನೇ ಬ್ರಹ್ಮಚಾರಿಣಃ || ೨೪ ||

---

ವ್ಯತೀಪಾತದಲ್ಲಿ ಕೊಡುವ ದಾನದ ಫಲವು ಒಂದು ಲಕ್ಷ ಪಟ್ಟಾಗಿದ್ದರೆ || ೧೮ || ಸಂಕ್ರಾಂತಿಯ ದಿನಗಳಲ್ಲಿ ಕೊಡುವ ದಾನ ಫಲವು ನಾಲ್ಕು ಲಕ್ಷ ಪಟ್ಟಾಗಿರುತ್ತದೆ. ಇಷ್ಟು ಫಲವಲ್ಲದೇ ಚಂದ್ರಗ್ರಹಣ ಅಥವಾ ಸೂರ್ಯಗ್ರಹಣದ ದಿನ ಕುರುಕ್ಷೇತ್ರದಲ್ಲಿ ಕೊಡುವ ದಾನದಿಂದ ಎಷ್ಟು ಫಲವು ಪ್ರಾಪ್ತವಾಗುವದೋ || ೧೯ || ಅಷ್ಟನ್ನೂ ಏಕಾದಶೀ ಉಪವಾಸ ಮಾಡುವ ಪುರುಷನು ಪಡೆಯುವನು. ಅಶ್ವಮೇಧಯಾಗ ಮಾಡುವದರಿಂದ ಎಷ್ಟು ಪುಣ್ಯಫಲವು ಬರುವದೋ || ೨೦ || ಅದಕ್ಕಿಂತಲೂ ನೂರುಪಟ್ಟು ಅಧಿಕವಾದ ಫಲವು ಏಕಾದಶೀ ವ್ರತಾನುಷ್ಠಾನದಿಂದ ಲಭಿಸುವದು. ಮನೆಯಲ್ಲಿ ನಿತ್ಯ ಒಂದು ಲಕ್ಷ ತಪಸ್ವಿಗಳು ||೨೧|| ೬೦ ಸಹಸ್ರ ವರ್ಷಗಳವರೆಗೆ ಭೋಜನ ಮಾಡುವುದರಿಂದ ಎಷ್ಟು ಪುಣ್ಯವು ಬರುವದೋ ಅಷ್ಟನ್ನು ಏಕಾದಶೀ ವ್ರತಾನುಷ್ಠಾನ ಮಾಡುವ ಮನುಷ್ಯನು ಪಡೆಯುವನು || ೨೨ || ವೇದ ವೇದಾಂಗಗಳನ್ನು ಬಲ್ಲ ವಿದ್ವಾಂಸನಿಗೆ ಒಂದು ಸಹಸ್ರಗೋವುಗಳ ದಾನವನ್ನು ಕೊಡುವುದರಿಂದ ಬರುವ ಪುಣ್ಯದ ಹತ್ತು ಪಟ್ಟು ಅಧಿಕವಾದ ಪುಣ್ಯವು ಏಕಾದಶೀವ್ರತಿಗೆ ಲಭಿಸುವದು || ೨೩ || ಯಾವನ ಮನೆಯಲ್ಲಿ ನಿತ್ಯ ಹತ್ತು ಶ್ರೇಷ್ಠ ಬ್ರಾಹ್ಮಣರು ಭೋಜನ ಮಾಡುವರೋ ಅವನು ಪಡೆಯುವ ಪುಣ್ಯಕ್ಕಿಂತಲೂ ಹತ್ತು ಪಟ್ಟು ಅಧಿಕವಾದ ಪುಣ್ಯವು ಒಬ್ಬ ಬ್ರಹ್ಮಚಾರಿಯ ಭೋಜನದಿಂದ ದೊರೆಯುವುದು || ೨೪ || ಭೂದಾನದಿಂದ ಇದಕ್ಕಿಂತ ಸಾವಿರಪಟ್ಟು ಅಧಿಕವಾದ ಪುಣ್ಯವೂ, ಕನ್ಯಾದಾನದಿಂದ ಇನ್ನೂ ಅಧಿಕಪುಣ್ಯವೂ ಲಭಿಸುವದು. ವಿದ್ಯಾದಾನದಿಂದಲಂತೂ ಕನ್ಯಾದಾನಕ್ಕಿಂತ ಹತ್ತು ಪಟ್ಟು ಹೆಚ್ಚಿನ ಪುಣ್ಯವು

ಏತತ್ಸಹಸ್ರಂ ಭೂದಾನೇ ಕನ್ಯಾದಾನೇ ತತಃ ಸ್ಮೃತಮ್ |
ತಸ್ಮಾದ್ದಶಗುಣಂ ಪ್ರೋಕ್ತಂ ವಿದ್ಯಾದಾನೇ ತಥೈವ ಚ || ೨೫ ||

ವಿದ್ಯಾದಶಗುಣಂ ಚಾನ್ನಂ ಯೋ ದದಾತಿ ಬುಭುಕ್ಷಿತೇ |
ಅನ್ನದಾನಸಮಂ ದಾನಂ ನ ಭೂತಂ ನ ಭವಿಷ್ಯತಿ || ೨೬ ||

ತೃಪ್ತಿಮಾಯಾಂತಿ ಕೌಂತೇಯ ಸ್ವರ್ಗಸ್ಥಾಃ ಪಿತೃದೇವತಾಃ |
ಏಕಾದಶೀವ್ರತಸ್ಯಾಪಿ ಪುಣ್ಯಸಂಖ್ಯಾ ನ ವಿದ್ಯತೇ || ೨೭ ||

ಏತತ್ಪುಣ್ಯಪ್ರಭಾವಶ್ಚ ಯತ್ಸುರೈರಪಿ ದುರ್ಲಭಃ |
ನಕ್ತಸ್ಯಾರ್ಧಂ ಫಲಂ ತಸ್ಯ ಏಕಭುಕ್ತಸ್ಯ ಸತ್ತಮ || ೨೮ ||

ಏಕಭುಕ್ತಂ ಚ ನಕ್ತಂ ಚ ಉಪವಾಸಸ್ತಥೈವ ಚ |
ಏತೇಷ್ವನ್ಯತಮಂ ವಾಪಿ ವ್ರತಂ ಕುರ್ಯಾದ್ಧರೇರ್ದಿನೇ || ೨೯ ||

ತಾವದ್ಗರ್ಜಂತಿ ತೀರ್ಥಾನಿ ದಾನಾನಿ ನಿಯಮಾಃ ಯಮಾಃ |
ಏಕಾದಶೀ ನ ಸಂಪ್ರಾಪ್ತಾ ಯಾವತ್ತಾವನ್ಮಖಾ ಅಪಿ || ೩೦ ||

ತಸ್ಮಾದೇಕಾದಶೀ ಸರ್ವೈರುಪೋಷ್ಯಾ ಭವಭೀರುಭಿಃ |
ನ ಶಂಖೇನ ಪಿಬೇತ್ತೋಯಂ ನ ಹನ್ಯಾನ್ಮತ್ಸ್ಯಸೂಕರಾನ್ || ೩೧ ||

ದೊರೆಯುವದು || ೨೫ || ವಿದ್ಯಾದಾನಕ್ಕಿಂತ ಹತ್ತು ಪಟ್ಟು ಪುಣ್ಯವನ್ನು ಹಸಿದವನಿಗೆ ಅನ್ನವನ್ನು ನೀಡುವವನು ಪಡೆಯುವನು. ಅನ್ನದಾನಕ್ಕೆ ಸಮಾನವಾದ ಬೇರೊಂದು ದಾನವು ಈ ಹಿಂದೆ ಕಂಡಿರುವದಿಲ್ಲ ಮತ್ತು ಇನ್ನು ಮುಂದೆ ಆಗುವದೂ ಇಲ್ಲ || ೨೬ || ಹೇ ಕೌಂತೇಯ, ಸ್ವರ್ಗದಲ್ಲಿರುವ ಪಿತೃದೇವತೆಗಳು ಅನ್ನದಾನದಿಂದ ತೃಪ್ತಿಯನ್ನು ಹೊಂದುವರು. ಏಕಾದಶೀವ್ರತದ ಪುಣ್ಯವು ಇಷ್ಟೇ ಎಂದು ಹೇಳುವದು ಸಾಧ್ಯವಿಲ್ಲ ||೨೭|| ಈ ವ್ರತದ ಪುಣ್ಯಪ್ರಭಾವವು ದೇವತೆಗಳಿಗೂ ದುರ್ಲಭವಾಗಿರುವದು. ನಕ್ತವ್ರತ ಅಥವಾ ಏಕಭುಕ್ತವ್ರತಗಳನ್ನು ಮಾಡುವವರಿಗೆ ಏಕಾದಶೀವ್ರತದ ಅರ್ಧದಷ್ಟು ಪುಣ್ಯವು ಲಭಿಸುವದು ||೨೮|| ಒಪ್ಪತ್ತು ಫಲಾಹಾರ ಸೇವಿಸಿ, ಅಥವಾ ರಾತ್ರಿ ಫಲಾಹಾರ ಸೇವಿಸಿ ಅಥವಾ ಇಡೀ ದಿನ ಉಪವಾಸದಿಂದ ಇದ್ದು ಹರಿದಿನವಾದ ಏಕಾದಶೀ ವ್ರತಾನುಷ್ಠಾನವನ್ನು ಮಾಡಬೇಕು || ೨೯ || ಏಕಾದಶೀ ದಿನವು (ಹರಿದಿನವು) ಬರುವವರೆಗೆ ಮಾತ್ರ ತೀರ್ಥಗಳು, ದಾನಗಳು, ಯಮನಿಯಮಗಳು, ಹಾಗೂ ಯಜ್ಞಗಳು ತಮ್ಮ ಶ್ರೇಷ್ಠತೆಯಿಂದ ಮೆರೆಯುತ್ತಿರುತ್ತವೆ || ೩೦ || ಸಂಸಾರದಲ್ಲಿಯ ದುಃಖಗಳಿಂದ ಭೀತರಾಗಿ ಇದರಿಂದ ಮುಕ್ತಿಯನ್ನು ಪಡೆಯಲಿಚ್ಛಿಸುವ ಭವಭೀರುಗಳೆಲ್ಲರೂ ಅವಶ್ಯವಾಗಿ ಏಕಾದಶಿಯ ದಿನ ಉಪವಾಸದಿಂದ ಇರಬೇಕು. ಆ ದಿನ ಶಂಖದಿಂದ ನೀರನ್ನು ಕುಡಿಯಬಾರದು, ಮೀನು, ಹಂದಿಗಳನ್ನು

ಏಕಾದಶ್ಯಾಂ ನ ಭುಂಜೀತ ಯನ್ಮಾಂ ತ್ವಂ ಪೃಚ್ಛಸೇಽರ್ಜುನ |
ಏತತ್ತೇ ಕಥಿತಂ ಸರ್ವಂ ವ್ರತಾನಾಮುತ್ತಮಂ ವ್ರತಮ್ || ೩೨ ||

ಅರ್ಜುನ ಉವಾಚ

ಏಕಾದಶೀಸಮಂ ನಾಸ್ತಿ ಕೃತ್ವಾ ಯಜ್ಞಸಹಸ್ರಕಮ್ |
ಉಕ್ತಾ ತ್ವಯಾ ಕಥಂ ದೇವ ಪುಣ್ಯೇಯಂ ಸರ್ವತಸ್ತಿಥಿಃ || ೩೩ ||

ಶ್ರೀ ಕೃಷ್ಣ ಉವಾಚ

ಸರ್ವೇಭ್ಯೋಽಪಿ ಪವಿತ್ರೇಯಂ ಕಥಂ ಹ್ಯೇಕಾದಶೀ ತಿಥಿಃ |
ಪುರಾ ಕೃತಯುಗೇ ಪಾರ್ಥ ಮುರನಾಮಾ ಹಿ ದಾನವಃ || ೩೪ ||

ಅತ್ಯದ್ಭುತೋ ಮಹಾರೌದ್ರಃ ಸರ್ವದೇವಭಯಂಕರಃ |
ಇಂದ್ರೋಽಪಿ ನಿರ್ಜಿತಸ್ತೇನ ಹ್ಯಾದ್ಯೋ ದೇವಃ ಪುರಂದರಃ || ೩೫ ||

ಆದಿತ್ಯಾ ವಸವೋ ಬ್ರಹ್ಮಾ ವಾಯುರಗ್ನಿಸ್ತಥೈವ ಚ |
ದೇವತಾ ನಿರ್ಜಿತಾಸ್ತೇನ ಹ್ಯತ್ಯುಗ್ರೇಣ ಚ ಪಾಂಡವ || ೩೬ ||

ಇಂದ್ರೇಣ ತಥಿತಃ ಸರ್ವೋ ವೃತ್ತಾಂತಃ ಶಂಕರಾಯ ವೈ |
ಸರ್ವಲೋಕಪರಿಭ್ರಷ್ಟಾ ವಿಚರಾಮೋ ಮಹೀತಲೇ || ೩೭ ||

---

ಕೊಲ್ಲಬಾರದು || ೩೧ || ಏಕಾದಶಿಯ ದಿನ ಆಹಾರವನ್ನು ಸೇವಿಸಬಾರದು. ಹೇ ಅರ್ಜುನಾ, ನೀನು ಕೇಳಿದ ಸರ್ವವಿಷಯವನ್ನು ತಿಳಿಸಿದ್ದೇನೆ. ಏಕಾದಶೀ ವ್ರತವು ಸಕಲವ್ರತಗಳಲ್ಲಿ ಅತಿ ಶ್ರೇಷ್ಠವಾಗಿದೆ || ೩೨ || ಶ್ರೀ ಕೃಷ್ಣನು ಇದವರೆಗೆ ತಿಳಿಸಿದ ವಿಷಯಗಳನ್ನು ಏಕಚಿತ್ತದಿಂದ ಕೇಳಿದ ಅರ್ಜುನನು ಹೇ ದೇವಾ, ಸಹಸ್ರಯಜ್ಞಗಳಿಗಿಂತಲೂ ಏಕಾದಶೀ ತಿಥಿಯು ಶ್ರೇಷ್ಠವಾದುದೆಂದು ನೀನು ತಿಳಿಸಿದೆಯಷ್ಟೇ. ಇತರ ಎಲ್ಲ ತಿಥಿಗಳಿಗಿಂತಲೂ ಈ ಏಕಾದಶಿಯೇ ಅದೆಂತು ಶ್ರೇಷ್ಠವಾದುದು ಎಂಬುದನ್ನು ತಿಳಿಸಬೇಕು ಎಂದು ಪ್ರಾರ್ಥಿಸಲು || ೩೩ || ಶ್ರೀಕೃಷ್ಣನು ಹೇಳಿದನು ಹೇ ಪಾರ್ಥ ಎಲ್ಲಕ್ಕಿಂತಲೂ ಏಕಾದಶಿಯು ಅದೆಂತು ಶ್ರೇಷ್ಠವಾದುದು ಎಂಬುದನ್ನು ತಿಳಿಸುವೆನು ಕೇಳು. ಹಿಂದಕ್ಕೆ ಕೃತಯುಗದಲ್ಲಿ ಮುರ ಎಂಬ ಹೆಸರಿನ ದಾನವನಿದ್ದನು. ಅತ್ಯದ್ಭುತನೂ, ರೌದ್ರರೂಪಿಯೂ ಆದ ಅವನು ಎಲ್ಲ ದೇವತೆಗಳಿಗೆ ಭಯಂಕರನಾಗಿದ್ದನು. ಆ ದಾನವನು ಸ್ವರ್ಗಾಧಿಪತಿಯಾದ ಇಂದ್ರನನ್ನೂ ಕೂಡ ಗೆದ್ದು ಬಿಟ್ಟಿದ್ದನು || ೩೫ || ಅತ್ಯುಗ್ರನಾದ ಅವನು ಆದಿತ್ಯರು, ವಸುಗಳು, ಬ್ರಹ್ಮಾ, ಭೂತವಾಯು ಅಗ್ನಿ ಹಾಗೂ ಇತರೆಲ್ಲ ದೇವತೆಗಳನ್ನೂ ಸೋಲಿಸಿದನು || ೩೬ || ಇಂದ್ರನು ತನ್ನ ಹಾಗೂ ತನ್ನವರ ವೃತ್ತಾಂತವನ್ನೆಲ್ಲ ಶಂಕರನಿಗೆ ನಿವೇದಿಸಿದನು - ಹೇ ಶಂಕರದೇವಾ,

ಉಪಾಯಂ ಬ್ರೂಹಿ ಮೇ ದೇವ ತ್ರಿದಶಾನಾಂ ತು ಕಾ ಗತಿಃ |
**ಈಶ್ವರ ಉವಾಚ**
ಗಚ್ಛ ಗಚ್ಛ ಸುರಶ್ರೇಷ್ಠ ಯತ್ರಾಸ್ತಿ ಗರುಡಧ್ವಜಃ || ೩೮ ||

ಶರಣ್ಯಶ್ಚ ಜಗನ್ನಾಥಃ ಪರಿತ್ರಾಣಪರಾಯಣಃ |
ಈಶಸ್ಯ ವಚನಂ ಶ್ರುತ್ವಾ ದೇವರಾಜೋ ಮಹಾಮನಾಃ || ೩೯ ||

ತ್ರಿದಶೈಃ ಸಹಿತಃ ಸರ್ವೈರ್ಗತಸ್ತತ್ರ ಧನಂಜಯ |
ಯತ್ರ ದೇವೋ ಜಗನ್ನಾಥಃ ಪ್ರಸುಪ್ತೋ ಹಿ ಜನಾರ್ದನಃ || ೪೦ ||

ಜಲಮಧ್ಯೇ ಪ್ರಸುಪ್ತಂ ತು ದೃಷ್ಟ್ವಾ ದೇವಂ ಜಗತ್ಪತಿಮ್ |
ಕೃತಾಂಜಲಿಪುಟೋ ಭೂತ್ವಾ ಇದಂ ಸ್ತೋತ್ರಮುದೀರಯತ್ || ೪೧ ||

ಓಂ ನಮೋಽಸ್ತು ದೇವದೇವಾಯ ದೇವದೇವೈಃ ಸುವಂದಿತ |
ದೈತ್ಯಾರೇ, ಪುಂಡರೀಕಾಕ್ಷ, ತ್ರಾಹಿ ನೋ ಮಧುಸೂದನ || ೪೨ ||

ದೈತ್ಯಭೀತಾ ಇಮೇ ದೇವಾ ಮಯಾ ಸಹ ಸಮಾಗತಾಃ |
ಶರಣಂ ತ್ವಂ ಜಗನ್ನಾಥ ತ್ವಂ ಕರ್ತಾ ತ್ವಂ ಚ ಕಾರಕಃ || ೪೩ ||

---

ನಮ್ಮ ನಮ್ಮ ಸ್ಥಾನಗಳಿಂದ ಪರಿಭ್ರಷ್ಟರಾಗಿ ನಾವೆಲ್ಲ ಭೂಮಿಯಲ್ಲಿ ದಿಕ್ಕಿಲ್ಲದೇ ಸಂಚರಿಸುತ್ತಿದ್ದೇವೆ || ೩೭ || ದೇವತೆಗಳಿಗೆ ಮುಂದೆ ಯಾರು ಗತಿ ಎಂಬುದನ್ನು ತಿಳಿಸು. ಏನಾದರೊಂದು ಉಪಾಯವನ್ನು ಸೂಚಿಸು ಹೀಗೆ ಇಂದ್ರನು ನುಡಿಯಲು, ಈಶ್ವರನು ಹೇಳಿದನು ಹೇ ದೇವೇಂದ್ರಾ, ನೀನು ಗರುಡಧ್ವಜನಾದ ಶ್ರೀನಾರಾಯಣನು ಇರುವಲ್ಲಿ ಹೋಗು || ೩೮ || ಶ್ರೀ ಹರಿಜಗನ್ನಾಥನೇ ನಿಮಗೆ ಗತಿ. ಅವನೇ ಪಾಲನೆ ಮಾಡುವಲ್ಲಿ ಸಮರ್ಥನಾಗಿದ್ದಾನೆ. ಈಶ್ವರನ ಮಾತುಗಳನ್ನು ಕೇಳಿ ಮಹಾತ್ಮನಾದ ದೇವೇಂದ್ರನು ||೩೯|| ಎಲ್ಲ ದೇವತೆಗಳಿಂದ ಕೂಡಿಕೊಂಡು ಶ್ರೀ ನಾರಾಯಣನು ಮಲಗಿಕೊಂಡಿರುವ ಸ್ಥಳಕ್ಕೆ ಹೋದನು || ೪೦ || ಜಲಮಧ್ಯದಲ್ಲಿ ಶೇಷಶಾಯಿಯಾಗಿ ಮಲಗಿಕೊಂಡಿರುವ ಜಗತ್ಪತಿ ಶ್ರೀಮನ್ನಾರಾಯಣನನ್ನು ಕಂಡ ಇಂದ್ರನು ಕೈಜೋಡಿಸಿಕೊಂಡು ಸ್ತುತಿಸಲು ಪ್ರಾರಂಭಿಸಿದನು || ೪೧ || ದೇವಾಧಿದೇವತೆಗಳಿಂದ ವಂದಿತನಾದ ದೇವದೇವೋತ್ತಮ ದೇವಶಿಖಾಮಣಿಯಾದ ಶ್ರೀ ಹರೇ ನಿನಗೆ ನಮಸ್ಕಾರಗಳು. ಭೋ ದೈತ್ಯಾರಿಯಾದ, ಮಧುನಾಮಕ ದೈತ್ಯನ ಸಂಹಾರಿಯಾದ ಪುಂಡರೀಕಾಕ್ಷ ಪ್ರಭೋ ನಮ್ಮೆಲ್ಲರನ್ನೂ ಸಂರಕ್ಷಿಸು || ೪೨ || ಮುರನಾಮಕ ದೈತ್ಯನಿಂದ ಭೀತರಾದ ಈ ದೇವತೆಗಳೆಲ್ಲರೂ ನನ್ನೊಂದಿಗೆ ನಿನಗೆ ಶರಣು ಬಂದಿದ್ದಾರೆ. ಹೇ ದೇವೋತ್ತಮಾ, ನೀನೇ ನಮಗೆ ಗತಿಯಾಗಿರುವಿ. ಕರ್ತೃ ಹಾಗೂ ಕಾರಕ ನೀನೇ ಆಗಿರುವಿ || ೪೩ || ಸಕಲ ಲೋಕಗಳಿಗೆಲ್ಲ ನೀನೇ ನಿಜವಾದ ತಾಯಿಯೂ, ತಂದೆಯೂ

ತ್ವಂ ಮಾತಾ ಸರ್ವಲೋಕಾನಾಂ ತ್ವಮೇವ ಜಗತಃ ಪಿತಾ |
ತ್ವಂ ಸ್ಥಿತಿಸ್ತ್ವಂ ತಥೋತ್ಪತ್ತಿಸ್ತ್ವಂ ಚ ಸಂಹಾರಕಾರಕಃ || ೪೪ ||

ಸಹಾಯಸ್ತ್ವಂ ಚ ದೇವಾನಾಂ ತ್ವಂ ಚ ಶಾಂತಿಕರಃ ಪ್ರಭೋ |
ತ್ವಂ ಧರಾ ಚ ತ್ವಮಾಕಾಶಃ ಸರ್ವವಿಶ್ವೋಪಕಾರಕಃ || ೪೫ ||

ಭವಸ್ತ್ವಂ ಚ ಸ್ವಯಂ ಬ್ರಹ್ಮಾ ತ್ರೈಲೋಕ್ಯಪ್ರತಿಪಾಲಕಃ |
ತ್ವಂ ರವಿಸ್ತ್ವಂ ಶಶಾಂಕಶ್ಚ ತ್ವಂ ಚ ದೇವೋ ಹುತಾಶನಃ || ೪೬ ||

ಹವ್ಯಂ ಹೋಮೋ ಹುತಸ್ತ್ವಂ ಚ ಮಂತ್ರತಂತ್ರರ್ತ್ವಿಜೋ ಜಪಃ |
ಯಜ್ಞಸ್ತ್ವಂ ಯಜಮಾನಶ್ಚ ಫಲಭೋಕ್ತಾ ತ್ವಮೀಶ್ವರಃ || ೪೭ ||

ನ ತ್ವಯಾ ರಹಿತಂ ಕಿಂಚಿತ್ ತ್ರೈಲೋಕ್ಯೇ ಸಚರಾಚರೇ |
ಭಗವನ್ ದೇವದೇವೇಶ ಶರಣಾಗತವತ್ಸಲ || ೪೮ ||

ತ್ರಾಹಿ ತ್ರಾಹಿ ಮಹಾಯೋಗಿನ್ ಭೀತಾನಾಂ ಶರಣಂ ಭವ |
ದಾನವೈರ್ನಿರ್ಜಿತಾ ದೇವಾಃ ಸ್ವರ್ಗಭ್ರಷ್ಟಾಃ ಕೃತಾ ವಿಭೋ || ೪೯ ||

ಸ್ಥಾನಭ್ರಷ್ಟಾ ಜಗನ್ನಾಥ ವಿಚರಂತಿ ಮಹೀತಲೇ |
ಇಂದ್ರಸ್ಯ ವಚನಂ ಶ್ರುತ್ವಾ ವಿಷ್ಣುರ್ವಚನಮಬ್ರವೀತ್ || ೫೦ ||

---

ಆಗಿರುವಿ ನೀನೇ ಎಲ್ಲ ಲೋಕಗಳ ಸೃಷ್ಟಿ, ಸ್ಥಿತಿ, ಸಂಹಾರಗಳಿಗೆ ಮುಖ್ಯ ಕಾರಣನಾಗಿರುವಿ || ೪೪ || ದೇವತೆಗಳಿಗೆಲ್ಲ ನೀನೇ ರಕ್ಷಕನೂ, ಶಾಂತಿಪ್ರದನೂ ಆಗಿರುವಿ. ನೀನೇ ಭೂಮಿ ಹಾಗೂ ಆಕಾಶಗಳಾಗಿರುವಿ, ಸರ್ವವಿಶ್ವಕ್ಕೆ ಉಪಕಾರಕನಾಗಿರುವಿ || ೪೫ || ನೀನು ಸ್ವಯಂ ಬ್ರಹ್ಮಾ ಹಾಗೂ ರುದ್ರನಾಗಿರುವಿ ಮತ್ತು ತ್ರಿಲೋಕಪಾಲಕನಾಗಿರುವಿ. ಸೂರ್ಯ, ಚಂದ್ರ, ಅಗ್ನಿ ದೇವ ಎಲ್ಲ ನೀನೇ ಆಗಿರುವಿ || ೪೬ || ಹೇ ಪ್ರಭೋ, ಹವಿಸ್ಸು, ಹೋಮ, ಆಹುತಿ, ಮಂತ್ರ, ತಂತ್ರ, ಋತ್ವಿಕ್, ಜಪ, ಯಜ್ಞ, ಯಜಮಾನ, ಫಲಭೋಕ್ತಾ ಎಲ್ಲವೂ ನೀನೇ ಆಗಿರುವಿ || ೪೭ || ಈ ಚರಾಚರಪ್ರಪಂಚದಲ್ಲಿ ನೀನಿಲ್ಲದೇ ಯಾವುದೂ ಇಲ್ಲ ಹೇ ಭಗವನ್, ದೇವದೇವೇಶಾ, ಶರಣಾಗತವತ್ಸಲಾ || ೪೮ || ನಮ್ಮೆಲ್ಲರನ್ನೂ ರಕ್ಷಿಸು, ಪ್ರಭೋ ರಕ್ಷಿಸು. ಹೇ ಮಹಾಯೋಗಿನ್, ಭೀತರಾದ ನಮಗೆ ನೀನು ರಕ್ಷಕನಾಗು. ಹೇ ವಿಭೋ, ನಾವೆಲ್ಲ ದಾನವರಿಂದ ಸೋಲಿಸಲ್ಪಟ್ಟವರಾಗಿ ಸ್ವರ್ಗಭ್ರಷ್ಟರಾಗಿದ್ದೇವೆ || ೪೯ || ಸ್ಥಾನಭ್ರಷ್ಟರಾದ ನಾವು ದಿಕ್ಕಿಲ್ಲದೇ ಭೂಲೋಕದಲ್ಲಿ ಸಂಚರಿಸುತ್ತಿದ್ದೇವೆ. ಇಂದ್ರನ ಈ ವಚನಗಳನ್ನು ಕೇಳಿದ ವಿಷ್ಣುವು || ೫೦ || ಹೇ ಇಂದ್ರಾ, ಮಹಾಮಾಯಾವಿಯಾದ ಆದಾವ ದೈತ್ಯನಿಂದ ದೇವತೆಗಳೆಲ್ಲ ಸೋಲಿಸಲ್ಪಟ್ಟಿರುವರು ? ಅವನ ಹೆಸರೇನು ? ಅವನ ವಾಸಸ್ಥಾನವಾವುದು

ಶ್ರೀಭಗವಾನುವಾಚ

ಕೋಽಸೌ ದೈತ್ಯೋ ಮಹಾಮಾಯೋ ದೇವಾ ಯೇನ ವಿನಿರ್ಜಿತಾಃ |
ಕಿಂ ಸ್ಥಾನಂ ತಸ್ಯಕಿಂ ನಾಮ ಕಿಂ ಬಲಂ ಕಸ್ತದಾಶ್ರಯಃ || ೫೧ ||

ಏತತ್ಸರ್ವಂ ಸಮಾಚಕ್ಷ್ವ ಮಘವನ್ನಿರ್ಭಯೋ ಭವ |
ಇಂದ್ರ ಉವಾಚ
ಭಗವನ್ ದೇವದೇವೇಶ ಭಕ್ತಾನುಗ್ರಹಕಾರಕ || ೫೨ ||

ದೈತ್ಯಃ ಪೂರ್ವಂ ಮಹಾನ್ನಾಸೀನ್ನಾಡೀಜಂಘ ಇತಿ ಸ್ಮೃತಃ |
ಬ್ರಹ್ಮವಂಶಸಮುಧ್ಭೂತೋ ಮಹೋಗ್ರಃ ಸುರಸೂದನಃ || ೫೩ ||

ತಸ್ಯ ಪುತ್ರೋಽತಿವಿಖ್ಯಾತೋ ಮುರನಾಮಾ ಮಹಾಸುರಃ |
ತಸ್ಯ ಚಂದ್ರವತೀ ನಾಮ ನಗರೀ ಚ ಗರಿಯಸೀ || ೫೪ ||

ತಸ್ಯಾಂ ವಸನ್ ಸ ದುಷ್ಟಾತ್ಮಾ ವಿಶ್ವಂ ನಿರ್ಜಿತ್ಯ ವೀರ್ಯವಾನ್ |
ಸುರಾನ್ ಸ್ವವಶಮಾನಿನ್ಯೇ ನಿರಾಕೃತ್ಯ ತ್ರಿವಿಷ್ಟಪಾನ್ || ೫೫ ||

ಇಂದ್ರಾಗ್ನಿಯಮವಾಯ್ವೀಶಸೋಮನಿರ್ಋತಿಪಾಶಿನಾಮ್ |
ಪದೇಷು ಸ್ವಯಮೇವಾಸೀತ್ ಸೂರ್ಯೋ ಭೂತ್ವಾ ತಪತ್ಯಪಿ || ೫೬ ||

ಪರ್ಜನ್ಯಃ ಸ್ವಯಮೇವಾಸೀದಜೇಯಃ ಸರ್ವದೈವತೈಃ |
ಜಹಿ ತಂ ದಾನವಂ ವಿಷ್ಣೋ ಸುರಾಣಾಂ ಜಯಮಾವಹ || ೫೭ ||

? ಅವನಬಲವೆಷ್ಟು ? ಈಗ ಅವನ ಆಶ್ರಯವೆಲ್ಲಿ ? || ೫೧ || ಇದೆಲ್ಲವನ್ನು ತಿಳಿಸು. ಇಂದ್ರಾ, ಹೆದರಬೇಡ. ಎಂದೆನಲು ದೇವೇಂದ್ರನು ಹೇಳಿದನು ಹೇ ಭಗವನ್, ದೇವದೇವೋತ್ತಮಾ, ಭಕ್ತಾನುಗ್ರಹಕಾರಿಯೇ || ೫೨ || ಹಿಂದಕ್ಕೆ ನಾಡೀಜಂಘ ಎಂಬ ಹೆಸರಿನ ಒಬ್ಬ ಮಹಾದೈತ್ಯನಿದ್ದನು. ಬ್ರಹ್ಮವಂಶದಲ್ಲಿ ಹುಟ್ಟಿದ ಆವನು ಮಹಾಉಗ್ರನೂ, ದೇವಹಿಂಸಕನೂ ಆಗಿದ್ದನು || ೫೩ || ಅವನ ಮಗನೇ "ಮುರ" ಎಂಬ ಹೆಸರಿನ ಕುಖ್ಯಾತನಾದ ಮಹಾಸುರನಾಗಿದ್ದಾನೆ. ಚಂದ್ರವತೀ ಎಂಬ ಶ್ರೇಷ್ಠವಾದ ಒಂದು ನಗರದಲ್ಲಿ || ೫೪ || ವಾಸಿಸುವ ಆ ದುಷ್ಟನು ವಿಶ್ವವನ್ನೆಲ್ಲ ಗೆದ್ದು, ಸ್ವರ್ಗಲೋಕದಿಂದ ದೇವತೆಗಳನ್ನು ಓಡಿಸಿ ಸ್ವರ್ಗವನ್ನು ಸ್ವಾಧೀನಮಾಡಿಕೊಂಡಿದ್ದಾನೆ || ೫೫ || ಇಂದ್ರ ಇಗ್ನಿ, ಯಮ, ಭೂತವಾಯು, ಈಶ, ಸೋಮ, ನಿಋತಿ, ವರುಣ ಇವರೇ ಮೊದಲಾದವರ ಸ್ಥಾನಗಳಲ್ಲಿ ತಾನೇ ಇದ್ದು ಅವರೆಲ್ಲರ ಅಧಿಕಾರಗಳನ್ನು ಚಲಾಯಿಸುತ್ತಿದ್ದಾನೆ. ತಾನೇ ಸೂರ್ಯನಾಗಿ ಲೋಕಗಳಿಗೆ ಪ್ರಕಾಶವನ್ನು ಕೊಡುತ್ತಿದ್ದಾನೆ || ೫೬|| ತಾನೇ ಪರ್ಜನ್ಯನಾಗಿದ್ದಾನೆ. ಸರ್ವದೇವತೆಗಳಿಂದ ಅಜೇಯನಾಗಿದ್ದಾನೆ. ಹೇ ವಿಷ್ಣೋ, ಆ ದಾನವನನ್ನು ಕೊಂದು ದೇವತೆಗಳಿಗೆ ಜಯವನ್ನು

ತಸ್ಯ ತದ್ವಚನಂ ಶ್ರುತ್ವಾ ಕೋಪಾವಿಷ್ಟೋ ಜನಾರ್ದನಃ |
ಉವಾಚ ಶತ್ರುಂ ದೇವೇಂದ್ರ ಹನಿಷ್ಯೇ ತಂ ಮಹಾಬಲಮ್ || ೫೮ ||

ಪ್ರಯಾಂತು ಸಹಿತಾಃ ಸರ್ವೇ ಚಂದ್ರವತ್ಯಾಂ ಮಹಾಬಲಾಃ |
ಇತ್ಯುಕ್ತಾಃ ಪ್ರಯಯುಃ ಸರ್ವೇ ಪುರಸ್ಕೃತ್ಯ ಹರಿಂ ಸುರಾಃ || ೫೯ ||

ದೃಷ್ಟೋ ದೇವೈಸ್ತು ದೈತ್ಯೇಂದ್ರೋ ಗರ್ಜಮಾನಸ್ತು ದಾನವೈಃ |
ಅಸಂಖ್ಯಾತಸಹಸ್ರೈಸ್ತು ದಿವ್ಯಪ್ರಹರಣಾಯುಧೈಃ || ೬೦ ||

ಹನ್ಯಮಾನಾಸ್ತದಾ ದೇವಾ ಅಸುರೈರ್ಬಾಹುಶಾಲಿಭಿಃ |
ಸಂಗ್ರಾಮಂ ತೇ ಸಮುತ್ಸೃಜ್ಯ ಪಲಾಯಂತ ದಿಶೋ ದಶ || ೬೧ ||

ತತೋ ದೃಷ್ಟ್ವಾ ಹೃಷೀಕೇಶಂ ಸಂಗ್ರಾಮೇ ಸಮುಪಸ್ಥಿತಮ್ |
ಅನ್ವಧಾವನ್ನಭಿಕ್ರುದ್ಧಾ ವಿವಿಧಾಯುಧಪಾಣಯಃ || ೬೨ ||

ಅಥ ತಾನ್ ಪ್ರದ್ರುತಾನ್ ದೃಷ್ಟ್ವಾ ಖಡ್ಗಚಕ್ರಗದಾಧರಃ |
ವಿವ್ಯಾಧ ಸರ್ವಗಾತ್ರೇಷು ಶರೈರಾಶೀವಿಷೋಪಮೈಃ || ೬೩ ||

---

ತಂದುಕೊಡು || ೫೭ || ದೇವೇಂದ್ರನಿಂದ ವಿಷಯವನ್ನು ಅರಿತ ಜನಾರ್ದನನು ಕೋಪಾವಿಷ್ಟನಾಗಿ ಹೇ ದೇವೇಂದ್ರಾ, ಭಯಪಡದಿರು, ಮಹಾ ಉನ್ಮತ್ತನಾದ ಆ ಶತ್ರು ದಾನವನನ್ನು ಕೂಡಲೇ ಸಂಹರಿಸುವೆನು || ೫೮ || ನೀವೆಲ್ಲರೂ ಮಹಾಬಲಯುತರಾಗಿ ಚಂದ್ರವತೀ ನಗರಕ್ಕೆ ನಡೆಯಿರಿ ಎಂದೆನಲು ದೇವತೆಗಳೆಲ್ಲ ಶ್ರೀಹರಿಯನ್ನು ಮುಂದೆ ಮಾಡಿಕೊಂಡು ಚಂದ್ರವತೀ ನಗರದೆಡೆ ಧಾವಿಸಿದರು || ೫೯ || ಆ ನಗರದಲ್ಲಿ ಪ್ರಹಾರ ಮಾಡುವ ಶ್ರೇಷ್ಠವಾದ ಆಯುಧಗಳನ್ನು ಧರಿಸಿದ ಅಸಂಖ್ಯಾತ ದಾನವರಿಂದ ಕೂಡಿದ ಹಾಗೂ ಗರ್ಜಿಸುತ್ತಿರುವ ದೈತ್ಯೇಂದ್ರನನ್ನು ನೋಡಿದರು. || ೬೦ || ಬಲಿಷ್ಠರಾದ ದಾನವರು ಆಗ ತಮ್ಮ ನಗರಕ್ಕೆ ಬಂದಿರುವ ದೇವತೆಗಳನ್ನು ನೋಡಿದಾಕ್ಷಣವೇ ಅವರನ್ನು ಮನಬಂದಂತೆ ಥಳಿಸತೊಡಗಲು ದೇವತೆಗಳೆಲ್ಲ ಅಸುರರೊಂದಿಗೆ ಯುದ್ಧಮಾಡುವದನ್ನು ಬಿಟ್ಟು ದಿಕ್ಕೆಟ್ಟು ಓಡಿಹೋಗತೊಡಗಿದರು ||೬೧|| ಅನಂತರ ಯುದ್ಧ ಮಾಡಲು ಅಚಲನಾಗಿ ನಿಂತಿರುವ ಹೃಷೀಕೇಶನನ್ನು ಕಂಡು ವಿವಿಧವಾದ ಆಯುಧಗಳನ್ನು ಧರಿಸಿದ, ಅತ್ಯಂತ ಕೋಪಾವಿಷ್ಟರಾದ ಆ ದಾನವರು ರಣರಂಗದಿಂದ ಓಡಿಹೋಗತೊಡಗಿದರು || ೬೨ || ಶಂಖ, ಚಕ್ರ, ಖಡ್ಗ, ಗದಾಧಾರಿಯಾದ ಶ್ರೀ ಹರಿಯು ದಾನವರು ಓಡಿಹೋಗುತ್ತಿರುವದನ್ನು ಕಂಡು ಸರ್ಪಬಾಣಗಳ ಮಳೆಗರೆದು ಅವರೆಲ್ಲರ ದೇಹಗಳನ್ನು ಚುಚ್ಚಿದನು || ೬೩ || ಶ್ರೀಹರಿಯಿಂದ ಈ ರೀತಿ ಹೊಡೆಯಲ್ಪಡಲು ನೂರಾರು ದಾನವರು ನಾಶವಾದರು. ಆಗ ದೈತ್ಯೇಂದ್ರನಾದ ಮುರಾಸುರನು ಒಂಟಿಯಾಗಿ ಯುದ್ಧ ಮಾಡತೊಡಗಿದನು || ೬೪ || ಆ

ತೇನಾಹತಾಸ್ತೇ ಶತಶೋ ದಾನವಾ ನಿಧನಂಗತಾಃ |
ಏಕಾಂಗೋ ದಾನವಃ ಸ್ಥಿತ್ವಾ ಯುಧ್ಯಮಾನೋ ಮುಹುರ್ಮುಹುಃ || ೬೪ ||

ತಸ್ಯೋಪರಿ ಹೃಷೀಕೇಶೋ ಯದ್ಯದಾಯುಧಮುತ್ಸೃಜತ್ |
ಪುಷ್ಪವತ್ತಂ ಸಮಭ್ಯೇತಿ ಕುಂಠಿತಂ ತಸ್ಯ ತೇಜಸಾ || ೬೫ ||

ಶಸ್ತ್ರಾಸ್ತ್ರೈರ್ವಿಧ್ಯಮಾನೋಽಪಿ ಯದಾ ಜೇತುಂ ನ ಶಕ್ಯತೇ |
ಯುಯೋಧ ಚ ತಥಾ ಕ್ರುದ್ಧೋ ಬಾಹುಭಿಃ ಪರಿಘೋಪಮೈಃ || ೬೬ ||

ಬಾಹುಯುದ್ಧಂ ಕೃತಂ ತೇನ ದಿವ್ಯಂ ವರ್ಷಸಹಸ್ರಕಮ್ |
ತೇನ ಶ್ರಾಂತಃ ಸ ಭಗವಾನ್ ಗತೋ ಬದರಿಕಾಶ್ರಮಮ್ || ೬೭ ||

ತತ್ರ ಹೈಮವತೀ ನಾಮ್ನೀ ಗುಹಾ ಪರಮಶೋಭನಾ |
ತಾಂ ಪ್ರಾವಿಶನ್ಮಹಾಯೋಗೀ ಶಯನಾರ್ಥಂ ಜಗತ್ಪತಿಃ || ೬೮ ||

ಯೋಜನದ್ವಾದಶಾಯಾಮಾ ಏಕದ್ವಾರಾ ಧನಂಜಯ |
ಅಹಂ ತತ್ರ ಪ್ರಸುಪ್ತೋಽಸ್ಮಿ ಭಯಭೀತೋ ನ ಸಂಶಯಃ || ೬೯ ||

ಮಹಾಯುದ್ಧೇನ ತೇನೈವ ಶ್ರಾಂತೋಽಹಂ ಪಾಂಡುನಂದನ |
ದಾನವಃ ಪೃಷ್ಠತೋ ಲಗ್ನಃ ಪ್ರವಿವೇಶ ಸ ತಾಂ ಗುಹಾಮ್ || ೭೦ ||

---

ದಾನವನ ಮೇಲೆ ಹೃಷೀಕೇಶನು ಬಿಟ್ಟ ಆಯುಧಗಳೆಲ್ಲವೂ ದೈತ್ಯನ ತೇಜಸ್ಸಿನಿಂದ ಬಲಹೀನವಾಗಿ ಹೂವುಗಳಂತೆ ಅವನ ಮೇಲೆ ಬೀಳುತ್ತಿದ್ದವು ||೬೫|| ಶಸ್ತ್ರಾಸ್ತ್ರಗಳಿಂದ ಎಷ್ಟೇ ಹೊಡೆಯಲ್ಪಟ್ಟರೂ ದೈತ್ಯನನ್ನು ಗೆಲ್ಲುವದು ಕಷ್ಟವಾದಾಗ ಕ್ರುದ್ಧನಾದ ಶ್ರೀಹರಿಯು ಅಗಳಿಯಂತಿರುವ ತನ್ನ ಬಾಹುಗಳಿಂದ ಅವನೊಡನೆ ಯುದ್ಧ ಮಾಡಿದನು || ೬೬ || ಒಂದು ಸಹಸ್ರವರ್ಷಗಳ ವರೆಗೆ ಘೋರವಾದ ಬಾಹುಯುದ್ಧವನ್ನು ಮಾಡಿದ ಶ್ರೀಹರಿಯು ದಣಿದವನಾಗಿ ಬದರಿಕಾಶ್ರಮಕ್ಕೆ ವಿಶ್ರಾಂತಿಗಾಗಿ ಹೋರಟುಹೋದನು ||೬೭|| ಮಹಾ ಯೋಗಿಯಾದ ಜಗತ್ಪತಿಯಾದ ನಾರಾಯಣನು ಮಲಗಿ ವಿಶ್ರಮಿಸುವುದಕ್ಕಾಗಿ ಬದರಿಕಾಶ್ರಮದಲ್ಲಿದ್ದ ಹೈಮವತೀ ಎಂಬ ಹೆಸರಿನ ಪರಮ ಸುಂದರವಾದ ಒಂದು ಗುಹೆಯನ್ನು ಪ್ರವೇಶಿಸಿದನು || ೬೮ || ಅನಂತರ ಹೇ ಅರ್ಜುನಾ, ದೈತ್ಯನಿಂದ ಭಯಭೀತನಾಗಿದ್ದ ನಾನು ೧೨ ಯೋಜನ ವಿಸ್ತಾರವಾಗಿದ್ದ ಹಾಗೂ ಒಂದೇ ಪ್ರವೇಶದ್ವಾರವಿದ್ದ ಆ ಗುಹೆಯಲ್ಲಿ ಮಲಗಿಕೊಂಡೆನು || ೬೯ || ದೈತ್ಯನೊಡನೆ ನಡೆದ ಮಹಾಯುದ್ಧದಿಂದ ನಾನು ಬಹಳ ದಣಿದಿದ್ದೆನು. ಓಡಿ ಬಂದಿದ್ದರೂ ಕೂಡ ದೈತ್ಯನು ನನ್ನನ್ನು ಬೆನ್ನಟ್ಟಿ ಬಂದು ನಾನಿದ್ದ ಗುಹೆಯನ್ನು ಪ್ರವೇಶಿಸಿದನು || ೭೦ || ಅಲ್ಲಿ ಮಲಗಿಕೊಂಡಿರುವ ನನ್ನನ್ನು ಕಂಡು ದಾನವರಿಗೆ ನಾಶವನ್ನುಂಟು ಮಾಡುವ ಈ ಹರಿಯನ್ನು

ಪ್ರಸುಪ್ತಂ ಮಾಂ ತದಾ ದೃಷ್ಟ್ವಾऽಚಿಂತಯದ್ದಾನವೋ ಹೃದಿ |
ಹರಿಮೇನಂ ಹನಿಷ್ಯೇऽಹಂ ದಾನವಾನಾಂ ಕ್ಷಯಾವಹಮ್ || ೨೧ ||

ಏವಂ ಸುದುರ್ಮತೇಸ್ತಸ್ಯ ವ್ಯವಸಾಯಂ ವ್ಯವಸ್ಯ ಚ |
ಸಮುದ್ಭೂತಾ ಮಮಾಂಗೇಭ್ಯಃ ಕನ್ಯೈಕಾ ಚ ಮಹಾಪ್ರಭಾ || ೨೨ ||

ದಿವ್ಯಪ್ರಹರಣಾ ದೇವೀ ಯುದ್ಧಾಯ ಸಮುಪಸ್ಥಿತಾ |
ಈಕ್ಷಿತಾ ದಾನವೇಂದ್ರೇಣ ಮುರೇಣ ಪಾಂಡುನಂದನ || ೨೩ ||

ಯುದ್ಧಂ ಸಮೀಹಿತಂ ತೇನ ಸ್ತ್ರಿಯಾ ತತ್ರ ಪ್ರಯಾಚಿತಮ್ |
ತೇನಾಯುಧ್ಯತ ಸಾ ನಿತ್ಯಂ ತಾಂ ದೃಷ್ಟ್ವಾ ವಿಸ್ಮಯಂ ಗತಃ || ೨೪ ||

ಕೇನೇಯಂ ನಿರ್ಮಿತಾ ರೌದ್ರಾ ಅತ್ಯುಗ್ರಾऽಶನಿಪಾತಿನೀ |
ಇತ್ಯುಕ್ತ್ವಾ ದಾನವೇಂದ್ರೋऽಸೌ ಯುಯುಧೇ ಕನ್ಯಯಾ ತಯಾ || ೨೫ ||

ತತಸ್ತಯಾ ಮಹಾದೇವ್ಯಾ ತ್ವರಯಾ ದಾನವೋ ಬಲೀ |
ಛಿತ್ವಾ ಸರ್ವಾಣಿ ಶಸ್ತ್ರಾಣಿ ಕ್ಷಣೇನ ವಿರಥಃ ಕೃತಃ || ೨೬ ||

ಬಾಹುಪ್ರಹರಣೋಪೇತೋ ಧಾವಮಾನೋ ಮಹಾಬಲಾತ್ |
ತಲೇನಾಹೃತ್ಯ ಹೃದಯೇ ತಯಾ ದೇವ್ಯಾ ನಿಪಾತಿತಃ || ೨೭ ||

---

ಈಗಲೇ ಕೊಲ್ಲುವೆನು ಎಂದು ಮನದಲ್ಲಿ ವಿಚಾರಿಸಿ ಕೊಲ್ಲಲು ಉದ್ಯುಕ್ತನಾದನು || ೨೧|| ದುಷ್ಟಬುದ್ಧಿಯವನಾದ ಆ ದೈತ್ಯನ ಈ ದುರ್ವಿಚಾರವನ್ನು ತಿಳಿದಾಕ್ಷಣವೇ ಮಹಾಕಾಂತಿಯುತಳಾದ ಒಬ್ಬ ಕನ್ಯೆಯು ಸಮುದ್ಭೂತಳಾದಳು || ೨೨ || ದಿವ್ಯವಾದ ಆಯುಧಗಳನ್ನು ಧರಿಸಿದ ಅವಳು ಯುದ್ಧಕ್ಕೆ ಸಿದ್ಧಳಾಗಿ ನಿಂತಿರುವುದನ್ನು ದಾನವೇಂದ್ರನಾದ ಮುರನು ಕಂಡು ಆಶ್ಚರ್ಯಭರಿತನಾದನು. || ೨೩ || ಆ ಕನ್ಯೆಯು ಯುದ್ಧಕ್ಕಾಗಿ ದಾನವನನ್ನು ಆಹ್ವಾನಿಸಿದಾಗ ಆ ದಾನವೇಂದ್ರನೂ ಅವಳೊಡನೆ ಯುದ್ಧ ಮಾಡಲು ನಿಶ್ಚಯಿಸಿದನು. ಅನಂತರ ಅವಳು ದಾನವನೊಂದಿಗೆ ನಿರಂತರ ಯುದ್ಧಮಾಡತೊಡಗಲು ಅವಳ ಯುದ್ಧ ಕೌಶಲದಿಂದ ದಾನವನು ಬೆರಗಾದನು || ೨೪ || ಹಾ ವಜ್ರಾಯುಧದಂತಹ ಆಯುಧಗಳನ್ನು ಬಿಡುತ್ತಿರುವ ಭಯಂಕರಳಾದ ಈ ಕನ್ಯೆಯನ್ನು ಅದಾರು ನಿರ್ಮಿಸಿರುವರು ಎಂದು ವಿಚಾರಿಸುತ್ತ ದಾನವೇಂದ್ರನು ಕನ್ಯೆಯೊಂದಿಗೆ ಯುದ್ಧಮಾಡತೊಡಗಿದನು || ೨೫ || ಆ ಮಹಾದೇವಿಯು ಕೂಡಲೇ ದಾನವನ ಸಕಲ ಶಸ್ತ್ರಗಳನ್ನು ಕತ್ತರಿಸಿ ವಿರಥನಾಗುವಂತೆ ಮಾಡಿದಳು || ೨೬ || ಬಾಹುಪ್ರಹಾರ ಮಾಡಬೇಕೆಂದು ಮಹಾಬಲದಿಂದ ಧಾವಿಸಿ ಬರುತ್ತಿರುವ ದಾನವನ ಎದೆಗೆ ಮಹಾದೇವಿಯು ತನ್ನ ಅಂಗೈಯಿಂದ ಹೊಡೆದು ಅವನನ್ನು ನೆಲದ ಮೇಲೆ ಕೆಡವಿದಳು ||೨೭|| ಕನ್ಯೆಯನ್ನು ಸಂಹರಿಸಲು ಬಯಸಿ ದೈತ್ಯನು ಪುನಃ

**ಪುನರುತ್ಥಾಯ ಸೋಽಧಾವತ್ ಕನ್ಯಾಹನನಕಾಂಕ್ಷಯಾ |**
**ದಾನವಂ ಪುನರಾಯಾಂತಂ ರೋಷೇಣಾಹತ್ಯ ತಚ್ಛಿರಃ || ೭೮ ||**

**ಕ್ಷಣಾನ್ನಿಪಾತಯಾಮಾಸ ಭೂಮೌ ತತ್ರ ಮಹಾಸುರಮ್ |**
**ದೈತ್ಯಃ ಕೃತ್ತಶಿರಾಃ ಸೋಽಥ ಯಯೌ ವೈವಸ್ವತಾಲಯಮ್ || ೭೯ ||**

**ಶೇಷಾ ಭಯಾರ್ದಿತಾ ದೀನಾಃ ಪಾತಾಲಂ ವಿವಿಶುರ್ದ್ವಿಷಃ |**
**ತತಃ ಸಮುತ್ಥಿತೋ ದೇವಃ ಪುರೋ ದೃಷ್ಟ್ವಾಽಸುರಂ ಹತಮ್ || ೮೦ ||**

**ಕನ್ಯಾಂ ಪುರಃಸ್ಥಿತಾಂ ಚಾಪಿ ಕೃತಾಂಜಲಿಪುಟಾಂ ನತಾಮ್ |**
**ವಿಸ್ಮಯೋತ್ಫುಲ್ಲವದನಃ ಪ್ರೋವಾಚ ಜಗತಾಂ ಪತಿಃ || ೮೧ ||**

**ಕೇನಾಯಂ ನಿಹತಃ ಸಂಖ್ಯೇ ದಾನವೋ ದುಷ್ಟಮಾನಸಃ |**
**ಯೇನ ದೇವಾಃ ಸಗಂಧರ್ವಾಃ ಸೇಂದ್ರಾಶ್ಚ ಸಮರುದ್ಗಣಾಃ || ೮೨ ||**

**ಸನಾಗಾಃ ಸಹಲೋಕೇಶಾ ಲೀಲಯೈವ ವಿನಿರ್ಜಿತಾಃ |**
**ಯೇನಾಹಂ ನಿರ್ಜಿತೋ ಭೂತ್ವಾ ಭೀತಃ ಸುಪ್ತೋ ಗುಹಾಮಿಮಾಮ್ || ೮೩ ||**

**ಕೇನ ಕಾರುಣ್ಯಭಾವೇನ ರಕ್ಷಿತೋಽಹಂ ಪಲಾಯಿತಃ |**

---

ಮೇಲೆದ್ದು ಓಡಿ ಬರುತ್ತಿರಲು ದೇವಿಯು ರೋಷಾವೇಶದಿಂದ ಆವನ ತಲೆಯನ್ನು ಕತ್ತರಿಸಿ || ೭೮ || ಒಂದು ಕ್ಷಣದಲ್ಲಿ ಆ ಮಹಾಸುರನನ್ನು ಭೂಮಿಯ ಮೇಲೆ ಕೆಡವಿದಳು. ತಲೆಯು ಕತ್ತರಿಸಿ ಹೋದ ದೈತ್ಯನು ಯಮಾಲಯವನ್ನು ಸೇರಿದನು ||೭೯|| ದೇವದ್ವಿಷರಾದ ಉಳಿದ ದೈತ್ಯರು ಭಯಭೀತರಾಗಿ ದೀನರಾಗಿ ಪಲಾಯನ ಮಾಡಿ ಪಾತಾಳ ಲೋಕವನ್ನು ಸೇರಿದರು. ಇಷ್ಟೆಲ್ಲ ನಡೆದ ನಂತರ ಗುಹೆಯಲ್ಲಿ ಮಲಗಿಕೊಂಡಿದ್ದ ಪರಮಾತ್ಮನು ಎಚ್ಚೆತ್ತು ತನ್ನೆದುರಿನಲ್ಲಿ ಮುರಾಸುರನು ಮೃತನಾಗಿ ಬಿದ್ದಿರುವದನ್ನು ಹಾಗೂ || ೮೦ || ಕೈಜೋಡಿಸಿಕೊಂಡು ಬಾಗಿ ನಿಂತಿರುವ ಒಬ್ಬ ಕನ್ಯೆಯನ್ನು ಕಂಡು ಆಶ್ಚರ್ಯಭರಿತನಾಗಿ ಆ ಕನ್ಯೆಯನ್ನು ಕೇಳಿದನು || ೮೧ || ದುಷ್ಟನಾದ ಈ ದಾನವನು ಯುದ್ಧದಲ್ಲಿ ಯಾರಿಂದ ಕೊಲ್ಲಲ್ಪಟ್ಟನು? ಗಂಧರ್ವರು, ಇಂದ್ರ, ಮರುದ್ಗಣಗಳು || ೮೨ || ನಾಗರು, ಲೋಕೇಶರು ಇವರೇ ಮೊದಲಾದವರಿಂದ ಸಹಿತರಾದ ದೇವತೆಗಳನ್ನು ಯಾವನು ಅನಾಯಸವಾಗಿ ಗೆದ್ದಿದ್ದನೋ ಅಂಥ ದಾನವನನ್ನು ಆದಾರು ಕೊಂದಿರುವವರು ? ಯಾವನಿಂದ ಯುದ್ಧದಲ್ಲಿ ಸೋಲಿಸಲ್ಪಟ್ಟು ಭೀತನಾದ ನಾನು ಈ ಗುಹೆಯನ್ನು ಪ್ರವೇಶಿಸಿ ಮಲಗಿದ್ದೆನೋ || ೮೩ || ಓಡಿ ಬಂದಿದ್ದ ಅಂಥ ನಾನು ಯಾರ ಕಾರುಣ್ಯ ಬಲದಿಂದ ಇಂದು ರಕ್ಷಿಸಲ್ಪಟ್ಟಿರುವೆನು ? ಆಗ ಕನ್ಯೆಯು ನುಡಿದಳು ಹೇ ಪ್ರಭೋ ನಿನ್ನ ಅಂಶದಿಂದ ಉದ್ಭೂತಳಾದ ನನ್ನಿಂದಲೇ

ಕನ್ಯೋವಾಚ

ಮಹಾ ಏನಿಹತೋ ದೈತ್ಯಸ್ತ್ವದಂಶೋದ್ಭೂತಯಾ ಪ್ರಭೋ || ೮೪ ||

ದೃಷ್ಟ್ವಾ ಸುಪ್ತಂ ಹರೇ ತ್ವಾಂ ತು ಯತೋ ಹಂತುಂ ಸಮುದ್ಯತಃ |
ತ್ರೈಲೋಕ್ಯಕಂಟಕಸ್ಯೇತ್ಥಂ ವ್ಯವಸಾಯಂ ಪ್ರಬುದ್ಧ್ಯ ಚ || ೮೫ ||

ಹತೋ ಮಯಾ ದುರಾತ್ಮಾಽಸೌ ದೇವತಾ ನಿರ್ಭಯೀಕೃತಾಃ |
ತವೈವಾಹಂ ಮಹಾಶಕ್ತಿಃ ಸರ್ವಶತ್ರುಭಯಂಕರೀ || ೮೬ ||

ತ್ರೈಲೋಕ್ಯರಕ್ಷಣಾರ್ಥಾಯ ಹತೋ ಲೋಕಭಯಂಕರಃ |
ನಿಹತಂ ದಾನವಂ ದೃಷ್ಟ್ವಾ ಕಿಮಾಶ್ಚರ್ಯಂ ವದ ಪ್ರಭೋ || ೮೭ ||

ಶ್ರೀಭಗವಾನುವಾಚ

ನಿಹತೇ ದಾನವೇಂದ್ರೇಽಸ್ಮಿನ್ ಸಂತುಷ್ಟೋಽಹಂ ತ್ವಯಾಽನಘೇ |
ಹೃಷ್ಟಾಃ ಪುಷ್ಟಾಶ್ಚ ವೈ ದೇವಾ ಆನಂದಃ ಸಮಜಾಯತ || ೮೮ ||

ಆನಂದಸ್ತ್ರಿಷು ಲೋಕೇಷು ದೇವಾನಾಂ ಯಸ್ತ್ವಯಾ ಕೃತಃ |
ಪ್ರಸನ್ನೋಽಸ್ಮ್ಯನಘೇ ತುಭ್ಯಂ ವರಂ ವರಯ ಸುವ್ರತೇ || ೮೯ ||

ದದಾಮಿ ತಂ ನ ಸಂದೇಹೋ ಯತ್ಸುರೈರಪಿ ದುರ್ಲಭಮ್ |

---

ಈ ದೈತ್ಯನು ಕೊಲ್ಲಲ್ಪಟ್ಟಿರುವನು ||೮೪|| ಹೇ ಶ್ರೀಹರೇ, ಇಲ್ಲಿ ಮಲಗಿಕೊಂಡಿದ್ದ ನಿನ್ನನ್ನು ಕೊಲ್ಲಲು ಯಾವಾಗ ಈ ದೈತ್ಯನು ಉದ್ಯುಕ್ತನಾದನೋ ತ್ರಿಲೋಕಗಳಿಗೂ ಕಂಟಕನಾದ ದೈತ್ಯನ ಈ ವಿಚಾರವನ್ನು ತಿಳಿದೊಡನೆಯೇ ನಾನು ಉದ್ಭೂತಳಾಗಿ || ೮೫ || ಈ ದುರಾತ್ಮನನ್ನು ಕೊಂದು ಹಾಕಿರುವೆನು ಮತ್ತು ದೇವತೆಗಳೆಲ್ಲ ನಿರ್ಭಯರಾಗಿರುವಂತೆ ಮಾಡಿರುವೆನು. ಹೇ ದೇವಾ ! ಸರ್ವ ಶತ್ರುಗಳಿಗೆ ಭಯಂಕರಳಾಗಿರುವ ನಾನು ನಿನ್ನದೇ ಮಹಾಶಕ್ತಿಯಾಗಿರುವೆನು || ೮೬ || ತ್ರಿಲೋಕಗಳ ರಕ್ಷಣೆಗೋಸ್ಕರ ಲೋಕಭಯಂಕರನಾದ ಈ ದೈತ್ಯನು ಕೊಲ್ಲಲ್ಪಟ್ಟಿರುವನು. ದಾನವನು ಹತನಾಗಿರುವಲ್ಲಿ ಹೇ ಪ್ರಭೋ ನಿನಗೆ ಆಶ್ಚರ್ಯವೇ ? ಹೇಳು || ೮೭ || ಆಗ ಶ್ರೀ ಭಗವಂತನು ಹೇಳಿದನು ಹೇ ಅನಘೇ, ನಿನ್ನಿಂದ ಈ ದಾನವನು ಕೊಲ್ಲಲ್ಪಟ್ಟಿರುವುದರಿಂದ ನನಗೆ ಅತೀವ ಸಂತೋಷವಾಗಿದೆ. ದೇವತೆಗಳೆಲ್ಲ ಹೃಷ್ಟರಾಗಿದ್ದಾರೆ, ಪುಷ್ಟರಾಗಿದ್ದಾರೆ. ಅವರೆಲ್ಲ ಆನಂದ ತುಂದಿಲರಾಗಿದ್ದಾರೆ || ೮೮ || ದೇವತೆಗಳಿಗೋಸ್ಕರ ಮಾಡಿದ ನಿನ್ನ ಕಾರ್ಯದಿಂದ ತ್ರಿಲೋಕವಾಸಿಗಳೆಲ್ಲ ಹರ್ಷಭರಿತರಾಗಿದ್ದಾರೆ ಹಾಗೂ ಹೇ ಅನಘೇ, ನಾನು ಅತ್ಯಂತ ಪ್ರಸನ್ನನಾಗಿದ್ದೇನೆ. ನಿನಗೆ ಬೇಕಾದ ವರವನ್ನು ಕೇಳು ||೮೯|| ಹೇ ಸುವ್ರತೆ, ದೇವತೆಗಳಿಗೂ ದುರ್ಲಭವಾದ ವರವನ್ನು

**ಕನ್ಯೋವಾಚ**

**ಯದಿ ತುಷ್ಟೋಽಸಿ ಮೇ ದೇವ ಯದಿ ದೇಯೋ ವರೋ ಮಮ || ೯೦ ||**

**ತಾರಯೇಽಹಂ ಮಹಾಪಾಪಾದುಪವಾಸಪರಂ ನರಮ್ |**
**ಉಪವಾಸಸ್ಯ ಯತ್ಪುಣ್ಯಂ ತಸ್ಯಾರ್ಧಂ ನಕ್ತಭೋಜನೇ || ೯೧ ||**

**ತದರ್ಧಂ ಚ ಭವೇತ್ತಸ್ಯ ಏಕಭುಕ್ತಂ ಕರೋತಿ ಯಃ |**
**ಯಃ ಕರೋತಿ ವ್ರತಂ ಭಕ್ತ್ಯಾ ದಿನೇ ಮಮ ಜಿತೇಂದ್ರಿಯಃ || ೯೨ ||**

**ಸ ಗತ್ವಾ ವೈಷ್ಣವಂ ಸ್ಥಾನಂ ಕಲ್ಪಕೋಟಿಶತಾನಿ ಚ |**
**ಭುಂಜಾನೋ ವಿವಿಧಾನ್ ಭೋಗಾನುಪವಾಸೀ ಜಿತೇಂದ್ರಿಯಃ || ೯೩ ||**

**ಭಗವಂಸ್ತ್ವತ್ಪ್ರಸಾದೇನ ಭವತ್ವೇಷ ವರೋ ಮಮ |**
**ಉಪವಾಸಂ ಚ ನಕ್ತಂ ಚ ಏಕಭುಕ್ತಂ ಕರೋತಿ ಯಃ || ೯೪ ||**

**ತಸ್ಯ ಧರ್ಮಂ ಚ ವಿತ್ತಂ ಚ ಮೋಕ್ಷಂ ದೇಹಿ ಜನಾರ್ದನ |**
**ಶ್ರೀಭಗವಾನುವಾಚ**
**ಯತ್ತ್ವಂ ವದಸಿ ಕಲ್ಯಾಣಿ ತತ್ಸರ್ವಂ ಚ ಭವಿಷ್ಯತಿ || ೯೫ ||**

---

ನಿಶ್ಚಯವಾಗಿ ಕೊಡುವೆನು. ಕೇಳು ಆಗ ಆ ಕನ್ಯೆಯು ಒಂದು ವರವನ್ನು ಕೇಳಿದಳು ಏನೆಂದರೆ ಹೇ ದೇವದೇವೋತ್ತಮಾ, ನೀನು ನನ್ನ ಮೇಲೆ ನಿಜವಾಗಿಯೂ ಪ್ರಸನ್ನನಾಗಿದ್ದರೆ, ವರವನ್ನು ಕೊಡಲು ಬಯಸಿದರೆ || ೯೦ || ಉಪವಾಸವನ್ನು ಮಾಡುವ ನರರನ್ನು ಸಂಸಾರಬಂಧನದಿಂದ ಮೋಚಿಸುವ ಶಕ್ತಿಯನ್ನು ನನಗೆ ದಯಪಾಲಿಸು. ಪೂರ್ತಿ ಉಪವಾಸ ಮಾಡುವದರಿಂದ ಬರುವ ಪುಣ್ಯದ ಅರ್ಧಭಾಗವು ನಕ್ತ ಭೋಜಿಗೂ ಹಾಗೂ || ೯೧ || ಇದರ ಅರ್ಧ ಪುಣ್ಯವು ಏಕಬುಕ್ತರಿಗೂ ದೊರೆಯುವಂತಾಗಲಿ. ನನ್ನ ಹೆಸರಿನಲ್ಲಿರುವ ಆ ದಿನದಲ್ಲಿ ಯಾವನು ಜಿತೇಂದ್ರಿಯನಾಗಿದ್ದು ಭಕ್ತಿಯಿಂದ ಉಪವಾಸ ಮಾಡುವನೋ || ೯೨ || ಅವನು ವೈಷ್ಣವಸ್ಥಾನವನ್ನು ಹೊಂದಿ ಅಲ್ಲಿ ನೂರಾರು ಕೋಟಿಕಲ್ಪಗಳ ವರೆಗೆ ವಿವಿಧ ಭೋಗಗಳನ್ನು ಭೋಗಿಸುವಂತಾಗಲಿ || ೯೩ || ಹೇ ಭಗವನ್, ಇದೆಲ್ಲವೂ ನಿನ್ನ ಅನುಗ್ರಹದಿಂದ ಆಗಲಿ ಎಂಬುದೇ ನಾನು ನಿನ್ನಲ್ಲಿ ಕೇಳುವ ವರವಾಗಿದೆ. ಯಾವನು ಪೂರ್ತಿ ಉಪವಾಸವನ್ನು, ನಕ್ತಭೋಜನ (ಫಲಹಾರ)ವನ್ನು ಹಾಗೂ ಏಕಭುಕ್ತವನ್ನು (ಒಪ್ಪತ್ತು ಫಲಾಹಾರ) ಮಾಡುವನೋ || ೯೪ || ಅಂಥವನಿಗೆ ಹೇ ಜನಾರ್ದನಾ, ಯಥಾಯೋಗ್ಯವಾದ ಧರ್ಮ, ಸಂಪತ್ತು ಮೋಕ್ಷಗಳನ್ನು ದಯಪಾಲಿಸು. ಕನ್ಯೆಯ ಪ್ರಾರ್ಥನೆಯನ್ನು ಮನ್ನಿಸಿದ ಶ್ರೀ ಭಗವಂತನು ಹೇಳಿದನು ಹೇ ಕಲ್ಯಾಣಿ, ಇದುವರೆಗೆ ನೀನೇನು ಕೇಳಿರುವಿಯೋ ಅದೆಲ್ಲವೂ ನನ್ನ ಅನುಗ್ರಹದಿಂದ ಈಡೇರುವದು || ೯೫ || ಮೂರು ಲೋಕಗಳಲ್ಲಿ ಖ್ಯಾತರಾದ ನನ್ನ

ಮಮ ಭಕ್ತಾಶ್ಚ ಯೇ ಲೋಕಾಸ್ತವ ಭಕ್ತಾಶ್ಚ ಯೇ ನರಾಃ |
ತ್ರಿಷು ಲೋಕೇಷು ವಿಖ್ಯಾತಾಃ ಪ್ರಾಪ್ಸ್ಯಂತಿ ಮಮ ಸನ್ನಿಧಿಮ್ || ೯೬ ||

ಏಕಾದಶ್ಯಾಂ ಸಮುತ್ಪನ್ನಾ ಮಮ ಶಕ್ತಿಃ ಪರಾ ಯತಃ |
ಅತ ಏಕಾದಶೀತ್ಯೇವಂ ತವ ನಾಮ ಭವಿಷ್ಯತಿ || ೯೭ ||

ಧಗ್ಧ್ವಾ ಪಾಪಾನಿ ಸರ್ವಾಣಿ ದಾಸ್ಯಾಮಿ ಪದಮವ್ಯಯಮ್ |
ತೃತೀಯಾ ಚಾಷ್ಟಮೀ ಚೈವ ನವಮೀ ಚ ಚತುರ್ದಶೀ || ೯೮ ||

ಏಕಾದಶೀ ವಿಶೇಷೇಣ ತಿಥಯೋ ಮೇ ಮಹಾಪ್ರಿಯಾಃ |
ಸರ್ವತೀರ್ಥಾಧಿಕಂ ಪುಣ್ಯಂ ಸರ್ವದಾನಾಧಿಕಂ ಫಲಮ್ || ೯೯ ||

ಸರ್ವವ್ರತಾಧಿಕಂ ಚೈವ ಸತ್ಯಂ ಸತ್ಯಂ ವದಾಮಿ ತೇ |
ಏವಂ ದತ್ವಾ ವರಂ ತಸ್ಯಾಸ್ತತ್ರೈವಾಂತರಧೀಯತ || ೧೦೦ ||

ಹೃಷ್ಟಾ ಪುಷ್ಟಾ ತು ಸಾ ಜಾತಾ ತದಾ ಏಕಾದಶೀ ತಿಥಿಃ |
ಇಮಾಮೇಕಾದಶೀಂ ಪಾರ್ಥ ಕರಿಷ್ಯಂತಿ ನರಾಸ್ತು ಯೇ || ೧೦೧ ||

ತೇಷಾಂ ಶತ್ರುಂ ಹನಿಷ್ಯಾಮಿ ದಾಸ್ಯಾಮಿ ಪರಮಾಂ ಗತಿಮ್ |
ಅನ್ಯೇ ಽಪಿ ಯೇ ಕರಿಷ್ಯಂತಿ ಏಕಾದಶ್ಯಾ ಮಹಾವ್ರತಮ್ || ೧೦೨ ||

---

ಭಕ್ತರು ಹಾಗೂ ನಿನ್ನ ಭಕ್ತರು ಏನಿರುವರೋ ಅವರೆಲ್ಲರೂ ನನ್ನ ಸನ್ನಿಧಿಯನ್ನು ಹೊಂದುವರು || ೯೬ || ನನ್ನ ಪರಮಶಕ್ತಿ ಸ್ವರೂಪಿಣಿಯಾದ ನೀನು ಏಕಾದಶಿಯ ದಿನ ಹುಟ್ಟಿದ ಕಾರಣದಿಂದಲೇ ನಿನ್ನ ಹೆಸರು ಏಕಾದಶೀ ಎಂದು ರೂಢಿಯಲ್ಲಿ ಪ್ರಸಿದ್ಧವಾಗುವದು || ೯೭ || ನಿನ್ನದಾದ ಏಕಾದಶೀ ವ್ರತವನ್ನು ಆಚರಿಸುವವನ ಸಕಲ ಪಾಪಗಳನ್ನು ಸುಟ್ಟುಹಾಕಿ ಅವ್ಯಯವಾದ ಸ್ಥಾನವನ್ನು ಕೊಡುವೆನು. ತೃತೀಯಾ, ಅಷ್ಟಮೀ ನವಮೀ ಮತ್ತು ಚತುರ್ದಶೀ || ೯೮ || ಹಾಗೂ ವಿಶೇಷವಾಗಿ ಏಕಾದಶೀ ಈ ತಿಥಿಗಳು ನನಗೆ ಅತಿಪ್ರಿಯವಾಗಿವೆ. ಏಕಾದಶೀ ವ್ರತವು, ಸಕಲತೀರ್ಥಸ್ನಾನಕ್ಕಿಂತಲೂ ಅಧಿಕವಾದ ಪುಣ್ಯಪ್ರದವಾಗಿದೆ, ಸರ್ವದಾನಗಳಿಗಿಂತಲೂ ಅಧಿಕವಾದ ಫಲಪ್ರದವಾಗಿದೆ || ೯೯ || ಸರ್ವ ವ್ರತಗಳಿಗಿಂತಲೂ ಶ್ರೇಷ್ಠವಾಗಿದೆ. ಇದೆಲ್ಲವನ್ನೂ ನಾನು ಸತ್ಯವಾಗಿ ಸತ್ಯವಾಗಿ ಹೇಳುತ್ತಿದ್ದೇನೆ. ಈ ಪ್ರಕಾರವಾಗಿ ಪರಮಾತ್ಮನು ಆ ದೇವಿಗೆ ವರವನ್ನು ಕೊಟ್ಟು ಅಲ್ಲಿಯೇ ಅಂತರ್ಧಾನ ಹೊಂದಿದನು ||೧೦೦ || ಶ್ರೀಹರಿಯ ವರಬಲದಿಂದ ಏಕಾದಶೀ ತಿಥಿಯ ಅಭಿಮಾನಿಯಾದ ಆ ದೇವಿಯು ಹೃಷ್ಟಪುಷ್ಟಳಾದಳು. ಹೇ ಪಾರ್ಥಾ ಇಂಥ ಏಕಾದಶೀ ವ್ರತವನ್ನು ಯಾವ ನರರು ಆಚರಿಸುವರೋ || ೧೦೧ || ಅವರ ಶತ್ರುಗಳನ್ನು ನಾಶಪಡಿಸುವೆನು ಮತ್ತು ಅವರಿಗೆ ಪರಮಗತಿಯನ್ನು ಕೊಡುವೆನು. ಏಕಾದಶೀ ಮಹಾವ್ರತವನ್ನು ಆಚರಿಸುವವರೆಲ್ಲರ || ೧೦೨||

ಹರಾಮಿ ತೇಷಾಂ ವಿಘ್ನಾಂಶ್ಚ ಸರ್ವಸಿದ್ಧಿಂ ದದಾಮಿ ಚ |
ಏವಮುಕ್ತಾ ಸಮುತ್ಪತ್ತಿರೇಕಾದಶ್ಯಾಃ ಪೃಥಾಸುತ || ೧೦೩ ||

ಇಯಮೇಕಾದಶೀ ನಿತ್ಯಾ ಸರ್ವಪಾಪಕ್ಷಯಂಕರೀ |
ಏಕೈವ ಚ ಮಹಾಪುಣ್ಯಾ ಸರ್ವಪಾಪನಿಷೂದನೀ || ೧೦೪ ||

ಉದಿತಾ ಸರ್ವಲೋಕೇಷು ಸರ್ವಸಿದ್ಧಿಕರೀ ತಿಥಿಃ |
ಶುಕ್ಲಾ ವಾಽಪ್ಯಥವಾ ಕೃಷ್ಣಾ ಇತಿ ಭೇದಂ ನ ಕಾರಯೇತ್ |
ಕರ್ತವ್ಯೇ ತೂಭಯೇ ಪಾರ್ಥ ನ ತುಲ್ಯಾ ದ್ವಾದಶೀತಿಥಿಃ || ೧೦೫ ||

ಅಂತರಂ ನೈವ ಕರ್ತವ್ಯಂ ಸಮಸ್ತೈರ್ವ್ರತಕಾರಿಭಿಃ |
ತಿಥಿರೇಕಾ ಭವೇತ್ಸರ್ವಾ ಪಕ್ಷಯೋರುಭಯೋರಪಿ || ೧೦೬ ||

ಉಪವಾಸಂ ಪ್ರಕುರ್ವಂತಿ ಏಕಾದಶ್ಯಾಂ ನರಾಶ್ಚ ಯೇ |
ತೇ ಯಾಂತಿ ಪರಮಂ ಸ್ಥಾನಂ ಯತ್ರಾಽಽಸ್ತೇ ಗರುಡಧ್ವಜಃ || ೧೦೭ ||

ಧನ್ಯಾಸ್ತೇ ಮಾನವಾಃ ಲೋಕೇ ವಿಷ್ಣುಭಕ್ತಿಪರಾಯಣಾಃ |
ಏಕಾದಶ್ಯಾಸ್ತು ಮಾಹಾತ್ಮ್ಯಂ ಸರ್ವಕಾಲಂ ತು ಯಃ ಪಠೇತ್ || ೧೦೮ ||

ಅಶ್ವಮೇಧಸ್ಯ ಯತ್ಪುಣ್ಯಂ ತದಾಪ್ನೋತಿ ನ ಸಂಶಯಃ |
ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾಽಹಂ ಚ ಪರೇಽಹನಿ || ೧೦೯ ||

---

ವಿಘ್ನಗಳನ್ನು ದೂರಮಾಡಿ ಸರ್ವಸಿದ್ಧಿಗಳನ್ನು ಕೊಡುವೆನು. ಹೇ ಅರ್ಜುನಾ, ನೀನು ಕೇಳಿದ ಏಕಾದಶಿಯ ಉತ್ಪತ್ತಿಯು ಈ ಪ್ರಕಾರವಾಗಿದೆ. || ೧೦೩ || ಏಕಾದಶೀ ವ್ರತವು ನಿತ್ಯಕರ್ಮವಾಗಿದ್ದು ಸರ್ವಪಾಪಗಳನ್ನು ಕಳೆಯುವಂಥದೂ ಮತ್ತು ಮಹಾಪುಣ್ಯದಾಯಕವೂ ಆಗಿದೆ || ೧೦೪ || ಹೀಗೆ ಸರ್ವ ಲೋಕಗಳಲ್ಲಿ ಪ್ರಾಣಿಗಳ ಸರ್ವಸಿದ್ಧಿಗಳನ್ನು ಈಡೇರಿಸಲು ಸಮರ್ಥವಾದ ಈ ಏಕಾದಶೀ ತಿಥಿಯು ಉತ್ಪನ್ನವಾಗಿದೆ. ಇದು ಶುಕ್ಲಪಕ್ಷದ ಏಕಾದಶೀ ಇದು ಕೃಷ್ಣಪಕ್ಷದ ಏಕಾದಶೀ ಎಂದು ಏಕಾದಶೀ ತಿಥಿಯಲ್ಲಿ ತಾರತಮ್ಯವನ್ನು ತೋರಬಾರದು. ಎರಡೂ ಏಕಾದಶಿಯ ದಿನಗಳಂದು ಉಪವಾಸವನ್ನು ಮಾಡಬೇಕು. ಎರಡೂ ಪಕ್ಷಗಳ ಏಕಾದಶಿಯು ಒಂದೇ ರೀತಿಯ ಮಾಹಾತ್ಮ್ಯವುಳ್ಳದ್ದಾಗಿದೆ. ||೧೦೫||೧೦೬|| ಏಕಾದಶಿಯ ದಿನದಂದು ಯಾರು ಉಪವಾಸವನ್ನು ಮಾಡುವರೋ ಅವರು ಗರುಡಧ್ವಜನಾದ ಶ್ರೀ ಹರಿಯ ಮಂದಿರವನ್ನು ಸೇರುವರು || ೧೦೭ || ಏಕಾದಶೀ ವ್ರತವನ್ನು ಮಾಡುವ ವಿಷ್ಣುಭಕ್ತರಾದ ಆ ಮನುಜರೇ ಲೋಕದಲ್ಲಿ ಧನ್ಯರು ಹಾಗ ಮಾನ್ಯರು. ಇಂಥ ಏಕಾದಶಿಯ ಮಾಹಾತ್ಮ್ಯವನ್ನು ಸದಾಕಾಲ ಯಾವನು ಪಠಿಸುವನೋ ||೧೦೮|| ಅವನು ನಿಶ್ಚಯವಾಗಿ ಅಶ್ವಮೇಧ ಯಾಗದಿಂದ ಬರುವಷ್ಟು ಪುಣ್ಯವನ್ನು ಸಂಪಾದಿಸುತ್ತಾನೆ. ಹೇ

ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ |
ಇತ್ಯುಚ್ಚಾರ್ಯ ತತೋ ವಿದ್ವಾನ್ ಪುಷ್ಪಾಂಜಲಿಮಥಾರ್ಪಯೇತ್ || ೧೧೦ ||

ಅಷ್ಟಾಕ್ಷರೇಣ ಮಂತ್ರೇಣ ತ್ರಿರ್ಜಪೇನಾಭಿಮಂತ್ರಿತಮ್ |
ಉಪವಾಸಫಲಂ ಪ್ರೇಪ್ಸುಃ ಪಿಬೇತ್ ಪಾತ್ರಗತಂ ಜಲಮ್ || ೧೧೧ ||

ದಿವಾ ನಿದ್ರಾಂ ಪರಾನ್ನಂ ಚ ಪುನರ್ಭೋಜನಮೈಥುನೇ |
ಕ್ಷೌದ್ರಂ ಕಾಂಸ್ಯಾಮಿಷಂ ತೈಲಂ ದ್ವಾದಶ್ಯಾಮಷ್ಟ ವರ್ಜಯೇತ್ || ೧೧೨ ||

ಅಸಂಭಾಷ್ಯಂ ಹಿ ಸಂಭಾಷ್ಯ ಭಕ್ಷಯೇತ್ತುಲಸೀದಲಮ್ |
ಆಮಲಕ್ಯಾಃ ಫಲಂ ವಾಪಿ ಪಾರಣೇ ಪ್ರಾಶ್ಯ ಶುದ್ಧ್ಯತಿ || ೧೧೩ ||

ಆಮಧ್ಯಾಹ್ನಾಚ್ಚ ರಾಜೇಂದ್ರ ದ್ವಾದಶ್ಯಾಮರುಣೋದಯೇ |
ಸ್ನಾನಾರ್ಚನಕ್ರಿಯಾಃ ಕಾರ್ಯಾ ದಾನಹೋಮಾದಿಸಂಯುತಾಃ || ೧೧೪ ||

ಸಂಕಟೇ ವಿಷಮೇ ಪ್ರಾಪ್ತೇ ದ್ವಾದಶ್ಯಾಃ ಪಾರಣಂ ಕಥಮ್ |
ಅದ್ಭಿಸ್ತು ಪಾರಣಂ ಕುರ್ಯಾತ್ ಪುನರ್ಭುಕ್ತಂ ನ ದೋಷಕೃತ್ || ೧೧೫ ||

---

ಪುಂಡರೀಕಾಕ್ಷಾ, ಏಕಾದಶಿಯ ದಿನ ನಾನು ನಿರಾಹಾರನಾಗಿದ್ದು ಮರುದಿನ || ೧೦೯|| ನಿನ್ನ ನೈವೇದ್ಯಾನ್ನವನ್ನು ಸ್ವೀಕರಿಸುವೆನು. ಹೇ ಅಚ್ಯುತಾ, ನನಗೆ ರಕ್ಷಕನಾಗು ಎಂದು ಪ್ರಾರ್ಥಿಸುತ್ತಾ ವ್ರತ ಧಾರಣ ಮಾಡಿ ಶ್ರೀಹರಿಗೆ ಪುಷ್ಪಾಂಜಲಿಯನ್ನು ಅರ್ಪಿಸಬೇಕು ||೧೧೦|| ಉಪವಾಸ ವ್ರತದ ಫಲಾಪೇಕ್ಷೆಯು ಅಷ್ಟಾಕ್ಷರ ಮಂತ್ರದಿಂದ ಮೂರು ಸಲ ಅಭಿಮಂತ್ರಿತವಾದ ಪಾತ್ರೆಯಲ್ಲಿಯ ಜಲವನ್ನು ಸ್ವೀಕರಿಸಬೇಕು || ೧೧೧ || ಹಗಲು ನಿದ್ರೆ, ಪರಾನ್ನ, ಪುನರ್ಭೋಜನ, ಮೈಥುನ, ಮಧು, ಕಂಚಿನ ಪಾತ್ರೆಯಲ್ಲಿ ಭೋಜನ, ಮಾಂಸ ಮತ್ತು ಎಣ್ಣೆ ಈ ಎಂಟನ್ನು ದ್ವಾದಶಿಯ ದಿನ ತ್ಯಜಿಸಬೇಕು || ೧೧೨ || ಉಪವಾಸ ದಿನ ಸಂಭಾಷಣೆಗೆ ಯೋಗ್ಯನಲ್ಲದ ಪುರುಷನೊಂದಿಗೆ ಸಂಭಾಷಣೆ ಮಾಡಿದರೆ ಶುದ್ಧಿಗೊಸ್ಕರ ಮರುಧಿನ ತುಲಸೀದಲವನ್ನು ಸೇವಿಸಬೇಕು. ಅಥವಾ ಪಾರಣೆಯ ದಿನ ನೆಲ್ಲಿಕಾಯಿಯನ್ನು ಸೇವಿಸಿದರೂ ಶುದ್ಧಿಯಾಗುವದು ||೧೧೩|| ಹೇ ರಾಜೇಂದ್ರಾ ಅರ್ಜುನಾ, ಏಕಾದಶಿಯ ಮಧ್ಯಾಹ್ನದಿಂದ ದ್ವಾದಶಿಯ ಅರುಣೋದಯದ ವರೆಗೆ ಸ್ನಾನ, ಪೂಜೆ, ದಾನ, ಹೋಮಾದಿ ಕರ್ಮಗಳನ್ನು ಮಾಡಬೇಕು ||೧೧೪|| ಮಹಾಸಂಕಟದಲ್ಲಿ ಅಥವಾ ವಿಪತ್ತಿನಲ್ಲಿ ಸಿಲುಕಿದ ವ್ರತಿಯು ದ್ವಾದಶಿಯ ದಿನ ಪಾರಣೆಯನ್ನು ಹೇಗೆ ಮಾಡಬೇಕೆಂದರೆ ಆ ದಿನ ಜಲವನ್ನು ಸೇವಿಸಿ ಮೊದಲು ಪಾರಣೆಯನ್ನು ಮಾಡಬೇಕು. ಆನಂತರ ಭೋಜನ ಮಾಡಿದರೂ ಪುನರ್ಭುಕ್ತಿಯ ದೋಷ ಬರುವದಿಲ್ಲ || ೧೧೫ || ವಿಷ್ಣುಭಕ್ತನ ಮುಖದಿಂದ ಹೊರಬರುವ ಮಂಗಲಕರವಾದ

ಯಃ ಶೃಣೋತಿ ದಿವಾರಾತ್ರೌ ನರೋ ವಿಷ್ಣುಪರಾಯಣಃ |
ತದ್ವಕ್ತ್ರಮುಖನಿಷ್ಪನ್ನಾಂ ಕಥಾಂ ವಿಷ್ಣೋಃ ಸುಮಂಗಲಾಮ್ || ೧೧೬ ||

ಕಲ್ಪಕೋಟಿಸಮಾಯುಕ್ತೋ ವಿಷ್ಣುಲೋಕೇ ಮಹೀಯತೇ |
ಏಕಾದಶ್ಯಾಶ್ಚ ಮಾಹಾತ್ಮ್ಯಂ ಪಾದಮೇಕಂ ಶೃಣೋತಿ ಯಃ || ೧೧೭ ||

ಬ್ರಹ್ಮಹತ್ಯಾದಿಕಂ ಪಾಪಂ ನಶ್ಯತೇ ನಾತ್ರ ಸಂಶಯಃ |
ವಿಷ್ಣುಧರ್ಮಸಮಂ ನಾಸ್ತಿ ವ್ರತಂ ನಾಮ ಸನಾತನಮ್ || ೧೧೮ ||

|| ಇತಿ ಶ್ರೀಭವಿಷ್ಯೋತ್ತರ ಪುರಾಣೇ ಶ್ರೀಕೃಷ್ಣಾರ್ಜುನಸಂವಾದೇ
ಮಾರ್ಗಶೀರ್ಷ ಕೃಷ್ಣೈಕಾದಶೀವ್ರತ ಮಾಹಾತ್ಮ್ಯಂ ಸಂಪೂರ್ಣಮ್ ||

|| ೧ ||

---

ವಿಷ್ಣುಕಥೆಯನ್ನು ವಿಷ್ಣುಪರಾಯಣನಾದ ಯಾವನು ಸದಾಕಾಲ ಶ್ರವಣಮಾಡುವನೋ ಅವನು || ೧೧೬ || ಕೋಟಿಕಲ್ಪಗಳವರೆಗೆ ವಿಷ್ಣುಲೋಕದಲ್ಲಿ ಸುಖದಿಂದ ಇರುವನು. ಇನ್ನು ಯಾವನು ಏಕಾದಶೀ ಮಹಾತ್ಮೆಯ ಕಾಲುಭಾಗವನ್ನು ಮಾತ್ರ ಕೇಳುವನೋ || ೧೧೭|| ಅವನ ಬ್ರಹ್ಮಹತ್ಯಾದಿ ಪಾಪಗಳೇನಾದರೂ ಇದ್ದರೆ ಅವೆಲ್ಲವೂ ಖಂಡಿತವಾಗಿ ನಾಶವಾಗುವವು. ಏಕಾದಶೀ ವ್ರತವೆಂಬ ವಿಷ್ಣುಧರ್ಮಕ್ಕೆ ಸಮಾನವಾದ ಬೇರೊಂದು ಪುರಾತನ ವ್ರತವಿಲ್ಲವು || ೧೧೮ ||

|| ಇಲ್ಲಿಗೆ ಶ್ರೀ ಭವಿಷ್ಯೋತ್ತರ ಪುರಾಣದಲ್ಲಿ ಶ್ರೀ ಕೃಷ್ಣ ಅರ್ಜುನರ ಸಂವಾದದಲ್ಲಿ
ಮಾರ್ಗಶೀರ್ಷ ಕೃಷ್ಣ ಏಕಾದಶೀವ್ರತ ಮಹಾತ್ಮೆಯು ಸಮಾಪ್ತವಾಯಿತು ||

|| ಶ್ರೀಕೃಷ್ಣಾರ್ಪಣಮಸ್ತು ||

# ಮಾರ್ಗಶೀರ್ಷ ಶುಕ್ಲೈಕಾದಶೀವ್ರತ ಕಥಾ

**ಯುಧಿಷ್ಠಿರ ಉವಾಚ**

**ವಂದೇ ವಿಷ್ಣುಂ ಪ್ರಭುಂ ಸಾಕ್ಷಾಲ್ಲೋಕತ್ರಯಸುಖಪ್ರದಮ್ |**
**ವಿಶ್ವೇಶಂ ವಿಶ್ವಕರ್ತಾರಂ ಪುರಾಣಂ ಪುರುಷೋತ್ತಮಮ್ || ೧ ||**

**ಪೃಚ್ಛಾಮಿ ದೇವದೇವೇಶ ಸಂಶಯೋಽಸ್ತಿ ಮಹಾನ್ಮಮ |**
**ಲೋಕಾನಾಂ ತು ಹಿತಾರ್ಥಾಯ ಪಾಪಾನಾಂ ಹಿ ಶಮಾಯ ಚ || ೨ ||**

**ಮಾರ್ಗಶೀರ್ಷೇ ಸಿತೇ ಪಕ್ಷೇ ಕಿಂ ನಾಮ್ನ್ಯೈಕಾದಶೀ ಭವೇತ್ |**
**ಕೀದೃಶಶ್ಚ ವಿಧಿಸ್ತಸ್ಯಾಃ ಕೋ ದೇವಸ್ತತ್ರ ಪೂಜ್ಯತೇ || ೩ ||**

**ಏತದಾಚಕ್ಷ್ವ ಮೇ ಸ್ವಾಮಿನ್ ವಿಸ್ತರೇಣ ಯಥಾತಥಮ್ |**

**ಶ್ರೀಕೃಷ್ಣ ಉವಾಚ**

**ಸಮ್ಯಕ್ ಪೃಷ್ಟಂ ತ್ವಯಾ ರಾಜನ್ ಸಾಧು ತೇ ವಿಪುಲಂ ಯಶಃ || ೪ ||**

**ಕಥಯಿಷ್ಯಾಮಿ ರಾಜೇಂದ್ರ ಹರಿವಾಸರಮುತ್ತಮಮ್ |**
**ಉತ್ಪನ್ನಾ ಸಾಽಸಿತೇ ಪಕ್ಷೇ ದ್ವಾದಶೀ ಮಮ ವಲ್ಲಭಾ || ೫ ||**

ಶ್ರೀಕೃಷ್ಣಾ, ತ್ರಿಲೋಕಗಳಿಗೂ ಸುಖಪ್ರದನಾದ, ಪ್ರಭುವಾದ, ವಿಶ್ವೇಶ್ವರನಾದ, ವಿಶ್ವಕರ್ತನಾದ, ಪುರಾಣ ಪುರುಷೋತ್ತಮನಾದ, ಸರ್ವತ್ರ ವ್ಯಾಪ್ತನಾಗಿ ವಿಷ್ಣುಶಬ್ದವಾಚ್ಯನಾದ ನಿನ್ನನ್ನು ಭಕ್ತಿಯಿಂದ ನಮಿಸುತ್ತೇನೆ || ೧ || ಹೇ ದೇವದೇವೇಶಾ, ನನ್ನಲ್ಲಿ ಒಂದು ದೊಡ್ಡ ಸಂದೇಹವು ಉಳಿದಿದೆ. ಸಕಲ ಜನರಿಗೂ ಕ್ಷೇಮವಾಗುವದಕ್ಕಾಗಿ ಮತ್ತು ಸರ್ವಪಾಪಗಳ ನಾಶವಾಗುವದಕ್ಕಾಗಿ ಆ ಸಂಶಯನಿವಾರಣೆಗೋಸ್ಕರ ನಿನ್ನನ್ನು ಕುರಿತು ಪ್ರಶ್ನಿಸುತ್ತಿದ್ದೇನೆ || ೨ || ಏನೆಂದರೆ ಮಾರ್ಗಶೀರ್ಷ ಮಾಸದ ಶುಕ್ಲಪಕ್ಷದ ಏಕಾದಶಿಯು ಯಾವ ಹೆಸರಿನಿಂದ ಕರೆಯಲ್ಪಡುತ್ತದೆ, ಆ ದಿನದಂದು ಮಾಡಬೇಕಾದ ವ್ರತದ ವಿಧಾನವೇನು? ಹಾಗೂ ಆ ದಿನ ಯಾವ ದೇವತೆಯನ್ನು ಪೂಜಿಸಬೇಕು? || ೩ || ಹೇ ಸ್ವಾಮಿನ್, ನನಗೆ ಇದೆಲ್ಲದರ ಬಗ್ಗೆ ಯಥಾವತ್ತಾಗಿ ವಿಸ್ತಾರದಿಂದ ತಿಳಿಸಿ ಅನುಗ್ರಹಿಸಬೇಕು. ಈ ರೀತಿಯಾಗಿ ಯುಧಿಷ್ಠರನು ಶ್ರೀಕೃಷ್ಣನನ್ನು ಕುರಿತು ಪ್ರಾರ್ಥಿಸಲು ಆಗ ಶ್ರೀ ಕೃಷ್ಣನು ಹೇಳಿದನು -ಹೇ ರಾಜಾ, ನೀನು ಉತ್ತಮವಾದ ಪ್ರಶ್ನೆಯನ್ನು ಮಾಡಿರುವಿ. ನಿನಗೆ ವಿಪುಲವಾದ ಯಶಸ್ಸು ಪ್ರಾಪ್ತವಾಗಲಿ || ೪ || ಹೇ ರಾಜೇಂದ್ರ ನಿನಗೀಗ ಏಕಾದಶಿಯ ಮಹಾತ್ಮೆಯನ್ನು ತಿಳಿಸುವೆನು ಕೇಳು. ಮಾರ್ಗಶೀರ್ಷ ಕೃಷ್ಣಪಕ್ಷದ ಏಕಾದಶಿಯು ಉತ್ಪನ್ನಾ ಎಂಬ ಹೆಸರಿನದಾಗಿದ್ದು ಅದು ನನಗೆ ಅತಿ ಪ್ರಿಯವಾಗಿದೆ || ೫ || ಹೇ ರಾಜಾ, ಆ ಏಕಾದಶಿಯು

ಮಾರ್ಗಶೀರ್ಷೇ ಸಮುತ್ಪನ್ನಾ ಮಮ ದೇಹಾಂತರಾಧಿಪ |
ಮುರಾಸುರವಧಾರ್ಥಾಯ ಪ್ರಖ್ಯಾತಾ ಮಮ ವಲ್ಲಭಾ || ೬ ||

ಕಥಿತಾ ಸಾ ಮಯಾ ಚೈವ ತ್ವದಗ್ರೇ ರಾಜಸತ್ತಮ |
ಪೂರ್ವಮೇಕಾದಶೀ ರಾಜನ್ ತ್ರೈಲೋಕ್ಯೇ ಸಚರಾಚರೇ || ೭ ||

ಮಾರ್ಗಶೀರ್ಷೇऽಸಿತೇ ಪಕ್ಷೇ ಚೋತ್ಪತ್ತಿರಿತಿ ನಾಮತಃ |
ಅತಃ ಪರಂ ಪ್ರವಕ್ಷ್ಯಾಮಿ ಮಾರ್ಗಶೀರ್ಷಸಿತಾಂ ತಥಾ || ೮ ||

ಮೋಕ್ಷಾ ನಾಮ್ನಾತಿವಿಖ್ಯಾತಾಂ ಸರ್ವಪಾಪಹರಾಂ ಪರಾಮ್ |
ದೇವಂ ದಾಮೋದರಂ ತಸ್ಯಾಂ ಪೂಜಯೇಚ್ಚ ಪ್ರಯತ್ನತಃ || ೯ ||

ತುಲಸ್ಯಾ ಮಂಜರೀಭಿಶ್ಚ ಧೂಪದೀಪೈರ್ಮನೋರಮೈಃ |
ಶೃಣು ರಾಜೇಂದ್ರ ವಕ್ಷ್ಯಾಮಿ ಕಥಾಂ ಪೌರಾಣಿಕೀಂ ಶುಭಾಮ್ || ೧೦ ||

ಯಸ್ಯಾಃ ಶ್ರವಣಮಾತ್ರೇಣ ವಾಜಪೇಯಫಲಂ ಭವೇತ್ |
ಅಧೋಗತಿಂ ಗತಾ ಯೇ ವೈ ಪಿತೃಮಾತೃಸುತಾದಯಃ || ೧೧ ||

ಅಸ್ಯಾಃ ಪುಣ್ಯಪ್ರಭಾವೇಣ ಸ್ವರ್ಗಂ ಯಾಂತಿ ನ ಸಂಶಯಃ |
ಏತಸ್ಮಾತ್ಕಾರಣಾದ್ರಾಜನ್ ಮಹಿಮಾನಂ ಶೃಣುಷ್ವ ತಮ್ || ೧೨ ||

---

ಮುರಾಸುರನ ಸಂಹಾರಕ್ಕಾಗಿ ನನ್ನ ದೇಹದಿಂದ ಮಾರ್ಗಶೀರ್ಷ ಮಾಸದಲ್ಲಿ ಉತ್ಪನ್ನವಾದುದರಿಂದ ಅದು ನನಗೆ ಅತಿ ಪ್ರಿಯವಾಗಿದೆ || ೬ || ಹೇ ರಾಜಶ್ರೇಷ್ಠನಾದ ಯುಧಿಷ್ಠಿರನೇ, ಈ ಏಕಾದಶಿಯ ವಿಷಯವಾಗಿ ಈ ಮೊದಲು ತ್ರಿಲೋಕಗಳ ಎಲ್ಲ ಚರಾಚರ ಪ್ರಾಣಿಗಳಿಗೆ ತಿಳಿಯುವಂತೆ ವಿಸ್ತಾರವಾಗಿ ಹೇಳಿದ್ದೇನೆ || ೭ || ಮಾರ್ಗಶೀರ್ಷ ಕೃಷ್ಣಪಕ್ಷದ ಆ ಏಕಾದಶಿಯು ಉತ್ಪತ್ತಿ ಎಂಬ ಹೆಸರಿನಿಂದಲೂ ಪ್ರಸಿದ್ಧವಾಗಿದೆ. ಇನ್ನು ಮುಂದೆ ಮಾರ್ಗಶೀರ್ಷ ಮಾಸದ ಶುಕ್ಲಪಕ್ಷದ ಏಕಾದಶಿಯ ಬಗ್ಗೆ ತಿಳಿಸುವೆನು ಕೇಳು || ೮ || ಈ ಏಕಾದಶಿಯು ಮೋಕ್ಷಾ ಎಂಬ ಹೆಸರಿನಿಂದ ಪ್ರಸಿದ್ಧವಾಗಿದ್ದು ಸಕಲಪಾಪಗಳನ್ನು ಕಳೆಯಲು ಸಮರ್ಥವಾಗಿದೆ. ಅಂದಿನ ದಿನ ಶ್ರೀಹರಿದಾಮೋದರನನ್ನು || ೯ || ತುಳಸಿಯ ಕೋಮಲವಾದ ದಳಗಳಿಂದಲೂ, ಮನೋಹರವಾದ ಧೂಪದೀಪಗಳಿಂದಲೂ ಭಕ್ತಿಯಿಂದ ಪೂಜಿಸಬೇಕು. ಹೇ ರಾಜೇಂದ್ರಾ, ಈ ಏಕಾದಶಿಯ ವಿಷಯದಲ್ಲಿರುವ ಮಂಗಳಕರವಾದ ಒಂದು ಪೌರಾಣಿಕ ಕಥೆಯನ್ನು ಹೇಳುವೆನು ಕೇಳು || ೧೦ || ಈ ಕಥೆಯನ್ನು ಕೇಳುವ ಮಾತ್ರದಿಂದ ವಾಜಪೇಯ ಯಾಗದಿಂದ ಬರುವಷ್ಟು ಪುಣ್ಯಫಲವು ಲಭಿಸುವದು. ತಂದೆ, ತಾಯಿ, ಸುತಾದಿಗಳೇನಾದರೂ ಅಧೋಗತಿಯನ್ನು ಹೊಂದಿದ್ದರೆ || ೧೧ || ಈ ಏಕಾದಶೀವ್ರತದ ಪುಣ್ಯಪ್ರಭಾವದಿಂದ ನಿಶ್ಚಯವಾಗಿ ಸ್ವರ್ಗವನ್ನು ಹೊಂದುತ್ತಾರೆ.

ಚಂಪಕೇ ನಗರೇ ರಮ್ಯೇ ವೈಷ್ಣವೈಸ್ತು ವಿಭೂಷಿತೇ |
ವೈಖಾನಸೇತಿ ರಾಜರ್ಷಿಃ ಪುತ್ರವತ್ ಪಾಲಯನ್ ಪ್ರಜಾಃ || ೧೩ ||

ದ್ವಿಜಾಶ್ಚ ನ್ಯವಸಂಸ್ತತ್ರ ಚತುರ್ವೇದಪರಾಯಣಾಃ |
ಏವಂ ಸ ರಾಜ್ಯಂ ಕುರ್ವಾಣೋ ರಾತ್ರೌ ತು ಸ್ವಪ್ನಮಧ್ಯತಃ || ೧೪ ||

ದದರ್ಶ ಜನಕಂ ಸ್ವಂ ತು ಅಧೋಯೋನಿಗತಂ ನೃಪಃ |
ಏವಂ ದೃಷ್ಟ್ವಾ ತು ತಂ ತತ್ರ ವಿಸ್ಮಯೋತ್ಫುಲ್ಲಲೋಚನಃ || ೧೫ ||

ಕಥಯಾಮಾಸ ವೃತ್ತಾಂತಂ ದ್ವಿಜಾಗ್ರೇ ಸ್ವಪ್ನಸಂಭವಮ್ |
ರಾಜೋವಾಚ -
ಮಯಾ ತು ಸ್ವಪಿತಾ ದೃಷ್ಟೋ ನರಕೇ ಪತಿತೋ ದ್ವಿಜಾಃ || ೧೬ ||

ತಾರಯಸ್ವೇತಿ ಮಾಂ ತಾತ ಅಧೋಯೋನಿಗತಂ ಸುತ |
ಇತಿ ಬ್ರುವಾಣಃ ಸ ತದಾ ಮಯಾ ದೃಷ್ಟಃ ಪಿತಾ ಸ್ವಯಮ್ || ೧೭ ||

ತದಾಪ್ರಭೃತಿ ಭೋ ವಿಪ್ರಾಃ ನಾಹಂ ಶರ್ಮ ಲಭಾಮ್ಯಹೋ |
ಏತದ್ರಾಜ್ಯಂ ಮಮ ಮಹದಸಹ್ಯಮಸುಖಂ ತಥಾ || ೧೮ ||

ಅಶ್ವಾ ಗಜಾ ರಥಾಶ್ಚೈವ ನ ಮೇ ರೋಚಂತಿ ಸರ್ವಥಾ |
ನ ಕೋಶೋऽಪಿ ಸುಖಾಯೇತಿ ನ ಕಿಂಚಿತ್ಸುಖದಂ ಮಮ || ೧೯ ||

---

ಆದ್ದರಿಂದ ಹೇ ರಾಜಾ, ಈ ವ್ರತದ ಮಹಿಮೆಯನ್ನು ಕೇಳುವವನಾಗು || ೧೨ || ಹಿಂದಕ್ಕೆ ಅನೇಕ ವಿಷ್ಣುಭಕ್ತರಿಂದ ಕೂಡಿದ ಚಂಪಕವೆಂಬ ಹೆಸರಿನ ರಮ್ಯವಾದ ಒಂದು ನಗರದಲ್ಲಿ ವೈಖಾನಸ ಎಂಬ ಹೆಸರಿನ ಒಬ್ಬ ರಾಜರ್ಷಿಯು ತನ್ನ ಪ್ರಜೆಗಳನ್ನು ಮಕ್ಕಳಂತೆ ಪಾಲಿಸುತ್ತಲಿದ್ದನು || ೧೩ || ಅವನ ರಾಜ್ಯದಲ್ಲಿ ಚತುರ್ವೇದ ಪರಾಯಣರಾದ ದ್ವಿಜರು ವಾಸವಾಗಿದ್ದರು. ಪ್ರಜಾಪರಿಪಾಲನೆಯನ್ನು ಮಾಡುತ್ತಲಿದ್ದ ರಾಜನು ಒಂದು ರಾತ್ರಿ ಸ್ವಪ್ನದಲ್ಲಿ || ೧೪ || ತನ್ನ ತಂದೆಯು ನರಕದಲ್ಲಿ ಬಿದ್ದಿರುವದನ್ನು ಕಂಡು ಆಶ್ಚರ್ಯಚಕಿತನಾದನು. ದುಃಖದಿಂದ ಕಣ್ಣೀರು ಸುರಿಸುತ್ತ || ೧೫ || ಸ್ವಪ್ನವೃತ್ತಾಂತವನ್ನು ಮರುದಿನ ಬ್ರಾಹ್ಮಣರ ಮುಂದೆ ನಿವೇದಿಸಿದನು. ಭೋ ಬ್ರಾಹ್ಮಣಶ್ರೇಷ್ಠರೇ, ನಿನ್ನೆ ಸ್ವಪ್ನದಲ್ಲಿ ನರಕದಲ್ಲಿ ಬಿದ್ದಿರುವ ನನ್ನ ತಂದೆಯು || ೧೬ || ಮಗನೇ, ನನ್ನನ್ನು ನರಕದಿಂದ ಉದ್ಧಾರ ಮಾಡು ಎಂದು ಕೂಗುತ್ತಿರುವದನ್ನು ಕಂಡೆನು || ೧೭ || ಭೋ ವಿಪ್ರರೇ, ಆ ಕ್ಷಣದಿಂದ ನನಗೆ ಮನಶ್ಶಾಂತಿ ಎಂಬುದಿಲ್ಲ. ವಿಶಾಲವಾದ ಈ ರಾಜ್ಯವು ನನಗೆ ಅಸಹ್ಯವೂ, ಅಸುಖವೂ ಆಗಿ ತೋರುತ್ತಿದೆ || ೧೮ || ರಾಜ್ಯದಲ್ಲಿರುವ ಶ್ರೇಷ್ಠವಾದ ಅಶ್ವಗಳು, ಆನೆಗಳು, ಹಾಗೂ ರಥಾದಿಗಳಾವವೂ ನನಗೆ ರುಚಿಸುತ್ತಿಲ್ಲ. ಸಮೃದ್ಧವಾದ ಕೋಶಾಗಾರವೂ ನನಗೆ

ನ ದಾರಾ ನ ಸುತಾ ಮಹ್ಯಂ ರೋಚಂತೇ ದ್ವಿಜಸತ್ತಮಾಃ |
ಕಿಂ ಕರೋಮಿ ಕ್ವ ಗಚ್ಛಾಮಿ ಶರೀರಂ ಮೇ ತು ದಹ್ಯತೇ || ೨೦ ||

ದಾನಂ ವ್ರತಂ ತಪೋ ಯೋಗೋ ಯೇನೈವ ಮಮ ಪೂರ್ವಜಾಃ |
ಮೋಕ್ಷಮಾಯಾಂತಿ ವಿಪ್ರೇಂದ್ರಾಸ್ತದೇವ ಕಥಯಂತು ಮೇ || ೨೧ ||

ಕಿಂ ತೇನ ಜೀವತಾ ಲೋಕೇ ಸುಪುತ್ರೇಣ ಬಲೀಯಸಾ |
ಪಿತಾ ತು ಯಸ್ಯ ನರಕೇ ತಸ್ಯ ಜನ್ಮ ನಿರರ್ಥಕಮ್ || ೨೨ ||

ಬ್ರಾಹ್ಮಣಾ ಊಚುಃ -

ಪರ್ವತಸ್ಯ ಮುನೇರತ್ರ ಆಶ್ರಮೋ ನಿಕಟೇ ನೃಪ |
ಗಮ್ಯತಾಂ ರಾಜಶಾರ್ದೂಲ ಭೂತಂ ಭವ್ಯಂ ವಿಜಾನತಃ || ೨೩ ||

ತೇಷಾಂ ಶ್ರುತ್ವಾ ತತೋ ವಾಕ್ಯಂ ವಿಷಣ್ಣೋ ರಾಜಸತ್ತಮಃ |
ಜಗಾಮ ತತ್ರ ಯತ್ರಾಸೌ ಆಶ್ರಮೇ ಪರ್ವತೋ ಮುನಿಃ || ೨೪ ||

ಬ್ರಾಹ್ಮಣೈರ್ವೇಷ್ಟಿತಃ ಶಾಂತೈಃ ಪ್ರಜಾಭಿಶ್ಚ ಸಮಂತತಃ |
ಆಶ್ರಮೋ ವಿಪುಲಸ್ತಸ್ಯ ಮುನಿಭಿಃ ಸನ್ನಿಷೇವಿತಃ || ೨೫ ||

ಋಗ್ವೇದಿಭಿರ್ಯಾಜುಷೈಶ್ಚ ಸಾಮಾಥರ್ವಣಕೋವಿದೈಃ |
ವೇಷ್ಟಿತೋ ಮುನಿಭಿಸ್ತತ್ರ ದ್ವಿತೀಯ ಇವ ಪದ್ಮಜಃ || ೨೬ ||

ಸುಖಪ್ರದವಾಗಿಲ್ಲ ||೧೯|| ದ್ವಿಜಶ್ರೇಷ್ಠರೇ, ಹೆಂಡತಿ ಮಕ್ಕಳೂ ಕೂಡ ನನಗೆ ರುಚಿಸುತ್ತಿಲ್ಲ. ಏನು ಮಾಡಲಿ. ಎಲ್ಲಿಗೆ ಹೋಗಲಿ ? ನನ್ನ ದೇಹವು ಸುಡುತ್ತಿದೆ || ೨೦ || ವಿಪ್ರೇಂದ್ರರೇ, ನನ್ನ ಪೂರ್ವಜರು ನರಕದಿಂದ ಉದ್ಧೃತರಾಗಿ ಮೋಕ್ಷವನ್ನು ಸೇರುವಂತೆ ನಾನು ಮಾಡಬೇಕಾದ ಏನಾದರೂ ದಾನ, ವ್ರತ, ತಪಸ್ಸು, ಯೋಗ ಮೊದಲಾದ ಉಪಾಯಗಳಿದ್ದರೆ ದಯವಿಟ್ಟು ನನಗೆ ತಿಳಿಸಿರಿ || ೨೧ || ಯಾವನ ತಂದೆಯು ನರಕದಲ್ಲಿ ಬಿದ್ದಿರುವನೋ ಅಂಥವನು ಬಲಿಷ್ಠನಾದ ಸುಪುತ್ರನಾಗಿದ್ದರೂ ಅವನು ಜೀವಿಸಿದ್ದು ಏನು ಪ್ರಯೋಜನ ? ಅವನ ಜನ್ಮವು ನಿರರ್ಥಕವೇ ಸರಿ || ೨೨ || ಈ ಬಗೆಯಾಗಿ ರಾಜನು ದುಃಖಿಸುತ್ತಿರಲು ಅಲ್ಲಿದ್ದ ಬ್ರಾಹ್ಮಣರು ಹೇ ರಾಜಾ, ಇಲ್ಲಿಯೇ ಸನಿಹದಲ್ಲಿ ಪರ್ವತ ಎಂಬ ಮುನಿಯ ಆಶ್ರಮವಿದೆ ಭೂತ, ಭವಿಷ್ಯಗಳನ್ನು ಚೆನ್ನಾಗಿ ಬಲ್ಲ ಆ ಮುನಿಯ ಆಶ್ರಮಕ್ಕೆ ಹೋಗಿ ಎಲ್ಲವನ್ನೂ ವಿಚಾರಿಸು ಎಂದು ತಿಳಿಸಿದರು || ೨೩ || ವಿಷಣ್ಣನಾದ ರಾಜನು ಬ್ರಾಹ್ಮಣರ ಮಾತಿನಂತೆ ಪರ್ವತಮುನಿಯ ಆಶ್ರಮಕ್ಕೆ ಬಂದನು. || ೨೪ || ಶಾಂತಸ್ವಭಾವದ ಬ್ರಾಹ್ಮಣರಿಂದಲೂ, ಪ್ರಜೆಗಳಿಂದಲೂ, ಅನೇಕ ಮುನಿಗಳಿಂದಲೂ ತುಂಬಿದ ಆ ಆಶ್ರಮವು ಬಹು ಶೋಭಿಸುತ್ತಿದ್ದಿತು. ||೨೫|| ಆಶ್ರಮದಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ ಹಾಗೂ

ದೃಷ್ಟ್ವಾ ತಂ ಮುನಿಶಾರ್ದೂಲಂ ರಾಜಾ ವೈಖಾನಸಸ್ತದಾ |
ಜಗಾಮ ಚಾವನಿಂ ಮೂರ್ಧ್ನಾ ದಂಡವತ್ಪ್ರಣನಾಮ ಚ || ೨೭ ||

ಪಪ್ರಚ್ಛ ಕುಶಲಂ ತಸ್ಯ ಸಪ್ತಸ್ವಂಗೇಷ್ವಸೌ ಮುನಿಃ |
ರಾಜ್ಯೇ ನಿಷ್ಕಂಟಕತ್ವಂ ಚ ರಾಜಸೌಖ್ಯಸಮನ್ವಿತಮ್ || ೨೮ ||

ರಾಜೋವಾಚ -

ತವ ಪ್ರಸಾದಾದ್ಭೋ ವಿಪ್ರ ಕುಶಲಂ ಮೇಽಂಗಸಪ್ತಕೇ |
ವಿಭವೇಷ್ವನುಕೂಲೇಷು ಕಶ್ಚಿದ್ವಿಘ್ನ ಉಪಸ್ಥಿತಃ || ೨೯ ||

ಏತನ್ಮೇ ಸಂಶಯಂ ಬ್ರಹ್ಮನ್ ಪ್ರಷ್ಟುಂ ತ್ವಾಂ ಚ ಸಮಾಗತಃ |
ಏವಂ ಶ್ರುತ್ವಾ ನೃಪವಚಃ ಪರ್ವತೋ ಮುನಿಸತ್ತಮಃ || ೩೦ ||

ಧ್ಯಾನಸ್ತಿಮಿತನೇತ್ರೋಽಸೌ ಭೂತಂ ಭವ್ಯಂ ವ್ಯಚಿಂತಯತ್ |
ಮುಹೂರ್ತಮೇಕಂ ಧ್ಯಾತ್ವಾ ಚ ಪ್ರತ್ಯುವಾಚ ನೃಪೋತ್ತಮಮ್ || ೩೧ ||

ಮುನಿರುವಾಚ -

ಜಾನೇಽಹಂ ತವ ರಾಜೇಂದ್ರ ಪಿತುಃ ಪಾಪಂ ವಿಕರ್ಮಣಃ |
ಪೂರ್ವಜನ್ಮನಿ ತೇ ಪಿತ್ರಾ ಸಪತ್ನೀಕೃತದ್ವೇಷತಃ || ೩೨ ||

---

ಅಥರ್ವಣವೇದಗಳಲ್ಲಿ ತಜ್ಞರಾದ ಮುನಿಗಳಿಂದ ಸುತ್ತುವರಿಯಲ್ಪಟ್ಟ ಪರ್ವತ ಮುನಿಯು ಇನ್ನೊಬ್ಬ ಬ್ರಹ್ಮನೋ ಎಂಬಂತೆ ರಾರಾಜಿಸುತ್ತಿದ್ದನು. || ೨೬ || ಇಂಥ ಮುನಿಶ್ರೇಷ್ಠನನ್ನು ಕಂಡು ವೈಖಾನಸ ರಾಜನು ಅವನಿಗೆ ದಂಡವತ್ ನಮಿಸಿದನು || ೨೭ || ಆಗ ಮುನಿಯು ರಾಜ್ಯದ ಸಪ್ತಾಂಗಗಳ ಕ್ಷೇಮದ ಬಗ್ಗೆ, ರಾಜ್ಯವು ನಿಷ್ಕಂಟಕವಾಗಿರುವ ಬಗ್ಗೆ ಮತ್ತು ರಾಜನ ಕ್ಷೇಮ ಸಮಾಚಾರದ ಬಗ್ಗೆಯೂ ಕುಶಲಪ್ರಶ್ನೆಯನ್ನು ಮಾಡಲು || ೨೮ || ರಾಜನು ಹೇಳಿದನು ಭೋ ಮುನಿವರ್ಯರೇ, ನಿಮ್ಮ ಅನುಗ್ರಹದಿಂದ ನನ್ನ ರಾಜ್ಯದ ಸಪ್ತಾಂಗಗಳೂ ಕ್ಷೇಮದಿಂದಿವೆ. ಸಕಲ ಸಂಪತ್ತುಗಳೂ ಅನುಕೂಲವಾಗಿವೆ. ಹೀಗಿದ್ದರೂ ನನಗೊಂದು ಆತಂಕವು ಒದಗಿದೆ || ೨೯ || ಪೂಜ್ಯರೇ ಆ ಬಗ್ಗೆ ವಿಚಾರಿಸಲು ನಾನು ತಮ್ಮ ಸನ್ನಿಧಿಗೆ ಬಂದಿರುವೆನು. ರಾಜನ ಈ ಮಾತುಗಳನ್ನು ಕೇಳಿದ ಪರ್ವತಮುನಿಯು || ೩೦ || ಕಣ್ಣುಮುಚ್ಚಿ ಧ್ಯಾನಾಸಕ್ತನಾಗಿ ಭೂತ ಮತ್ತು ಭವಿಷ್ಯಗಳ ಬಗ್ಗೆ ವಿಚಾರಿಸಿದನು. ಈ ರೀತಿ ಒಂದು ಕ್ಷಣಹೊತ್ತು ವಿಚಾರಿಸಿ ತಿಳಿದು ನಂತರ ರಾಜನನ್ನು ಕುರಿತು ಹೇಳಿದನು || ೩೧ || ಹೇ ರಾಜೇಂದ್ರಾ, ನಿನ್ನ ತಂದೆಯ ಪಾಪ ಕರ್ಮವನ್ನು ತಿಳಿದೆನು. ಪೂರ್ವಜನ್ಮದಲ್ಲಿ ನಿನ್ನ ತಂದೆಯು ತನ್ನ ಅನೇಕ ಪತ್ನಿಯರಲ್ಲಿ ಒಬ್ಬಳು ತನ್ನಲ್ಲಿ ಮಾಡಿದ ದ್ವೇಷದ ಕಾರಣದಿಂದ

ಕಾಮಾಸಕ್ತೇನ ಚೈಕಸ್ಯಾಃ ಋತುಭಂಗಃ ಕೃತಃ ಸ್ತ್ರಿಯಃ |
ತ್ರಾಹಿ ದೇಹೀತಿ ಜಲ್ಪಂತ್ಯಾ ಅನ್ಯಸ್ಯಾಶ್ಚ ನರಾಧಿಪ || ೩೩ ||

ತೇನ ವೈ ತವ ಪಿತ್ರಾ ತು ನ ದತ್ತೋ ಋತುರಾಗ್ರಹಾತ್ |
ಕರ್ಮಣಾ ತೇನ ಸತತಂ ನರಕೇ ಪತಿತೋ ಹ್ಯಯಮ್ || ೩೪ ||

ರಾಜೋವಾಚ -

ಕೇನ ವ್ರತೇನ ದಾನೇನ ಮೋಕ್ಷಸ್ತಸ್ಯ ಭವೇನ್ಮುನೇ |
ನಿರಯಾತ್ಪಾಪಸಂಯುಕ್ತಾತ್ತನ್ಮಮಾಚಕ್ಷ್ವ ಪೃಚ್ಛತಃ || ೩೫ ||

ಮುನಿರುವಾಚ -

ಮಾರ್ಗಶೀರ್ಷೇ ಸಿತೇ ಪಕ್ಷೇ ಮೋಕ್ಷನಾಮ್ನೀ ಹರೇಸ್ತಿಥಿಃ |
ಸರ್ವೈಸ್ತು ತದ್ವ್ರತಂ ಕೃತ್ವಾ ಪಿತ್ರೇ ಪುಣ್ಯಂ ಪ್ರದೀಯತಾಮ್ || ೩೬ ||

ತಸ್ಯಾಃ ಪುಣ್ಯಪ್ರಭಾವೇಣ ಮೋಕ್ಷಸ್ತಸ್ಯ ಭವಿಷ್ಯತಿ |
ಮುನೇರ್ವಾಕ್ಯಂ ತತಃ ಶ್ರುತ್ವಾ ನೃಪಃ ಸ್ವಗೃಹಮಾಗತಃ || ೩೭ ||

ಆಗ್ರಹಾಯಣಿಕೇ ಶುಕ್ಲಾ ಪ್ರಾಪ್ತಾ ಭರತಸತ್ತಮ |
ಅಂತಃಪುರಚರೈಃ ಸರ್ವೈಃ ಪುತ್ರೈರ್ದಾರೈಸ್ತದಾ ನೃಪಃ || ೩೮ ||

(ಕಾಮಾಸಕ್ತನಾದ ತನ್ನನ್ನು ನಿರಾಕರಿಸಿದ ಸಿಟ್ಟಿನಿಂದ) || ೩೨ || ಕಾಮಾಸಕ್ತನಾಗಿದ್ದ ಅವನು ಒಬ್ಬ ಸ್ತ್ರೀಯ ಋತುಭಂಗವನ್ನು ಮಾಡಿದನು. ಮತ್ತು ಇನ್ನೊಬ್ಬ ಸ್ತ್ರೀಯು ಕಾಮಪೀಡಿತಳಾಗಿ, ರಕ್ಷಿಸಿರಿ, ಋತುದಾನ ಮಾಡಿರಿ ಎಂದು ಬಡಬಡಿಸುತ್ತಿದ್ದರೂ || ೩೩ || ಆಗ್ರಹದಿಂದ ಅವಳನ್ನು ಭೋಗಿಸದೇ ನಿರಾಕರಿಸಿದನು. ಈ ವಿಧದ ಕರ್ಮದಿಂದಲೇ ನಿನ್ನ ತಂದೆಯು ನರಕದಲ್ಲಿ ಬಿದ್ದಿರುವನು || ೩೪ || ಇದನ್ನು ಕೇಳಿ ರಾಜನು - ಭೋ ಮುನಿಗಳೇ, ಯಾವ ವ್ರತ ಹಾಗೂ ದಾನಗಳಿಂದ ನನ್ನ ತಂದೆಗೆ ಪಾಪಯುಕ್ತವಾದ ಆ ನರಕದಿಂದ ಮೋಕ್ಷವಾದೀತು ಎಂಬುದನ್ನು ತಿಳಿಸಿರಿ ಎಂಬು ಪ್ರಾರ್ಥಿಸಲು || ೩೫ || ಮುನಿಯು ಹೇಳಿದನು - ಹೇ ರಾಜಾ, ಮಾರ್ಗಶೀರ್ಷ ಮಾಸದ ಶುಕ್ಲಪಕ್ಷದ ಏಕಾದಶಿಯು ಮೋಕ್ಷದಾ ಎಂದು ಪ್ರಸಿದ್ಧವಾಗಿದೆ. ನೀವೆಲ್ಲರೂ ಅಂದಿನ ವ್ರತವನ್ನು ಆಚರಿಸಿ ಬಂದ ಪುಣ್ಯವನ್ನು ಪಿತೃಗಳಿಗೆ ಕೊಡಬೇಕು || ೩೬ || ಈ ವ್ರತದ ಪುಣ್ಯಪ್ರಭಾವದಿಂದ ನಿನ್ನ ತಂದೆಗೆ ನರಕದಿಂದ ಮುಕ್ತಿಯಾಗುವದು. ಭರತಕುಲ ಶ್ರೇಷ್ಠನಾದ ಯುಧಿಷ್ಠಿರನೇ, ಈ ಉಪಾಯವನ್ನರಿತ ರಾಜನು ತನ್ನ ಮನೆಗೆ ಬಂದು || ೩೭ || ಮಾರ್ಗಶೀರ್ಷಮಾಸದ ಶುಕ್ಲಪಕ್ಷದ ಏಕಾದಶಿಯ ನಿರೀಕ್ಷಣೆಯಲ್ಲಿದ್ದನು. ನಿರೀಕ್ಷಿತವಾದ ಏಕಾದಶಿಯು ಬರಲು ತನ್ನೆಲ್ಲ ರಾಣಿಯರು, ಅಂತಃಪುರ ಸ್ತ್ರೀಯರು, ಎಲ್ಲ ಮಕ್ಕಳು ಹಾಗೂ ಸೇವಕರಿಂದ

ವ್ರತಂ ಕೃತ್ವಾ ವಿಧಾನೇನ ಪುಣ್ಯಂ ದತ್ವಾ ನೃಪಾಯ ತತ್ |
ತಸ್ಮಿನ್ ದತ್ತೇ ತದಾ ಪುಣ್ಯೇ ಪುಷ್ಪವೃಷ್ಟಿರಭೂದ್ದಿವಃ || ೩೯ ||

ವೈಖಾನಸಪಿತಾ ತೇನ ಗತಃ ಸ್ವರ್ಗಂ ಸ್ತುತೋ ಗಣೈಃ |
ರಾಜಾನಮಂತರಿಕ್ಷಾಚ್ಚ ಶುದ್ಧಾಂ ಗಿರಮಭಾಷತ || ೪೦ ||

ಸ್ವಸ್ತ್ಯಸ್ತು ತೇ ಪುತ್ರ ಸದೇತ್ಯಥ ಸಸ್ತ್ರೀದಿವಂ ಗತಃ |
ಏವಂ ಯಃ ಕುರುತೇ ರಾಜನ್ ಮೋಕ್ಷದ್ಯೆಕಾದಶೀಮಿಮಾಮ್ || ೪೧ ||

ತಸ್ಯ ಪಾಪಕ್ಷಯಂ ಯಾತಿ ಮೃತೋ ಮೋಕ್ಷಮವಾಪ್ನುಯಾತ್ |
ನಾತಃ ಪರತರಾ ಕಾಚಿನ್ಮೋಕ್ಷದಾ ವಿಮಲಾ ಶುಭಾ || ೪೨ ||

ಪುಣ್ಯಸಂಖ್ಯಾಂ ತು ತೇಷಾಂ ವೈ ನ ಜಾನೇಽಹಂ ತು ಯೈಃ ಕೃತಾ |
ಚಿಂತಾಮಣಿಸಮಾ ಹ್ಯೇಷಾ ಸ್ವರ್ಗಮೋಕ್ಷಪ್ರದಾಯಿನೀ || ೪೩ ||

|| ಇತಿ ಶ್ರೀಬ್ರಹ್ಮಾಂಡಪುರಾಣೇ ಮಾರ್ಗಶೀರ್ಷಶುಕ್ಲೈಕಾದಶೀ

ವ್ರತಮಾಹಾತ್ಮ್ಯಂ ಸಮಾಪ್ತಮ್ || ||೨||

---

ಕೂಡಿಕೊಂಡು || ೩೮ || ವಿಧಿಪೂರ್ವಕ ಅಂದಿನ ದಿನದ ವ್ರತವನ್ನು ಆಚರಿಸಿದನು. ಮತ್ತು ಅದರಿಂದ ಬಂದ ಪುಣ್ಯವನ್ನು ತನ್ನ ತಂದೆಗೆ ಸಮರ್ಪಿಸುತ್ತಿದ್ದಂತೆಯೇ ಆಕಾಶದಿಂದ ಪುಷ್ಪವೃಷ್ಟಿಯಾಯಿತು || ೩೯ || ವೈಖಾನಸ ರಾಜನ ತಂದೆಯು ದೇವಗಣಗಳಿಂದ ಸ್ತುತಿಸಲ್ಪಡುತ್ತ ದೇವ ವಿಮಾನದಲ್ಲಿ ಕುಳಿತು ಸ್ವರ್ಗಲೋಕಕ್ಕೆ ನಡೆದನು ಮತ್ತು ಮಾರ್ಗ ಮಧ್ಯದಲ್ಲಿ ಮಗನಾದ ವೈಖಾನಸ ರಾಜನನ್ನು ಕುರಿತು || ೪೦ || ಅಯ್ಯಾ ಮಗನೇ, ನಿನಗೆ ಸದಾ ಕ್ಷೇಮವಾಗಲಿ ಎಂದು ಆಶೀರ್ವದಿಸುತ್ತ ಸ್ವರ್ಗವನ್ನು ಸೇರಿದನು. ಆದ್ದರಿಂದ ಹೇ ರಾಜಾ, ಮೋಕ್ಷದಾ ಎಂಬ ಹೆಸರಿನ ಈ ಏಕಾದಶೀ ವ್ರತವನ್ನು ಯಾರು ಆಚರಿಸುವರೋ ||೪೧ || ಅವರ ಪಾಪಗಳೆಲ್ಲವೂ ನಾಶವಾಗುವವು ಹಾಗೂ ಮರಣಾನಂತರ ಮೋಕ್ಷ ಪ್ರಾಪ್ತಿಯಾಗುವದು. ಈ ವ್ರತಕ್ಕಿಂತಲೂ ಅಧಿಕವಾಗಿರುವ ಮೋಕ್ಷಪ್ರದವಾದ ಪವಿತ್ರವಾದ ಬೇರೊಂದು ಶುಭವ್ರತವಿರುವದಿಲ್ಲ || ೪೨ || ಈ ವ್ರತವನ್ನು ಯಾರು ಆಚರಿಸುವರೋ ಅಂಥವರ ಪುಣ್ಯದ ಮಿತಿಯನ್ನು ನಾನಂತೂ ಕಾಣಲಾರೆನು. ಈ ವ್ರತವು ಅಪೇಕ್ಷಿತಪ್ರದವಾದ ಚಿಂತಾಮಣಿಗೆ ಸಮಾನವಾಗಿದೆ, ಸ್ವರ್ಗಮೋಕ್ಷಗಳನ್ನು ಕೊಡಬಲ್ಲುದಾಗಿದೆ ||೪೩||

|| ಇಲ್ಲಿಗೆ ಶ್ರೀಬ್ರಹ್ಮಾಂಡಪುರಾಣದಲ್ಲಿಯ ಮಾರ್ಗಶೀರ್ಷ ಶುಕ್ಲ ಏಕಾದಶೀವ್ರತದ ಮಹಾತ್ಮೆಯು ಸಮಾಪ್ತವಾಯಿತು ||

|| ಶ್ರೀ ಕೃಷ್ಣಾರ್ಪಣಮಸ್ತು ||

# ಪೌಷಕೃಷ್ಣೈಕಾದಶೀ ವ್ರತಕಥಾ

ಯುಧಿಷ್ಠಿರ ಉವಾಚ -

ಪೌಷಸ್ಯ ಕೃಷ್ಣಪಕ್ಷೇ ತು ಕೇಯಮೇಕಾದಶೀ ಭವೇತ್ |
ಕಿಂ ನಾಮ ಕೋ ವಿಧಿಸ್ತಸ್ಯಾಃ ಕೋ ದೇವಸ್ತತ್ರ ಪೂಜ್ಯತೇ || ೧ ||

ಏತದಾಚಕ್ಷ್ವ ಮೇ ಸ್ವಾಮಿನ್ ವಿಸ್ತರೇಣ ಜನಾರ್ದನ |
ಶ್ರೀ ಕೃಷ್ಣ ಉವಾಚ -
ಕಥಯಿಷ್ಯಾಮಿ ರಾಜೇಂದ್ರ ಭವತಃ ಸ್ನೇಹಕಾರಣಾತ್ || ೨ ||

ತಥಾ ತುಷ್ಟಿರ್ನ ಮೇ ರಾಜನ್ ಕ್ರತುಭಿಶ್ಚಾಪ್ತದಕ್ಷಿಣೈಃ |
ಯಥಾ ತುಷ್ಟಿರ್ಭವೇನ್ಮಹ್ಯಮೇಕಾದಶ್ಯಾ ವ್ರತೇನ ವೈ || ೩ ||

ತಸ್ಮಾತ್ಸರ್ವಪ್ರಯತ್ನೇನ ಕರ್ತವ್ಯೋ ಹರಿವಾಸರಃ |
ಪೌಷಸ್ಯ ಕೃಷ್ಣಪಕ್ಷೇ ತು ದ್ವಾದಶೀ ಯಾ ಭವೇನ್ನೃಪ || ೪ ||

ತಸ್ಯಾಶ್ಚೈವ ಚ ಮಾಹಾತ್ಮ್ಯಂ ಶ್ರುಣುಷ್ವೈಕಾಗ್ರಮಾನಸಃ |
ಗದಿತಾಯಾಶ್ಚ ವೈ ರಾಜನ್ ಏಕಾದಶ್ಯೋ ಭವಂತಿ ಹಿ || ೫ ||

ತಾಸಾಮಪಿ ಹಿ ಸರ್ವಾಸಾಂ ವಿಕಲ್ಪಂ ನೈವ ಕಾರಯೇತ್ |
ಏಕಾದಶ್ಯಾಸ್ತಥಾಪ್ಯಸ್ಯಾಃ ಶ್ರುಣು ರಾಜನ್ ಕಥಾಂತರಮ್ || ೬ ||

---

ಹೇ ದೇವಾ, ಜನಾರ್ದನಾ, ಪೌಷಮಾಸದ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು? ಆ ದಿನ ಮಾಡಬೇಕಾದ ವಿಧಿಗಳಾವವು ? ಆ ಏಕಾದಶಿಯ ದಿನ ಯಾವ ದೇವತೆಯನ್ನು ಪೂಜಿಸಬೇಕು ? || ೧ || ಹೇ ಸ್ವಾಮಿನ್, ಇದೆಲ್ಲವನ್ನು ನನಗೆ ವಿಸ್ತಾರವಾಗಿ ತಿಳಿಸಬೇಕು ಎಂದು ಯುಧಿಷ್ಠಿರನು ಪ್ರಾರ್ಥಿಸಲು ಶ್ರೀಕೃಷ್ಣನು ಹೇಳುತ್ತಾನೆ - ಹೇ ರಾಜೇಂದ್ರಾ, ನಿನ್ನ ಮೇಲಿನ ಸ್ನೇಹಭಾವದಿಂದ ಎಲ್ಲವನ್ನೂ ತಿಳಿಸುವೆನು ಕೇಳು || ೨ || ಹೇ ರಾಜನ್, ನನಗೆ ಏಕಾದಶೀವ್ರತಾನುಷ್ಠಾನದಿಂದಾಗುವಷ್ಟು ಸಂತೋಷವು ಅಧಿಕ ಸಂಭಾವನಾದಿಗಳಿಂದ ಯುಕ್ತವಾದ ಯಜ್ಞಗಳ ಅನುಷ್ಠಾನದಿಂದಲೂ ಆಗಲಾರದು || ೩|| ಆದ್ದರಿಂದ ನನ್ನ ಪ್ರಸಾದವನ್ನು ಹೊಂದಲು ಯತ್ನಪೂರ್ವಕವಾಗಿ ಏಕಾದಶೀವ್ರತವನ್ನು ಆಚರಿಸಬೇಕು. ಹೇ ರಾಜಾ, ಪೌಷಕೃಷ್ಣಪಕ್ಷದಲ್ಲಿ ದ್ವಾದಶೀ ತಿಥಿಯೇನಿರುವದೋ ||೪|| ಅದರ ಮಹಾತ್ಮೆಯನ್ನೂ ತಿಳಿಸುವೆನು ಏಕಾಗ್ರಚಿತ್ತನಾಗಿ ಕೇಳು. ಯುಧಿಷ್ಠಿರಾ, ವರ್ಷದ ಎಲ್ಲ ಮಾಸಗಳಲ್ಲಿ ಏಕಾದಶೀ ತಿಥಿಗಳು ಬರುತ್ತವೆ || ೫ || ಆ ಎಲ್ಲ ಏಕಾದಶಿಗಳಲ್ಲಿ ತಾರತಮ್ಯ ಗಣನೆಯನ್ನು ಮಾಡಬಾರದು. ಆದರೂ ಪೌಷಕೃಷ್ಣಪಕ್ಷದ ಏಕಾದಶೀ ತಿಥಿಯ

ಅತಃ ಪರಂ ಪ್ರವಕ್ಷ್ಯಾಮಿ ಪೌಷಸ್ಯೈಕಾದಶೀಂ ತವ |
ಲೋಕಾನಾಂ ಚ ಹಿತಾರ್ಥಾಯ ಕಥಯಿಷ್ಯೇ ವಿಧಿಂ ತವ || ೭ ||

ಪೌಷಸ್ಯ ಕೃಷ್ಣಪಕ್ಷೇ ಯಾ ಸಫಲಾ ನಾಮ ನಾಮತಃ |
ನಾರಾಯಣೋಽಧಿದೇವೋಽಸ್ಯಾಃ ಪೂಜಯೇತ್ತಂ ಪ್ರಯತ್ನತಃ || ೮ ||

ಪೂರ್ವೇಣ ವಿಧಿನಾ ರಾಜನ್ ಕರ್ತವ್ಯೈಕಾದಶೀ ಜನೈಃ |
ನಾಗಾನಾಂ ಚ ಯಥಾ ಶೇಷಃ ಪಕ್ಷಿಣಾಂ ಗರುಡೋ ಯಥಾ || ೯ ||

ಯಥಾಶ್ವಮೇಧೋ ಯಜ್ಞಾನಾಂ ನದೀನಾಂ ಜಾಹ್ನವೀ ಯಥಾ |
ದೇವಾನಾಂ ಚ ಯಥಾ ವಿಷ್ಣುರ್ದ್ವಿಪದಾಂ ಬ್ರಾಹ್ಮಣೋ ಯಥಾ |
ವ್ರತಾನಾಂ ಚ ತಥಾ ರಾಜನ್ ಪ್ರವರೈಕಾದಶೀ ತಿಥಿಃ || ೧೦ ||

ತೇ ಜನಾ ಭರತಶ್ರೇಷ್ಠ ಮಮ ಪೂಜ್ಯಾಶ್ಚ ಸರ್ವಶಃ |
ಹರಿವಾಸರಸಂಸಕ್ತಾ ವರ್ತಂತೇ ಯೇ ಜನಾ ಭೃಶಮ್ || ೧೧ ||

ಸಫಲಾ ನಾಮ ಯಾ ಪ್ರೋಕ್ತಾ ತಸ್ಯಾಃ ಪೂಜಾವಿಧಿಂ ಶೃಣು |
ಫಲೈರ್ಮಾಂ ಪೂಜಯೇತ್ತತ್ರ ಕಾಲದೇಶೋದ್ಭವೈಃ ಶುಭೈಃ || ೧೨ ||

ನಾರಿಕೇಲಫಲೈಃ ಶುದ್ಧೈಸ್ತಥಾ ವೈ ಬೀಜಪೂರಕೈಃ |
ಜಂಬೀರೈರ್ದಾಡಿಮೈಶ್ಚೈವ ತಥಾ ಪೂಗೀಫಲೈರಪಿ || ೧೩ ||

---

ಮಹಾತ್ಮೆಯನ್ನು ತಿಳಿಸುವ ಕಥೆಯನ್ನು ಹೇಳುವೆನು || ೬ || ಇನ್ನು ಮುಂದೆ ಸಕಲಜನರ ಕ್ಷೇಮಕ್ಕಾಗಿ ಪೌಷಮಾಸದ ಏಕಾದಶೀ ವ್ರತದ ಬಗ್ಗೆ ಮತ್ತು ಆ ದಿನದ ವಿಧಿಯ ಬಗ್ಗೆಯೂ ನಿನಗೆ ತಿಳಿಸುವೆನು || ೭ || ಪೌಷಕೃಷ್ಣಪಕ್ಷದ ಏಕಾದಶಿಯು ಸಫಲಾ ಎಂದು ಖ್ಯಾತವಾಗಿದ್ದು ಆ ಏಕಾದಶಿಯ ಅಧಿದೇವನಾಗಿರುವ ನಾರಾಯಣನನ್ನು ಅಂದಿನ ದಿನ ಭಕ್ತಿಯಿಂದ ಪೂಜಿಸಬೇಕು || ೮ || ಎಲ್ಲ ಜನರು ಪೂರ್ವೋಕ್ತವಿಧಾನದಂತೆ ಏಕಾದಶೀವ್ರತವನ್ನು ಆಚರಿಸಬೇಕು. ನಾಗಗಳಲ್ಲಿ ಶೇಷನಂತೆ, ಪಕ್ಷಿಗಳಲ್ಲಿ ಗರುಡನಂತೆ || ೯ || ಯಜ್ಞಗಳಲ್ಲಿ ಅಶ್ವಮೇಧದಂತೆ, ನದಿಗಳಲ್ಲಿ ಜಾಹ್ನವಿಯಂತೆ, ದೇವತೆಗಳಲ್ಲಿ ವಿಷ್ಣುವಿನಂತೆ ಮತ್ತು ಮನುಷ್ಯರಲ್ಲಿ ಬ್ರಾಹ್ಮಣನಂತೆ ಎಲ್ಲ ವ್ರತಗಳಲ್ಲಿ ಏಕಾದಶೀವ್ರತವು ಶ್ರೇಷ್ಠವಾಗಿದೆ ||೧೦|| ಹೇ ಭರತಶ್ರೇಷ್ಠ ಧರ್ಮರಾಜಾ, ಯಾರು ಏಕಾದಶೀವ್ರತದಲ್ಲಿ ಆಸಕ್ತರಾಗಿರುವರೋ ಅವರೇ ನನಗೆ ಸದಾ ಅತಿಪ್ರಿಯರೂ, ಪೂಜ್ಯರೂ ಆಗಿರುವರು || ೧೧ || ಸಫಲಾ ಎಂದು ಖ್ಯಾತವಾಗಿರುವ ಪೌಷಕೃಷ್ಣ ಏಕಾದಶಿಯ ದಿನದಿಂದ ಮಾಡಬೇಕಾದ ಪೂಜಾವಿಧಿಯನ್ನು ತಿಳಿಸುವೆನು ಕೇಳು. ಆ ಋತು ಹಾಗೂ ದೇಶದಲ್ಲಿ ಉಪಲಬ್ಧವಿರುವ ಫಲಗಳಿಂದ ಆ ದಿನ ನನ್ನನ್ನು ಪೂಜಿಸಬೇಕು || ೧೨ || ಶ್ರೇಷ್ಠವಾದ ನಾರಿಕೇಲಫಲಗಳು (ತೆಂಗಿನಕಾಯಿ)

ಲವಂಗೈರ್ವಿವಿಧೈಶ್ಚಾನ್ಯೈಸ್ತಥಾ ಚಾಮ್ರಫಲಾದಿಭಿಃ |
ಪೂಜಯೇದ್ದೇವದೇವೇಶಂ ಧೂಪೈರ್ದೀಪೈರ್ಯಥಾಕ್ರಮಮ್ || ೧೪ ||

ಸಫಲಾಯಾಂ ದೀಪದಾನಂ ವಿಶೇಷೇಣ ಪ್ರಕೀರ್ತಿತಮ್ |
ರಾತ್ರೌ ಜಾಗರಣಂ ತತ್ರ ಕರ್ತವ್ಯಂ ಚ ಪ್ರಯತ್ನತಃ || ೧೫ ||

ಯಾವದುನ್ಮೀಲಯೇನ್ನೇತ್ರಂ ತಾವಜ್ಜಾಗರ್ತಿ ಯೋ ನಿಶಿ |
ಏಕಾಗ್ರಮಾನಸೋ ಭೂತ್ವಾ ತಸ್ಯ ಪುಣ್ಯಫಲಂ ಶೃಣು || ೧೬ ||

ತತ್ಸಮೋ ನಾಸ್ತಿ ವೈ ಯಜ್ಞಸ್ತೀರ್ಥಂ ತತ್ಸದೃಶಂ ನ ಹಿ |
ತತ್ಸಮಂ ನ ವ್ರತಂ ಕಿಂಚಿದಿಹ ಲೋಕೇ ನರಾಧಿಪ || ೧೭ ||

ಪಂಚವರ್ಷಸಹಸ್ರಾಣಿ ತಪಸ್ತಪ್ತ್ವಾ ಚ ಯತ್ಫಲಮ್ |
ತತ್ಫಲಂ ಸಮವಾಪ್ನೋತಿ ಸಫಲಾಯ ವ್ರತೇನ ವೈ || ೧೮ ||

ಶ್ರೂಯತಾಂ ರಾಜಶಾರ್ದೂಲ ಸಫಲಾಯಾಃ ಕಥಾನಕಮ್ |
ಚಂಪಾವತೀತಿ ವಿಖ್ಯಾತಾ ಪುರೀ ಮಾಹಿಷ್ಮತಸ್ಯ ಚ || ೧೯ ||

ಮಾಹಿಷ್ಮತಸ್ಯ ರಾಜರ್ಷೇಃ ಚತ್ವಾರಶ್ಚಾಭವನ್ ಸುತಾಃ |
ತೇಷಾಂ ಮಧ್ಯೇ ತು ಯೋ ಜ್ಯೇಷ್ಠಃ ಸ ಮಹಾಪಾಪಸಂಯುತಃ || ೨೦ ||

---

ಮಾದಾಳಫಲ, ನಿಂಬೇಫಲ, ದಾಳಿಂಬ ಫಲ ಹಾಗೂ ಪೂಗೀಫಲ (ಅಡಿಕೆ) ಇವೇ ಮೊದಲಾದ ಫಲಗಳನ್ನು || ೧೩ || ಲವಂಗ, ಆಮ್ರಫಲ ಹಾಗೂ ವಿವಿಧ ಫಲಗಳು ಮೊದಲಾದವುಗಳನ್ನು ಶ್ರೀಹರಿಗೆ ನಿವೇದಿಸಬೇಕು. ಮೊದಲು ಧೂಪಾರತಿ, ದೀಪಾರತಿಗಳಿಂದ ದೇವದೇವೋತ್ತಮನಾದ ಶ್ರೀ ಹರಿಯನ್ನು ಭಕ್ತಿಯಿಂದ ಪೂಜಿಸಬೇಕು || ೧೪ || ಸಫಲಾ ಏಕಾದಶಿಯ ರಾತ್ರಿ ಜಾಗರಣೆ ಮಾಡುವದು ಮತ್ತು ದೀಪಗಳನ್ನು ದಾನಮಾಡುವದು ಹೆಚ್ಚು ಫಲಪ್ರದವೆಂದು ಹೇಳಲ್ಪಟ್ಟಿದೆ || ೧೫ || ಕಣ್ಣುಗಳು ತೆರೆದಿರುವವರೆಗೆ ಯಾವನು ಆ ದಿನ ರಾತ್ರಿ ಏಕಾಗ್ರಚಿತ್ತನಾಗಿ ಶ್ರದ್ಧೆಯಿಂದ ಜಾಗರಣೆಯನ್ನು ಮಾಡುವನೋ ಅವನ ಪುಣ್ಯಫಲವನ್ನು ತಿಳಿಸುವೆನು ಕೇಳು || ೧೬ || ಹೇ ರಾಜಾ, ಈ ಲೋಕದಲ್ಲಿ ಅಂಥ ಪುರುಷನಿಗೆ ಸಮಾನವಾದ ಪವಿತ್ರವಾದ ಯಜ್ಞವಿಲ್ಲ, ತೀರ್ಥವಿಲ್ಲ ಮತ್ತು ಯಾವ ವ್ರತವೂ ಇಲ್ಲ ||೧೭|| ೫ ಸಹಸ್ರವರ್ಷಗಳ ವರೆಗೆ ತಪಸ್ಸನ್ನಾಚರಿಸಿದರೆ ಎಷ್ಟು ಫಲವು ಬರುವದೋ ಅಷ್ಟೆಲ್ಲ ಫಲವು ಸಫಲಾ ವ್ರತಾಚರಣೆಯಿಂದ ಪ್ರಾಪ್ತವಾಗುವದು || ೧೮ || ಹೇ ರಾಜಶ್ರೇಷ್ಠನಾದ ಧರ್ಮರಾಜಾ, ಈಗ ಸಫಲಾ ದಿನದ ಉತ್ಪತ್ತಿ ಮಹಿಮೆ ಮೊದಲಾದವುಗಳನ್ನು ತಿಳಿಸುವೆನು ಕೇಳು. ಹಿಂದಕ್ಕೆ ಮಾಹಿಷ್ಮತ ಎಂಬ ರಾಜನ ಚಂಪಾವತೀ ಎಂಬ ಹೆಸರಿನ ಪಟ್ಟಣವಿದ್ದಿತು. || ೧೯ || ಮಾಹಿಷ್ಮತ ರಾಜನಿಗೆ ನಾಲ್ಕು ಜನ ಪುತ್ರರಿದ್ದರು. ಇವರಲ್ಲಿ ಜೇಷ್ಠನಾದವನು

ಪರದಾರಾಭಿಗಾಮೀ ಚ ದ್ಯೂತವೇಶ್ಯಾರತಃ ಸದಾ |
ಪಿತುರ್ದ್ರವ್ಯಂ ಸ ಪಾಪಿಷ್ಠೋ ಗಮಯಾಮಾಸ ಸರ್ವಶಃ || ೨೧ ||

ಅಸದ್ವೃತ್ತಿರತೋ ನಿತ್ಯಂ ದೇವತಾದ್ವಿಜನಿಂದಕಃ |
ವೈಷ್ಣವಾನಾಂ ಚ ದೇವಾನಾಂ ನಿತ್ಯಂ ನಿಂದಾರತಃ ಸ ವೈ || ೨೨ ||

ಈದೃಗ್ವಿಧಂ ತದಾ ದೃಷ್ಟ್ವಾ ಪುತ್ರಂ ಮಾಹಿಷ್ಮತೋ ನೃಪಃ |
ರಾಜ್ಯಾನ್ನಿಷ್ಕಾಸಯಾಮಾಸ ಲುಂಪಕಂ ನಾಮ ನಾಮತಃ || ೨೩ ||

ರಾಜ್ಯಾನ್ನಿಷ್ಕಾಸಿತಸ್ತೇನ ಪಿತ್ರಾ ಚೈವಾಪಿ ಬಂಧುಭಿಃ |
ಪರಿವಾರಜನೈಃ ಸರ್ವೈಸ್ತ್ಯಕ್ತೋ ರಾಜ್ಞೋ ಭಯಾದಿತಿ || ೨೪ ||

ಲುಂಪಕೋಽಪಿ ತದಾ ತ್ಯಕ್ತಶ್ಚಿಂತಯಾಮಾಸ ಚಂಚಲಃ |
ಮಯಾತ್ರ ಕಿಂ ಪ್ರಕರ್ತವ್ಯಂ ತ್ಯಕ್ತೇನ ಪಿತೃಬಾಂಧವೈಃ || ೨೫ ||

ಇತಿ ಚಿಂತಾಪರೋ ಭೂತ್ವಾ ಮತಿಂ ಪಾಪೇ ತದಾಕರೋತ್ |
ಮಯಾ ತು ಗಮನಂ ಕಾರ್ಯಂ ವನೇ ತ್ಯಕ್ತ್ವಾ ಪುರೀಂ ಪಿತುಃ || ೨೬ ||

ತಸ್ಮಾದ್ಧನಾತ್ಪಿತುಃ ಸರ್ವಂ ವ್ಯಾಪಯಿಷ್ಯೇ ಪುರಂ ನಿಶಿ |
ದಿವಾ ವನೇ ಚರಿಷ್ಯಾಮಿ ರಾತ್ರಾವಪಿ ಪಿತುಃ ಪುರೇ || ೨೭ ||

---

ಮಹಾಪಾಪಿಷ್ಠನಾಗಿದ್ದನು || ೨೦ || ಪರಸ್ತ್ರೀಸಂಗ ಮಾಡುವವನೂ, ಸದಾ ದ್ಯೂತ, ವೇಶ್ಯಾ ಸ್ತ್ರೀಯರಲ್ಲಿ ರತನೂ ಆಗಿದ್ದ ಅವನು ತನ್ನ ತಂದೆಯು ಸಂಪಾದಿಸಿದ್ದ ಸಂಪತ್ತನ್ನೆಲ್ಲ ಹಾಳು ಮಾಡಿದನು || ೨೧ || ಸದಾ ದುಷ್ಟ ವ್ಯಾಪಾರಗಳಲ್ಲೇ ಆಸಕ್ತನಾಗಿದ್ದು ದೇವ ಬ್ರಾಹ್ಮಣರನ್ನು ನಿಂದಿಸುತ್ತ ಕಾಲ ಕಳೆಯುತ್ತಿದ್ದನು. ತನ್ನ ಮಗನು ನಿತ್ಯವೂ ವಿಷ್ಣುಭಕ್ತರನ್ನು ಹಾಗೂ ದೇವತೆಗಳನ್ನು ದೋಷಿಸುತ್ತಲಿರುವದನ್ನು ಕಂಡು || ೨೨ || ಮಾಹಿಷ್ಮತ ರಾಜನು ಲುಂಪಕ ಎಂಬ ಹೆಸರಿನ ಆ ಜ್ಯೇಷ್ಠಪುತ್ರನನ್ನು ರಾಜ್ಯದಿಂದ ಹೊರಹಾಕಿಸಿದನು || ೨೩ || ರಾಜ್ಯದಿಂದ ಹೊರಹಾಕಲ್ಪಟ್ಟ ಅವನನ್ನು ರಾಜಭಯದಿಂದ ಬಂಧುಗಳು, ಪರಿವಾರಜನರೆಲ್ಲರೂ ಬಹಿಷ್ಕರಿಸಿದರು || ೨೪ || ಹೀಗೆ ಎಲ್ಲರಿಂದ ತ್ಯಕ್ತನಾದ ಆ ಲುಂಪಕನು ಹಾ ! ತಂದೆ ತಾಯಿ, ಬಂಧು ಬಳಗ ಎಲ್ಲರಿಂದ ಬಹಿಷ್ಕೃತನಾದ ನಾನು ಇನ್ನೇನು ಮಾಡಲಿ ? || ೨೫ || ಎಂದು ಚಿಂತಾಕ್ರಾಂತನಾಗಿ ಪುನಃ ದುಷ್ಟವಿಚಾರವನ್ನೇ ಮಾಡಿದನು. ತಂದೆಯ ಈ ನಗರವನ್ನು ಬಿಟ್ಟು ಇನ್ನು ನಾನು ವನವನ್ನು ಸೇರಬೇಕು || ೨೬ || ಆ ವನದಲ್ಲಿದ್ದುಕೊಂಡು ರಾತ್ರಿಸಮಯದಲ್ಲಿ ನಗರಕ್ಕೆ ಬಂದು ತಂದೆಯ ಹಣವನ್ನೆಲ್ಲ ದೋಚಬೇಕು. ಹಗಲಿನಲ್ಲಿ ವನದಲ್ಲಿ ಸಂಚರಿಸಿ ರಾತ್ರಿ ತಂದೆಯ ಪುರದಲ್ಲಿ ಸಂಚರಿಸುವೆನು || ೨೭ || ಎಂದು ಮುಂತಾಗಿ

ಇತ್ಯೇವಂ ಸ ಮತಿಂ ಕೃತ್ವಾ ಲುಂಪಕೋ ದೈವಪಾತಿತಃ |
ನಿರ್ಜಗಾಮ ಪುರಾತ್ತಸ್ಮಾದ್ಗತೋऽಸೌ ಗಹನಂ ವನಮ್ || ೨೮ ||

ಜೀವಘಾತಕರೋ ನಿತ್ಯಂ ನಿತ್ಯಂ ಸ್ತೇಯಪರಾಯಣಃ |
ಸರ್ವಂ ಚ ನಗರಂ ತೇನ ಮುಷಿತಂ ಪಾಪಕರ್ಮಣಾ || ೨೯ ||

ಗೃಹೀತಶ್ಚ ಪರಿತ್ಯಕ್ತೋ ರಾಜ್ಞೋ ಮಾಹಿಷ್ಮತೇರ್ಭಯಾತ್ |
ಜನ್ಮಾಂತರೀಯಪಾಪೇನ ರಾಜ್ಯಭ್ರಷ್ಟಃ ಸ ಪಾಪಕೃತ್ || ೩೦ ||

ಆಮಿಷಾಭಿರತೋ ನಿತ್ಯಂ ನಿತ್ಯಂ ವೈ ಫಲಭಕ್ಷಕಃ |
ಆಶ್ರಮಸ್ತಸ್ಯ ದುಷ್ಟಸ್ಯ ವಾಸುದೇವಸ್ಯ ಸಮ್ಮತಃ || ೩೧ ||

ಅಶ್ವತ್ಥೋ ವರ್ತತೇ ತತ್ರ ಜೀರ್ಣೋ ಬಹುಲವಾರ್ಷಿಕಃ |
ದೇವತ್ವಂ ತಸ್ಯ ವೃಕ್ಷಸ್ಯ ವರ್ತತೇ ತದ್ವನೇ ಮಹತ್ || ೩೨ ||

ತತ್ರೈವ ನಿವಸಂಶ್ಚಾಸೌ ಲುಂಪಕಃ ಪಾಪಬುದ್ಧಿಮಾನ್ |
ಏವಂ ಕಾಲಕ್ರಮೇಣೈವ ವಸತಸ್ತಸ್ಯ ಪಾಪಿನಃ || ೩೩ ||

ದುಷ್ಕರ್ಮನಿರತಸ್ಯಾಸ್ಯ ಕುರ್ವತಃ ಕರ್ಮ ನಿಂದಿತಮ್ |
ಪೌಷಸ್ಯ ಕೃಷ್ಣಪಕ್ಷೇ ತು ಸಂಪ್ರಾಪ್ತಂ ಸಫಲಾದಿನಮ್ || ೩೪ ||

---

ದೈವಹೀನನಾದ ಆ ಲುಂಪಕನು ವಿಚಾರಿಸಿದನು. ನಂತರ ಅವನು ಚಂಪಾವತೀ ನಗರವನ್ನು ಬಿಟ್ಟು ಗಹನವಾದ ವನವನ್ನು ಸೇರಿದನು || ೨೮ || ಆ ವನದಲ್ಲಿ ನಿತ್ಯ ಪ್ರಾಣಿಗಳನ್ನು ಕೊಲ್ಲುತ್ತ ರಾತ್ರಿ ಚೌರ್ಯಮಾಡುತ್ತ ಲುಂಪಕನು ನಗರದಲ್ಲಿರುವ ಎಲ್ಲ ಜನರ ಸಂಪತ್ತನ್ನು ದೋಚಿ ಒಯ್ದನು || ೨೯ || ಚೌರ್ಯ ಮಾಡುವ ಸಮಯದಲ್ಲಿ ಒಂದೊಂದು ಸಲ ಸಿಕ್ಕುಬಿದ್ದರೂ ಮಾಹಿಷ್ಮತರಾಜನ ಭಯದಿಂದ ಪುರಜನರು ಅವನನ್ನು ಬಿಟ್ಟು ಬಿಡುತ್ತಿದ್ದರು. ಜನ್ಮಾಂತರ ಪಾಪದಿಂದ ಆ ಪಾಪಿಯು ರಾಜ್ಯಭ್ರಷ್ಟನಾದನು || ೩೦ || ನಿತ್ಯ ಮಾಂಸ, ಫಲಗಳನ್ನು ಸೇವಿಸುತ್ತ ಕಾಲಕಳೆಯತೊಡಗಿದನು. ಇಂಥ ದುಷ್ಟನು ವಾಸವಾಗಿದ್ದ ಆ ಆಶ್ರಮವು ವಾಸುದೇವ ಪರಮಾತ್ಮನಿಗೆ ಅತಿ ಪ್ರಿಯವಾಗಿದ್ದಿತು || ೩೧ || ಏಕೆಂದರೆ ಆ ಆಶ್ರಮದಲ್ಲಿ ಬಹುಪುರಾತನವಾದ ಜೀರ್ಣವಾದ ಒಂದು ಅಶ್ವತ್ಥವೃಕ್ಷವಿದ್ದಿತು ಹಾಗೂ ಆ ವೃಕ್ಷದಲ್ಲಿ ವಿಶೇಷವಾದ ದೇವತಾಸನ್ನಿಧಾನವಿದ್ದಿತು || ೩೨ || ಅಶ್ವತ್ಥವೃಕ್ಷದ ಸನಿಹದಲ್ಲಿಯ ಒಂದು ಗುಡಿಸಲಿನಲ್ಲಿ ಪಾಪಬುದ್ಧಿಯವನಾದ ಲುಂಪಕನು ವಾಸಿಸುತ್ತಿದ್ದನು. ಅವನು ಸದಾ ಯಷ್ಕರ್ಮಗಳಲ್ಲಿ ರತನಾಗಿ ನಿಂದ್ಯಕರ್ಮಗಳನ್ನು ಮಾಡುತ್ತಿರಲು ಪೌಷಕೃಷ್ಣಪಕ್ಷದ ಸಫಲಾ ದಿನವು ಪ್ರಾಪ್ತವಾಯಿತು || ೩೩ || || ೩೪ || ಹೇ ಧರ್ಮರಾಜಾ,

ದಶಮೀ ದಿವಸೇ ರಾಜನ್ ನಿಶಾಯಾಂ ಶೀತಪೀಡಿತಃ |
ಲುಂಪಕೋ ವಸ್ತ್ರಹೀನೋ ವೈ ನಿಶ್ಚೇಷ್ಟೋ ಹ್ಯಭವತ್ತದಾ || ೩೫ ||

ಪೀಡ್ಯಮಾನಸ್ತು ಶೀತೇನ ಅಶ್ವತ್ಥಸ್ಯ ಸಮೀಪತಃ |
ನ ನಿದ್ರಾ ನ ಸುಖಂ ತಸ್ಯ ಗತಪ್ರಾಣ ಇವಾಭವತ್ || ೩೬ ||

ಪೀಡಯನ್ ದಶನೈರ್ದಂತಾನೇವಂ ಚ ಗಮಿತಾ ನಿಶಾ |
ಭಾನೂದಯೇಽಪಿ ತಸ್ಯಾಥ ನ ಸಂಜ್ಞಾ ಸಮಜಾಯತ || ೩೭ ||

ಲುಂಪಕೋ ಗತಸಂ ಜ್ಞಸ್ತು ಸಫಲಾದಿವಸೇ ತದಾ | ಜ್ಞ.
ಮಧ್ಯಾಹ್ನ ಸಮಯೇ ಪ್ರಾಪ್ತೇ ಸಂಜ್ಞಾಂ ಲೇಭೇ ಸ ಲುಂಪಕಃ || ೩೮ ||

ಪ್ರಾಪ್ತಸಂಜ್ಞೋ ಮುಹೂರ್ತೇನ ಚೋತ್ಥಿತೋಽಸೌ ತದಾಸನಾತ್ |
ಪ್ರಸ್ಖಲಂಶ್ಚ ಪದನ್ಯಾಸೈಃ ಪಂಗುವಚ್ಚಲಿತೋ ಮುಹುಃ || ೩೯ ||

ವನಮಧ್ಯೇ ಗತಸ್ತತ್ರ ಕ್ಷುತ್ತೃಷಾಪೀಡಿತೋಽಭವತ್ |
ನ ಶಕ್ತಿರ್ಜೀವಘಾತೇಽಸ್ಯ ಲುಂಪಕಸ್ಯ ದುರಾತ್ಮನಃ || ೪೦ ||

ಫಲಾನಿ ಭೂಮೌ ಪತಿತಾನ್ಯಾಜಹಾರ ಸ ಲುಂಪಕಃ |
ಯಾವತ್ತ್ವಾಗತಸ್ತತ್ರ ತಾವದಸ್ತಮಗಾದ್ರವಿಃ || ೪೧ ||

---

ಹಿಂದಿನ ದಿನ ದಶಮೀತಿಥಿ ರಾತ್ರಿ ಛಳಿಜ್ವರದಿಂದ ಪೀಡಿತನಾಗಿ ಆ ಲುಂಪಕನು ವಸ್ತ್ರಹೀನನಾಗಿ ಮೂರ್ಛೆಹೋಗಿ ಬಿದ್ದನು || ೩೫ || ಅಶ್ವತ್ಥ ವೃಕ್ಷದ ಸನಿಹದಲ್ಲಿ ಬಿದ್ದಿರುವ ಅವನು ರಾತ್ರಿಯಿಡೀ ಶೀತಬಾಧೆಯಿಂದ ಅತಿಯಾಗಿ ಪೀಡಿತನಾದನು. ನಿದ್ರೆ, ಸಮಾಧಾನಗಳಿಲ್ಲದೇ ಗತಪ್ರಾಣನಂತಾದನು. || ೩೬ || ಛಳಿಯಿಂದ ಹಲ್ಲುಗಳನ್ನು ಕಡಿಯುತ್ತ ನಡುಗುತ್ತ ಎಚ್ಚರತಪ್ಪಿ ಬಿದ್ದಿರಲಾಗಿ ರಾತ್ರಿ ಕಳೆಯಿತು. ಸಫಲಾ ದಿನ ಸೂರ್ಯೋದಯವಾದರೂ ಎಚ್ಚರಗೊಳ್ಳದ ಲುಂಪಕನು || ೩೭ || ಮಧ್ಯಾಹ್ನ ಸಮಯಕ್ಕೆ ಮೂರ್ಛೆಯಿಂದ ಎಚ್ಚತ್ತನು || ೩೮ || ಆಸನದಿಂದ ಮೇಲೆದ್ದು ಗುಡಿಸಲಿನಿಂದ ಹೊರಗೆ ಕುಂಟನಂತೆ ಎಡವುತ್ತ ಬೀಳುತ್ತ ಹೆಜ್ಜೆ ಇಡುತ್ತ ನಡೆದನು || ೩೯ || ಅರಣ್ಯ ಮಧ್ಯದಲ್ಲಿ ಹೀಗೆ ನಡೆಯುತ್ತ ಹಸಿವೆ ನೀರಡಿಕೆಗಳಿಂದ ಬಹು ಪೀಡಿತನಾಗಿದ್ದರೂ ದುರಾತ್ಮನಾದ ಲುಂಪಕನಿಗೆ ಆತ್ಮಹತ್ಯೆ ಮಾಡಿಕೊಳ್ಳುವಷ್ಟು ಶಕ್ತಿಯಿರಲಿಲ್ಲ || ೪೦ || ಅಷ್ಟರಲ್ಲಿ ಸನಿಹದಲ್ಲೇ ಕಂಡ ಕೆಲಫಲಗಳನ್ನು ಅವನು ಮೇಲೆತ್ತಿಕೊಂಡು ತಿರುಗಿ ಗುಡಿಸಲಿಗೆ ಬರುವಷ್ಟರಲ್ಲಿ ಸೂರ್ಯಾಸ್ತವಾಯಿತು || ೪೧ || ಆಗ ಅತಿದುಃಖದಿಂದ ಅಯ್ಯೋ ನನಗೆ ಇನ್ನೇನು ಸಂಕಟವು ಕಾದಿದೆಯೋ ಎಂದು ಬಹುವಾಗಿ ಶೋಕಿಸುತ್ತ ಕೈಯಲ್ಲಿನ ಫಲಗಳನ್ನೆಲ್ಲ

ಕಿಂ ಭವಿಷ್ಯತಿ ತಾತೇತಿ ವಿಲಲಾಪಾತಿದುಃಖಿತಃ |
ಫಲಾನಿ ತಾನಿ ಸರ್ವಾಣಿ ವೃಕ್ಷಮೂಲೇ ನ್ಯವೇದಯತ್ || ೪೨ ||

ಪ್ರತ್ಯುವಾಚ ಫಲೈರೇಭಿಃ ಪ್ರೀಯತಾಂ ಭಗವಾನ್ ಹರಿಃ |
ಉಪವಿಷ್ಟೋ ಲುಂಪಕಶ್ಚ ನಿದ್ರಾಂ ಲೇಭೇ ನ ವೈ ನಿಶಿ || ೪೩ ||

ತೇನ ಜಾಗರಣಂ ಜಾತಂ ಭಗವಾನ್ ಮಧುಸೂದನಃ |
ಫಲಾನಾಂ ಪೂಜನಂ ಮೇನೇ ಸಫಲಾಯಾಸ್ತಥಾ ವ್ರತಮ್ || ೪೪ ||

ಕೃತಮೇವಂ ಲುಂಪಕೇ ಽಹ್ಯಕಸ್ಮಾದ್ವ್ರತಮುತ್ತಮಮ್ |
ತೇನ ವ್ರತಪ್ರಭಾವೇಣ ಪ್ರಾಪ್ತಂ ರಾಜ್ಯಮಕಂಟಕಮ್ || ೪೫ ||

ಪುಣ್ಯಾಂಕುರೋದಯಾದ್ರಾಜನ್ ಯಥಾ ಪ್ರಾಪ್ತಂ ತಥಾ ಶೃಣು |
ರವೇರುದಯವೇಲಾಯಾಂ ದಿವ್ಯೋಽಶ್ವಶ್ಚಾಜಗಾಮ ಹ || ೪೬ ||

ದಿವ್ಯವಸ್ತುಪರೀವಾರೋ ಲುಂಪಕಸ್ಯ ಸಮೀಪತಃ |
ತಸ್ಥೌ ಸ ತುರಗೋ ರಾಜನ್ ವಾಗುವಾಚಾಶರೀರಿಣೀ || ೪೭ ||

ಪ್ರಾಪ್ನುಹಿ ತ್ವಂ ನೃಪಸುತ ಸ್ವಂ ರಾಜ್ಯಂ ಹತಕಂಟಕಮ್ |
ವಾಸುದೇವಪ್ರಸಾದೇನ ಸಫಲಾಯಾಃ ಪ್ರಭಾವತಃ || ೪೮ ||

---

ಅಶ್ವತ್ಥ ವೃಕ್ಷದ ಕೆಳಗಿಟ್ಟನು || ೪೨ || ಆ ಫಲಗಳನ್ನು ಶ್ರೀಹರಿಗೆ ನಿವೇದಿಸುತ್ತ ಈ ಫಲಗಳಿಂದ ಭಗವಾನ್ ಶ್ರೀಹರಿಯು ಪ್ರೀತನಾಗಲಿ ಎಂದು ಪ್ರಾರ್ಥಿಸಿ ಲುಂಪಕನು ಅಲ್ಲಿಯೇ ಕೆಳಗೆ ಕುಳಿತುಕೊಂಡನು. ರಾತ್ರಿ ನಿದ್ರೆಯಿಲ್ಲದೇ ಕಳೆಯಲು || ೪೩ || ಅದೇ ಸಫಲಾವ್ರತದ ಜಾಗರಣೆಯಾಯಿತು. ಭಕ್ತವತ್ಸಲನಾದ ಭಗವಾನ್ ಮಧುಸೂದನನು ಫಲ ನಿವೇದನೆಯನ್ನೇ ವ್ರತ ಪೂಜೆಯೆಂದು ತಿಳಿದನು || ೪೪ || ಈ ಪ್ರಕಾರ ಲುಂಪಕನಿಗೆ ಅರಿವಿಲ್ಲದೇ ಸಫಲಾವ್ರತಾನುಷ್ಠಾನವು ಘಟಿಸಿತು. ಆ ವ್ರತಪ್ರಭಾವದಿಂದ ಮುಂದೆ ಅವನಿಗೆ ನಿಷ್ಕಂಟಕವಾದ ರಾಜ್ಯವು ಪ್ರಾಪ್ತವಾಯಿತು || ೪೫ || ಹೇ ಧರ್ಮರಾಜಾ ವ್ರತಾನುಷ್ಠಾನದಿಂದ ಪ್ರಾಪ್ತವಾದ ಪುಣ್ಯಪ್ರಭಾವದಿಂದ ಲುಂಪಕನಿಗೆ ರಾಜ್ಯವು ಹೇಗೆ ಪ್ರಾಪ್ತವಾಯಿತೆಂಬುದನ್ನು ತಿಳಿಸುವೆನು ಕೇಳು. ಮರುದಿನ ದ್ವಾದಶೀ ಸೂರ್ಯೋದಯದ ಸಮಯಕ್ಕೆ ಒಂದು ದಿವ್ಯವಾದ ಅಲಂಕೃತ ಅಶ್ವವು ಲುಂಪಕನ ಆಶ್ರಮದೊಳಗೆ ಬಂದಿತು || ೪೬ || ಆ ಕುದುರೆಯು ಲುಂಪಕನ ಸನಿಹದಲ್ಲಿ ಬಂದು ನಿಂತಿರಲಾಗಿ ಒಂದು ಆಶರೀರವಾಣಿಯು ಕೇಳಿಸಿತು ||೪೭|| "ಹೇ ರಾಜಕುಮಾರಾ, ಸಫಲಾವ್ರತಾನುಷ್ಠಾನದ ಪ್ರಭಾವದಿಂದ ಹಾಗೂ ವಾಸುದೇವನ ಅನುಗ್ರಹವುಂಟಾಗಿರುವವರಿಂದ ನೀನು ಇನ್ನು ನಿಷ್ಕಂಟಕವಾದ ನಿನ್ನ ರಾಜ್ಯವನ್ನು ಹೊಂದುವಿ || ೪೮ || ನೀನಿನ್ನು ಯಾವ ಭಯವಿಲ್ಲದೇ

**ಪಿತುಃ ಸಮೀಪಂ ಗಚ್ಛ ತ್ವಂ ಭುಂಕ್ಷ್ವ ರಾಜ್ಯಮಕಂಟಕಮ್ |**
**ತಥೇತ್ಯುಕ್ತ್ವಾ ತ್ವಸೌ ತತ್ರ ದಿವ್ಯರೂಪಧರೋಽಭವತ್ || ೪೯ ||**

**ಕೃಷ್ಣೇ ಮತಿಶ್ಚ ತಸ್ಯಾಸೀತ್ ಪರಮಾ ವೈಷ್ಣವೀ ತಥಾ |**
**ದಿವ್ಯಾಭರಣಶೋಭಾಢ್ಯಸ್ತಾತಂ ನತ್ವಾ ಸ್ಥಿತೋ ಗೃಹೇ || ೫೦ ||**

**ವೈಷ್ಣವಾಯ ತತೋ ದತ್ತಂ ಪಿತ್ರಾ ರಾಜ್ಯಮಕಂಟಕಮ್ |**
**ಕೃತಂ ರಾಜ್ಯಂ ತು ತೇನೈವ ವರ್ಷಾಣಿ ಸುಬಹೂನ್ಯಪಿ || ೫೧ ||**

**ಹರಿವಾಸರತಲ್ಲೀನೋ ವಿಷ್ಣುಭಕ್ತಿರತಃ ಸದಾ |**
**ಮನೋಜ್ಞಾಸ್ತಸ್ಯ ಪುತ್ರಾಃ ಸ್ಯುಃ ದಾರಾಃ ಕೃಷ್ಣಪ್ರಸಾದತಃ || ೫೨ ||**

**ತತಃ ಸ ವಾರ್ಧಕೇ ಪ್ರಾಪ್ತೇ ರಾಜ್ಯಂ ಪುತ್ರೇ ನಿವೇಶ್ಯ ಚ |**
**ವನಂ ಗತಃ ಸಂಯತಾತ್ಮಾ ವಿಷ್ಣುಭಕ್ತಿಪರಾಯಣಃ || ೫೩ ||**

**ಸಾಧಯಿತ್ವಾ ತಥಾತ್ಮಾನಂ ವಿಷ್ಣುಲೋಕೇ ಜಗಾಮ ಹ |**
**ಗತಃ ಕೃಷ್ಣಸ್ಯ ಸಾನ್ನಿಧ್ಯೇ ಯತ್ರ ಗತ್ವಾ ನ ಶೋಚತಿ || ೫೪ ||**

---

ನಿನ್ನ ತಂದೆಯ ಸನ್ನಿಧಿಗೆ ಹೋಗು ಮತ್ತು ನಿಷ್ಕಂಟಕವಾದ ರಾಜ್ಯವನ್ನು ಹೊಂದು". ಈ ಆಕಾಶವಾಣಿಯನ್ನು ಕೇಳಿ ಲುಂಪಕನು ಹಾಗೇ ಆಗಲಿ ಎಂದು ಹೇಳುತ್ತಿರುವಂತೆ ದಿವ್ಯವಾದ ರೂಪವನ್ನು ಹೊಂದಿದನು || ೪೯ || ಅವನಿಗೆ ಶ್ರೀಕೃಷ್ಣನಲ್ಲಿ ಅಚಲವಾದ ಮತಿಯುಂಟಾಯಿತು. ವಿಷ್ಣುಭಕ್ತಿಯಿಂದ ಕೂಡಿದ ಅವನು ದಿವ್ಯವಾದ ಆಭರಣಾದಿಗಳಿಂದ ಅಲಂಕೃತನಾಗಿ ಶೋಭಿಸತೊಡಗಿದನು. ಆಕಾಶವಾಣಿಯ ಆದೇಶದಂತೆ ಅವನು ಕೂಡಲೇ ತಂದೆಯ ಸನ್ನಿಧಿಗೆ ಹೋಗಿ ಭಕ್ತಿಯಿಂದ ನಮಿಸಿ ನಿಂತುಕೊಂಡನು || ೫೦ || ಮಗನಲ್ಲಿಯ ಇಂಥ ಅದ್ಭುತ ಪರಿವರ್ತನೆಯಿಂದ ಹರ್ಷಾಶ್ಚರ್ಯಭರಿತನಾದ ಮಾಹಿಷ್ಮತ ರಾಜನು ತನ್ನೆಲ್ಲ ರಾಜ್ಯಭಾರವನ್ನು ವಿಷ್ಣುಭಕ್ತನಾದ ಮಗನಲ್ಲಿ ಒಪ್ಪಿಸಿದನು. ಮಗನಾದರೋ ಅನೇಕ ವರ್ಷಗಳವರೆಗೆ ಸುವ್ಯವಸ್ಥಿತವಾಗಿ ರಾಜ್ಯಭಾರವನ್ನು ನಡೆಸಿದನು || ೫೧ || ಸದಾ ವಿಷ್ಣು ಭಕ್ತಿಯಲ್ಲಿ ರತನಾದ ಅವನು ತಪ್ಪದೇ ಹರಿವಾಸರಗಳನ್ನು ಆಚರಿಸುತ್ತಿದ್ದನು. ಅವನಿಗೆ ಶ್ರೀಕೃಷ್ಣನ ಅನುಗ್ರಹದಿಂದ ಲಭಿಸಿದ ಸುಂದರಿಯಾದ ಪತ್ನಿಯಲ್ಲಿ ಮನೋಜ್ಞರಾದ ಪುತ್ರರು ಜನಿಸಿದರು || ೫೨ || ಕಾಲಾಂತರದಲ್ಲಿ ವೃದ್ಧಾಪ್ಯವು ಪ್ರಾಪ್ತವಾಗಲು ತನ್ನ ರಾಜ್ಯವನ್ನು ಮಗನಿಗೆ ಒಪ್ಪಿಸಿ ಇಂದ್ರಿಯ ನಿಗ್ರಹವುಳ್ಳವನೂ, ವಿಷ್ಣುಭಕ್ತನೂ ಆದ ಲುಂಪಕನು ವನವನ್ನು ಕುರಿತು ನಡೆದನು ||೫೩|| ವಾನಪ್ರಸ್ಥನಾಗಿದ್ದು ಅನೇಕ ಸಾಧನೆಗಳನ್ನು ಪೂರ್ತಿಮಾಡಿ ಮುಂದೆ ಮರಣಾನಂತರ ಶೋಕ ರಹಿತವಾದ ವಿಷ್ಣುಲೋಕವನ್ನು ಸೇರಿ ಅಲ್ಲಿ ಶ್ರೀ ಕೃಷ್ಣನ ಸನ್ನಿಧಿಯಲ್ಲಿ ಸುಖವಾಗಿದ್ದನು ||೫೪|| ಆದ್ದರಿಂದ ಹೇ ಧರ್ಮರಾಜಾ, ಈ ಪ್ರಕಾರ ಸಫಲಾ

ಏವಂ ಯೇ ವೈ ಪ್ರಕುರ್ವಂತಿ ಸಫಲೈಕಾದಶೀವ್ರತಮ್ |
ಇಹಲೋಕೇ ಯಶಃ ಪ್ರಾಪ್ಯ ಮೋಕ್ಷಂ ಯಾಸ್ಯಂತ್ಯಸಂಶಯಮ್ || ೫೫ ||

ಧನ್ಯಾಸ್ತೇ ಮಾನವಾ ಲೋಕೇ ಸಫಲಾವ್ರತಕಾರಿಣಃ |
ತಸ್ಮಿನ್ ಜನ್ಮನಿ ತೇ ಮೋಕ್ಷಂ ಲಭಂತೇ ನಾತ್ರ ಸಂಶಯಃ || ೫೬ ||

ಸಫಲಾಯಾಶ್ಚ ಮಾಹಾತ್ಮ್ಯಂ ಶ್ರವಣಾದ್ಧಿ ವಿಶಾಂಪತೇ |
ರಾಜಸೂಯಫಲಂ ಪ್ರಾಪ್ಯ ವಸೇತ್ ಸ್ವರ್ಗೇ ಚ ಮಾನವಃ || ೫೭ ||

||ಇತಿ ಶ್ರೀಪೌಷಕೃಷ್ಣ ಸಫಲಾ ಏಕಾದಶೀ ವ್ರತ ಮಾಹಾತ್ಮ್ಯಂ
ಸಂಪೂರ್ಣಮ್|| || ೩ ||

---

ಏಕಾದಶೀವ್ರತವನ್ನು ಯಾರು ಆಚರಿಸುವರೋ ಅವರು ಈ ಲೋಕದಲ್ಲಿ ಯಶಸ್ಸನ್ನು ಹೊಂದಿ ಮರಣಾನಂತರ ನಿಶ್ಚಯವಾಗಿ ಮೋಕ್ಷವನ್ನು ಹೊಂದುವರು || ೫೫ || ಲೋಕದಲ್ಲಿ ಸಫಲಾವ್ರತವನ್ನು ಆಚರಿಸುವ ಮನುಜರು ಅದೇ ಜನ್ಮದಲ್ಲಿ ಮೋಕ್ಷವನ್ನು ಪಡೆಯುವ ಕಾರಣದಿಂದ ಅವರೇ ಧನ್ಯರು || ೫೬ || ಹೇ ರಾಜನ್, ಈ ಸಫಲಾ ವ್ರತದ ಮಹಾತ್ಮೆಯ ಶ್ರವಣ ಮಾತ್ರದಿಂದ ಶ್ರೋತೃವು ರಾಜಸೂಯ ಯಾಗದ ಫಲವನ್ನು ಹೊಂದಿ ಮುಂದೆ ಸ್ವರ್ಗಲೋಕವನ್ನು ಪಡೆಯುವನು || ೫೭ ||

|| ಇಲ್ಲಿಗೆ ಶ್ರೀಭವಿಷ್ಯೋತ್ತರ ಪುರಾಣದಲ್ಲಿಯ ಶ್ರೀ ಪೌಷಕೃಷ್ಣಪಕ್ಷದ ಸಫಲಾನಾಮಕ ಏಕಾದಶೀ ವ್ರತದ ಮಹಾತ್ಮೆಯು ಸಮಾಪ್ತವಾಯಿತು ||

|| ಶ್ರೀ ಕೃಷ್ಣಾರ್ಪಣಮಸ್ತು ||

# ಪೌಷಶುಕ್ಲೈಕಾದಶೀ ವ್ರತ ಕಥಾ

ಯುಧಿಷ್ಠಿರ ಉವಾಚ -

ಕಥಿತಾ ವೈ ತ್ವಯಾ ಕೃಷ್ಣಾ ಸಫಲೈಕಾದಶೀ ಶುಭಾ |
ಕಥಯಸ್ವ ಪ್ರಸಾದೇನ ಶುಕ್ಲಾ ಪೌಷಸ್ಯ ಯಾ ಭವೇತ್ || ೧ ||

ಕಿಂ ನಾಮ ಕೋ ವಿಧಿಸ್ತಸ್ಯಾಃ ಕೋ ದೇವಸ್ತತ್ರ ಪೂಜ್ಯತೇ |
ಕಸ್ಮೈ ತುಷ್ಟಾ ಹೃಷಿಕೇಶ ತ್ವಮೇವ ಪುರುಷೋತ್ತಮ || ೨ ||

ಶ್ರೀ ಕೃಷ್ಣ ಉವಾಚ -

ಶೃಣು ರಾಜನ್ ಪ್ರವಕ್ಷ್ಯಾಮಿ ಶುಕ್ಲಾ ಪೌಷಸ್ಯ ಯಾ ಭವೇತ್ |
ತಸ್ಯಾ ವಿಧಿಂ ಮಹಾರಾಜ ಲೋಕಾನಾಂ ಚ ಹಿತಾಯ ವೈ || ೩ ||

ಪೂರ್ವೇಣ ವಿಧಿನಾ ರಾಜನ್ ಕರ್ತವ್ಯೈಷಾ ಪ್ರಯತ್ನತಃ |
ಪುತ್ರದೇತಿ ಚ ನಾಮ್ನಾಸೌ ಸರ್ವಪಾಪಹರಾ ಪರಾ || ೪ ||

ನಾರಾಯಣೋಽಧಿದೇವೋಽಸ್ಯಾಃ ಕಾಮದಃ ಸಿದ್ಧಿದಾಯಕಃ |
ನಾತಃ ಪರತರಾ ಕಾಚಿತ್ ತ್ರೈಲೋಕ್ಯೇ ಸಚರಾಚರೇ || ೫ ||

---

ಹೇ ಶ್ರೀಕೃಷ್ಣಪರಮಾತ್ಮಾ, ನೀನು ಇದುವರೆಗೆ ಸಫಲಾನಾಮಕ ಏಕಾದಶಿಯ ಮಂಗಳಕರವಾದ ಮಹಾತ್ಮೆಯನ್ನು ತಿಳಿಸಿರುವಿ. ಇದರಂತೆಯೇ ನನ್ನಲ್ಲಿ ಅನುಗ್ರಹ ಮಾಡಿ ಪೌಷಶುಕ್ಲಪಕ್ಷದ ಏಕಾದಶಿಯ ಬಗ್ಗೆಯೂ ತಿಳಿಸಬೇಕು || ೧ || ಆ ಏಕಾದಶಿಯ ವಿಶಿಷ್ಟವಾದ ಹೆಸರೇನು ? ಆ ದಿನದ ವಿಧಿಗಳಾವವು ? ಅಂದಿನ ದಿನ ಯಾವ ದೇವತೆಯನ್ನು ಪೂಜಿಸಬೇಕು? ಈ ಏಕಾದಶೀ ಅನುಷ್ಠಾನದಿಂದ ಯಾರು ಫಲ ಹೊಂದಿದ್ದಾರೆ ? ಹೇ ಹೃಷೀಕೇಶಾ, ಪುರುಷೋತ್ತಮನಾದ ನೀನೇ ಎಲ್ಲವನ್ನೂ ತಿಳಿಸಿ ಅನುಗ್ರಹಿಸಬೇಕು ಎಂದು ಯುಧಿಷ್ಠಿರನು ಪ್ರಾರ್ಥಿಸಲು || ೨ || ಶ್ರೀಕೃಷ್ಣನು ಹೇಳುತ್ತಾನೆ -ಹೇ ಧರ್ಮರಾಜಾ, ಎಲ್ಲ ಜನರಿಗೆ ಕ್ಷೇಮವಾಗಲೆಂಬ ಉದ್ದೇಶದಿಂದ ಪೌಷಶುಕ್ಲಪಕ್ಷದ ಏಕಾದಶೀ ತಿಥಿಯ ವ್ರತವಿಧಿಯನ್ನು ತಿಳಿಸುವೆನು ಕೇಳು || ೩ || ಈ ಹಿಂದೆ ತಿಳಿಸಿದಂತೆಯೇ ಈ ವ್ರತವನ್ನೂ ಆಚರಿಸಬೇಕು. ಪುತ್ರದಾ ಎಂದು ಖ್ಯಾತವಾಗಿರುವ ಈ ಏಕಾದಶೀಯು ಸರ್ವಪಾಪಗಳನ್ನು ನಾಶಮಾಡುವ ಶ್ರೇಷ್ಠವಾದ ವ್ರತವಾಗಿದೆ || ೪ || ಶ್ರೀನಾರಾಯಣನು ಈ ತಿಥಿಯ ಅಧಿದೈವನಾಗಿದ್ದು ಸಕಲಕಾಮನೆಗಳನ್ನು ಮತ್ತು ಸಿದ್ಧಿಗಳನ್ನು ಕೊಡುವವನಾಗಿದ್ದಾನೆ. ತ್ರಿಲೋಕಗಳಲ್ಲಿಯ ಚರಾಚರಪ್ರಪಂಚದಲ್ಲಿ ಈ ಏಕಾದಶೀ ತಿಥಿಗಿಂತಲೂ ಶ್ರೇಷ್ಠವಾದದ್ದು ಬೇರೊಂದಿಲ್ಲ || ೫ || ಈ ವ್ರತದ ಅಧಿದೈವನಾದ ಶ್ರೀಹರಿಯು ವ್ರತಾಚರಣೆ

ವಿದ್ಯಾವಂತಂ ಯಶಸ್ವಂತಂ ಕರೋತಿ ಚ ನರಂ ಹರಿಃ |
ಶ್ರುಣು ರಾಜನ್ ಪ್ರವಕ್ಷ್ಯಾಮಿ ಕಥಾಂ ಪಾಪಹರಾಂ ಪರಾಮ್ || ೬ ||

ಪುರೀ ಭದ್ರಾವತೀ ನಾಮ್ನೀ ರಾಜಾ ತತ್ರ ಸುಕೇತುಮಾನ್ |
ತಸ್ಯ ರಾಜ್ಞೋಽಥ ರಾಜ್ಞೀ ಚ ಶೈವ್ಯಾ ನಾಮ್ನೀತಿ ವಿಶ್ರುತಾ || ೭ ||

ಪುತ್ರಹೀನೇನ ರಾಜ್ಞಾ ಚ ಕಾಲೋ ನೀತೋ ಮನೋರಥೈಃ |
ನೈವಾತ್ಮಜಂ ನೃಪೋ ಲೇಭೇ ವಂಶಕರ್ತಾರಮೇವ ಚ || ೮ ||

ತೇನೈವ ರಾಜ್ಞಾ ಧರ್ಮೇಣ ಚಿಂತಿತಂ ಬಹುಕಾಲತಃ |
ಕಿಂ ಕರೋಮಿ ಕ್ವ ಗಚ್ಛಾಮಿ ಸುತಪ್ರಾಪ್ತಿಃ ಕಥಂ ಭವೇತ್ || ೯ ||

ನ ರಾಷ್ಟ್ರೇ ನ ಪುರೇ ಸೌಖ್ಯಂ ಲೇಭೇ ರಾಜಾ ಸುಕೇತುಮಾನ್ |
ಶೈವ್ಯಯಾ ಕಾಂತಯಾ ಸಾರ್ಧಂ ಪ್ರತ್ಯಹಂ ದುಃಖಿತೋಽಭವತ್ || ೧೦ ||

ತಾವುಭೌ ದಂಪತೀ ನಿತ್ಯಂ ಚಿಂತಾಶೋಕಪರಾಯಣೌ |
ಪಿತರೋಽಸ್ಯ ಜಲಂ ದತ್ತಂ ಕವೋಷ್ಣಮುಪಭುಂಜತೇ || ೧೧ ||

ರಾಜ್ಞಃ ಪಶ್ಚಾನ್ನ ಪಶ್ಯಾಮೋ ಯೋಽಸ್ಮಾನ್ ಸಂತರ್ಪಯಿಷ್ಯತಿ |
ಇತ್ಯೇವಂ ಸಂಸ್ಮರಂತೋಽಸ್ಯ ಪಿತರೋ ದುಃಖಿತಾಽಭವನ್ || ೧೨ ||

---

ಮಾಡುವವನನ್ನು ವಿದ್ಯಾವಂತನನ್ನಾಗಿಯೂ, ಕೀರ್ತಿವಂತನನ್ನಾಗಿಯೂ ಮಾಡುವನು. ಹೇ ರಾಜನ್ ಈ ವ್ರತದ ಸರ್ವಪಾಪಗಳನ್ನು ನಾಶಮಾಡುವ ಶ್ರೇಷ್ಠವಾದ ಕಥೆಯನ್ನು ಹೇಳುವೆನು ಕೇಳು || ೬ || ಹಿಂದಕ್ಕೆ ಭದ್ರಾವತೀ ಎಂಬ ಪುರಿಯಲ್ಲಿ ಸುಕೇತು ಎಂಬ ಹೆಸರಿನ ರಾಜನಿದ್ದನು. ಆ ರಾಜನಿಗೆ ಶೈವ್ಯಾ ಎಂಬ ಹೆಸರಿನ ರಾಣಿಯಿದ್ದಳು || ೭ || ಸಂತಾನವಿಲ್ಲದ ರಾಜನು ಸಂತಾನದ ಆಶೆಯಿಂದ ಕಾಲಕಳೆಯುತ್ತಲಿದ್ದನು. ಆದರೆ ವಂಶವೃದ್ಧಿಯನ್ನು ಮಾಡುವ ಪುತ್ರನನ್ನು ಬಹುಕಾಲದವರೆಗೆ ಪಡೆಯದಂತಾಗಲು ರಾಜನು || ೮ || ಸಂತಾನಪ್ರಾಪ್ತಿಗಾಗಿ ವಿವಿಧ ಧರ್ಮಾಚರಣೆಯ ಬಗ್ಗೆ ಚಿಂತಿಸತೊಡಗಿದನು. ಏನು ಮಾಡಲಿ? ಎಲ್ಲಿ ಹೋಗಲಿ? ಪುತ್ರ ಪ್ರಾಪ್ತಿಯು ಹೇಗಾದೀತು? || ೯ || ಮನಶ್ಯಾಂತಿಯಿಲ್ಲದ ಸುಕೇತು ರಾಜನು ರಾಜ್ಯದಲ್ಲಿ, ಪುರದಲ್ಲಿ ಎಲ್ಲಿಯೂ ಸುಖವನ್ನು ಕಾಣಲಿಲ್ಲ. ಸುಕೇತು ರಾಜಾ ಮತ್ತು ರಾಣಿ ಶೈವ್ಯಾ ದಂಪತಿಗಳು ನಿತ್ಯವೂ ಸಂತಾನದ ಬಗ್ಗೆ ವಿಚಾರಿಸುತ್ತ || ೧೦ || ಚಿಂತೆಯಿಂದ ಶೋಕಾಕುಲರಾದರು. ದಂಪತಿಗಳಿಬ್ಬರೂ ಸುರಿಸುತ್ತಿರುವ ಬೆಚ್ಚಗಿನ ನೇತ್ರಬಾಷ್ಪಗಳನ್ನು ರಾಜನ ಪಿತೃಗಳು ಸ್ವೀಕರಿಸುವಂತಾಯಿತು || ೧೧ || ಈ ರಾಜನ ನಂತರ ಯಾರು ನಮಗೆ ತರ್ಪಣವನ್ನು ಕೊಡುವರು ? ಎಂದು ವಿಚಾರಿಸುತ್ತ ಆವನ ಪಿತೃಗಳು ದುಃಖಿತರಾದರು || ೧೨ || ಪಿತೃಗಳ ದುಃಖವನ್ನರಿತ ರಾಜನೂ ದುಃಖಿತನಾದನು.

ತೇಷಾಂ ತದ್ದುಃಖಮೂಲಂ ಚ ಜ್ಞಾತ್ವಾ ರಾಜಾಪ್ಯತಪ್ಯತ |
ನ ಬಾಂಧವಾ ನ ಮಿತ್ರಾಣಿ. ನಾಮಾತ್ಯಾಃ ಸುಹೃದಸ್ತಥಾ || ೧೩ ||

ರೋಚಂತೇ ತಸ್ಯ ಭೂಪಸ್ಯ ನ ಗಜಾಶ್ವಪದಾತಯಃ |
ನೈರಾಶ್ಯಂ ಭೂಪತೇಸ್ತಸ್ಯ ಮನಸ್ಯೇವಮಜಾಯತ || ೧೪ ||

ನರಸ್ಯ ಪುತ್ರಹೀನಸ್ಯ ನಾಸ್ತಿ ವೈ ಜನ್ಮನಃ ಫಲಮ್ |
ಅಪುತ್ರಸ್ಯ ಗೃಹಂ ಶೂನ್ಯಂ ಹೃದಯಂ ದುಃಖಿತಂ ಸದಾ || ೧೫ ||

ಪಿತೃದೇವಮನುಷ್ಯಾಣಾಂ ನಾನೃಣತ್ವಂ ಸುತಂ ವಿನಾ |
ತಸ್ಮಾತ್ಸರ್ವಪ್ರಯತ್ನೇನ ಸುತಮುತ್ಪಾದಯೇನ್ನರಃ || ೧೬ ||

ಇಹ ಲೋಕೇ ಯಶಸ್ತೇಷಾಂ ಪರಲೋಕೇ ಶುಭಾ ಗತಿಃ |
ಯೇಷಾಂ ತು ಪುಣ್ಯಕರ್ತೄಣಾಂ ಪುಣ್ಯಂ ಜನ್ಮಶತೋದ್ಭವಮ್ || ೧೭ ||

ಆಯುರಾರೋಗ್ಯಸಂಪಚ್ಚ ತೇಷಾಂ ಗೇಹೇ ಪ್ರವರ್ತತೇ |
ಪುತ್ರಾಃ ಪೌತ್ರಾಶ್ಚ ಲೋಕಾಶ್ಚ ಭವೇಯುಃ ಪುಣ್ಯಕರ್ಮಣಾಮ್ || ೧೮ ||

ಪುಣ್ಯಂ ವಿನಾ ನ ಚ ಪ್ರಾಪ್ತಿರ್ವಿಷ್ಣುಭಕ್ತಿಂ ವಿನಾ ತಥಾ |
ಪುತ್ರಾಣಾಂ ಸಂಪದೋ ವಾಪಿ ವಿದ್ಯಾಯಾಶ್ಚೇತಿ ಮೇ ಮತಿಃ || ೧೯ ||

---

ಬಾಂಧವರು, ಮಿತ್ರರು, ಅಮಾತ್ಯರು, ಸುಹೃದರು ಯಾರೊಬ್ಬರೂ ರಾಜನಿಗೆ ರುಚಿಸದಂತಾದರು || ೧೩ || ಗಜ, ಅಶ್ವ ಪದಾತಿಗಳೂ ರುಚಿಸಲಿಲ್ಲ. ಆ ರಾಜನಿಗೆ ಜೀವನದಲ್ಲಿ ಜಿಗುಪ್ಸೆಯುಂಟಾಯಿತು || ೧೪ || ಪುತ್ರಹೀನನಾದ ನರನಿಗೆ ಜನ್ಮದಿಂದೇನು ಫಲ ? ಅಪುತ್ರನಾದವನ ಮನೆಯು ಶೂನ್ಯದಂತೆ ನಿಷ್ಫಲವು ಹಾಗೂ ಹೃದಯವು ಸದಾ ದುಃಖಪೂರ್ಣವಾಗಿರುವದು || ೧೫ || ಸುತನಿಲ್ಲದವನು ಪಿತೃಋಣ, ದೇವಋಣ ಹಾಗೂ ಮನುಷ್ಯ (ಋಷಿ) ಋಣಗಳಿಂದ ಮುಕ್ತನಾಗುವದು ಸಾಧ್ಯವೇ ಇಲ್ಲ. ಆದ್ದರಿಂದ ಸರ್ವಪ್ರಯತ್ನಪೂರ್ವಕ ಪುತ್ರನನ್ನು ಪಡೆಯಬೇಕು || ೧೬ || ನೂರಾರು ಜನ್ಮಗಳಲ್ಲಿ ಯಾರು ಪುಣ್ಯವನ್ನು ಸಂಪಾದಿಸಿರುವರೋ ಅಂಥವರು ಇಹಲೋಕದಲ್ಲಿ ಕೀರ್ತಿವಂತರಾಗಿ ಮರಣಾನಂತರ-ಪರಲೋಕದಲ್ಲಿ ಉತ್ತಮವಾದ ಗತಿಯನ್ನು ಹೊಂದವರು || ೧೭ || ಹಾಗೂ ಅಂಥವರು ಆಯು, ಆರೋಗ್ಯ ಹಾಗೂ ಸಂಪತ್ತುಗಳನ್ನು ಹೊಂದಿ ಸುಖದಿಂದ ಇರುವರು. ಪುಣ್ಯಕರ್ಮಗಳನ್ನು ಮಾಡಿದವರೇ ಪುತ್ರ ಪೌತ್ರಾದಿ ಸಂತಾನವೃದ್ಧಿಯನ್ನು ಹೊಂದುವರು || ೧೮ || ಪುಣ್ಯ ಸಂಗ್ರಹವಿಲ್ಲದೇ ಹಾಗೂ ವಿಷ್ಣುವಿನಲ್ಲಿಯ ಅಚಲವಾದ ಭಕ್ತಿಯಿಲ್ಲದೇ ಪುತ್ರಪ್ರಾಪ್ತಿ, ಸಂಪತ್‌ಪ್ರಾಪ್ತಿ ಮತ್ತು ವಿದ್ಯಾಪ್ರಾಪ್ತಿಗಳಾಗುವದಿಲ್ಲವೆಂದು ನಾನು ತಿಳಿದಿದ್ದೇನೆ || ೧೯ || ಹೀಗೆ ವಿಚಾರಿಸುತ್ತ ರಾಜನು ಒಂದು ಕ್ಷಣ ಕೂಡ

ಏವಂ ವಿಚಿಂತ್ಯಮಾನೋಽಸೌ ರಾಜಾ ಶರ್ಮ ನ ಲಬ್ಧವಾನ್ |
ಪ್ರತ್ಯೂಷೇಽಚಿಂತಯದ್ರಾಜಾ ನಿಶೀಥೇ ಚಿಂತಯತ್ತಥಾ || ೨೦ ||

ತತಶ್ಚಾತ್ಮವಿನಾಶಂ ವೈ ವಿಚಾರ್ಯಾಥ ಸುಕೇತುಮಾನ್ |
ಆತ್ಮಘಾತೇ ದುರ್ಗತಿಂ ಚ ಚಿಂತಯಿತ್ವಾ ತದಾ ನೃಪಃ || ೨೧ ||

ದೃಷ್ಟ್ವಾತ್ಮದೇಹಂ ಪ್ರಕ್ಷೀಣಮಪುತ್ರತ್ವಂ ತಥೈವ ಚ |
ಪುನರ್ವಿಚಾರ್ಯಾತ್ಮಬುದ್ಧ್ಯಾ ಹ್ಯಾತ್ಮನೋ ಹಿತಕಾರಣಮ್ || ೨೨ ||

ಅಶ್ವಾರೂಢಸ್ತತೋ ರಾಜಾ ಜಗಾಮ ಗಹನಂ ವನಮ್ |
ಪುರೋಹಿತಾದಯಃ ಸರ್ವೇ ನ ಜಾನಂತಿ ಗತಂ ನೃಪಮ್ || ೨೩ ||

ಗಂಭೀರೇ ವಿಪಿನೇ ರಾಜಾ ಮೃಗಪಕ್ಷಿನಿಷೇವಿತೇ |
ವಿಚಚಾರ ತದಾ ತಸ್ಮಿನ್ ವನೇ ವೃಕ್ಷಾನ್ ವಿಲೋಕಯನ್ || ೨೪ ||

ವಟಾನಶ್ವತ್ಥಬಿಲ್ವಾಂಶ್ಚ ಖರ್ಜೂರಾನ್ ಪನಸಾಂಸ್ತಥಾ |
ಬಕುಲಾನ್ ಸಪ್ತಪರ್ಣಾಂಶ್ಚ ತಿಂದುಕಾಂಸ್ತಿಲಕಾನಪಿ || ೨೫ ||

ಶಾಲಾಂಸ್ತಾಲಾಂಸ್ತಮಾಲಾಂಶ್ಚ ದದರ್ಶ ಸರಲಾನ್ನೃಪಃ |
ಇಂಗದೀಕಕುಭಾಂಶ್ಚೈವ ಶ್ಲೇಷ್ಮಾತಕಬಿಭೀತಕಾನ್ || ೨೬ ||

---

ಮನಶ್ಶಾಂತಿಯನ್ನು ಹೊಂದಲಿಲ್ಲ. ಹಗಲು ರಾತ್ರಿ ಒಂದೇ ಸವನೇ ಚಿಂತಿಸುತ್ತ || ೨೦ || ಸುಕೇತು ರಾಜನು ಆತ್ಮಹತ್ಯೆ ಮಾಡಿಕೊಳ್ಳಬೇಕೆಂದೂ ಒಂದು ಸಲ ಆಲೋಚಿಸಿದನು. ಆದರೆ ಆತ್ಮಹತ್ಯೆಯಿಂದ ದುರ್ಗತಿಯಾಗುವುದನ್ನು ತಿಳಿದು ರಾಜನು ಆ ವಿಚಾರವನ್ನು ಬಿಟ್ಟು ಬಿಟ್ಟನು || ೨೧ || ಚಿಂತೆಯಿಂದ ತನ್ನ ದೇಹವು ಅತಿಕೃಶವಾಗಿರುವುದನ್ನು ಕಂಡು ಮತ್ತು ತನಗೆ ಇದುವರೆಗೆ ಮಕ್ಕಳಾಗದಿರುವದರಿಂದ ಜಿಗುಪ್ಸೆಗೊಂಡು ವಿವೇಕದಿಂದ ಸಾರಾಸಾರ ವಿಚಾರಮಾಡಿ ತನಗೆ ಹಿತವಾಗುವದಕ್ಕಾಗಿ || ೨೨ || ಒಂದು ದಿನ ರಾಜನು ಯಾರಿಗೂ ತಿಳಿಸದೇ ಅಶ್ವಾರೂಢನಾಗಿ ಗಹನವಾದ ವನವನ್ನು ಪ್ರವೇಶಿಸಿದನು. ಆಸ್ಥಾನದ ಪುರೋಹಿತಾದಿಗಳು ಯಾರೂ ರಾಜನು ಹೊರಟು ಹೋಗಿರುವದನ್ನು ತಿಳಿಯಲಿಲ್ಲ ||೨೩|| ವಿವಿಧ ಮೃಗ ಪಕ್ಷಿಗಳಿಂದ ತುಂಬಿದ ಗಹನವಾದ ಅರಣ್ಯದಲ್ಲಿ ರಾಜನು ಅಲ್ಲಿರುವ ವೃಕ್ಷಗಳನ್ನು ನೋಡುತ್ತ ಸಂಚರಿಸತೊಡಗಿದನು || ೨೪ || ಅರಣ್ಯದಲ್ಲಿದ್ದ ವಟವೃಕ್ಷಗಳು, ಅಶ್ವತ್ಥ ವೃಕ್ಷಗಳು, ಬಿಲ್ವ ವೃಕ್ಷ, ಖರ್ಜೂರ ಗಿಡಗಳು, ಹಲಸಿನ ಗಿಡಗಳು, ಬಕುಲ ವೃಕ್ಷ, ಸಪ್ತಪರ್ಣ (ಹೊನ್ನಮರ), ತುಂಬುರುಕಾಯಿ ಮರ, ತಿಲಕ ವೃಕ್ಷ || ೨೫ || ಶಾಲಾವೃಕ್ಷ ತಾಳೀಮರ, ತಮಾಲ ವೃಕ್ಷ, ಸರಲ, ಇಂಗಳಕಾಯಿ ಗಿಡ (ಇಂಗುದೀ) ಕಕುಭವೃಕ್ಷ ದೊಡ್ಡ ಚಳ್ಳುಬೊಂಕೆಗಿಡ (ಶ್ಲೇಷ್ಮಾತಕ) ಅರಳೀಕಾಯಿಗಿಡ (ಬಿಭೀತಕ) || ೨೬ || ಶಲ್ಲಕೀಗಿಡ,

ಶಲ್ಲಕೀಕರಮರ್ದಾಂಶ್ಚ ಪಾಟಲಾನ್ ಖದಿರಾನಪಿ |
ಶಾಕಾಂಶ್ಚೈವ ಪಲಾಶಾಂಶ್ಚ ಶೋಭಿತಾನ್ ದದೃಶೇ ಪುನಃ || ೨೭ ||

ಮೃಗವ್ಯಾಘ್ರವರಾಹಾಂಶ್ಚ ಸಿಂಹಾನ್ ಶಾಖಾಮೃಗಾನಪಿ |
ದದರ್ಶ ಭುಜಗಾನ್ ರಾಜಾ ವಲ್ಮೀಕಾದಭಿನಿಃಸೃತಾನ್ || ೨೮ ||

ತಥಾ ವನಗಜಾನ್ ಮತ್ತಾನ್ ಕಲಭೈಃ ಸಹ ಸಂಗತಾನ್ |
ಗವಯಾನ್ ಕೃಷ್ಣಸಾರಾಂಶ್ಚ ಶೃಗಾಲಾನ್ ಶಶಕಾನಪಿ || ೨೯ ||

ವನಮಾರ್ಜಾರಕಾನ್ ಕ್ರೂರಾನ್ ಶಲ್ಲಕಾಂಶ್ಚಮರಾನಪಿ |
ಯೂಥಪಾಂಶ್ಚ ಚತುರ್ದಂತಾನ್ ಕರಿಣೀಗಣಮಧ್ಯಗಾನ್ || ೩೦ ||

ತಾನ್ ದೃಷ್ಟ್ವಾ ಚಿಂತಯಾಮಾಸ ಆತ್ಮನಃ ಸ ಗಜಾನ್ನೃಪಃ |
ತೇಷಾಂ ಸ ವಿಚರನ್ ಮಧ್ಯೇ ರಾಜಾ ಶೋಕಮವಾಪ ಹ || ೩೧ ||

ಮಹದಾಶ್ಚರ್ಯಸಂಯುಕ್ತಂ ದದರ್ಶ ವಿಪಿನಂ ನೃಪಃ |
ಕ್ವಚಿಚ್ಛಿವಾರುತಂ ಶೃಣ್ವನ್ ಉಲೂಕವಿರುತಂ ತಥಾ || ೩೨ ||

ತಾಂಸ್ತಾನ್ ಪಕ್ಷಿಗಣಾನ್ ಪಶ್ಯನ್ ಬಭ್ರಾಮ ವನಮಧ್ಯಗಃ |
ಏವಂ ದದರ್ಶ ಗಹನಂ ನೃಪೋ ಮಧ್ಯಂ ಗತೇ ರವೌ || ೩೩ ||

---

ಕಮರಿಕೆ ಹಣ್ಣಿನ ಗಿಡ (ಕರಮರ್ದ), ಪಾಟಲ ವೃಕ್ಷ, ಕಗ್ಗಲೀಮರ (ಖದಿರ), ಶಾಕವೃಕ್ಷಗಳು ಮತ್ತು ಪಲಾಶಮರ ಇವೇ ಮೊದಲಾದ ಶೋಭಿಸುವ ವೃಕ್ಷಗಳನ್ನು ನೋಡಿದನು || ೨೭ || ಮೃಗ, ವ್ಯಾಘ್ರ, ವರಾಹ, ಸಿಂಹ, ಶಾಖಾಮೃಗ (ಕಪಿ) ಮೊದಲಾದ ವನ್ಯಪ್ರಾಣಿಗಳನ್ನು ಹಾಗೂ ಹುತ್ತಿನಿಂದ ಹೊರಗೆ ಬಂದಿದ್ದ ಸರ್ಪಗಳನ್ನು ಕಂಡನು || ೨೮ || ಇದಲ್ಲದೇ ಮರಿ ಆನೆಗಳಿಂದ ಕೂಡಿಕೊಂಡು ಸಂಚರಿಸುತ್ತಿರುವ ಮತ್ತ ಕಾಡಾನೆಗಳನ್ನು, ಕಾಡಾಕಳುಗಳನ್ನು, ಕೃಷ್ಣಸಾರಮೃಗಗಳನ್ನು, ನರಿಗಳನ್ನು, ಮೊಲಗಳನ್ನು || ೨೯ || ಕ್ರೂರ ಕಾಡು ಬೆಕ್ಕುಗಳನ್ನು, ಶಲ್ಲಕಗಳನ್ನು, ಹೆಣ್ಣಾನೆಗಳ ಮಧ್ಯದಲ್ಲಿರುವ ನಾಲ್ಕು ಹಲ್ಲುಗಳುಳ್ಳ ಮದ್ದಾನೆಗಳನ್ನು ಇವೇ ಮೊದಲಾದವುಗಳನ್ನು ನೋಡಿದನು || ೩೦ || ಆನೆಗಳನ್ನು ನೋಡಿದ ರಾಜನು ತನ್ನ ರಾಜ್ಯದಲ್ಲಿಯ ಆನೆಗಳನ್ನು ಸ್ಮರಿಸುತ್ತ ದುಃಖಿತನಾಗಿ ಅವುಗಳ ಮಧ್ಯದಲ್ಲಿ ಸಂಚರಿಸತೊಡಗಿದನು || ೩೧ || ಎಲ್ಲಿಂದಲೋ ಹುಲಿಗಳ ಗರ್ಜನೆಯನ್ನು ಕೇಳಿ ಹಾಗೂ ಬೇರೆ ಕಡೆಯಿಂದ ಗೂಬೆಗಳ ಧ್ವನಿಯನ್ನು ಕೇಳಿ ರಾಜನು ಆ ಅರಣ್ಯವು ಭಯಾನಕವೂ ಹಾಗೂ ಮಹದಾಶ್ಚರ್ಯಯುತವೂ ಆಗಿರುವುದನ್ನು ಕಂಡನು || ೩೨ || ವನದಲ್ಲಿರುವ ಅನೇಕ ಚಿತ್ರ ವಿಚಿತ್ರ ಪಕ್ಷಿಗಳನ್ನೂ ನೋಡುತ್ತ ಗಹನವಾದ ಅರಣ್ಯದಲ್ಲಿ ಸಂಚರಿಸತೊಡಗಿದನು. ಹೀಗೆ ಸಂಚರಿಸುತ್ತಿರಲು ಮಧ್ಯಾಹ್ನದ ಸಮಯವು ಬಂದು ||೩೩||

ಕ್ಷುತ್ತೃಡ್ಭ್ಯಾಂ ಪೀಡಿತೋ ರಾಜಾ ಇತಶ್ಚೇತಶ್ಚ ಧಾವತಿ |
ಚಿಂತಯಾಮಾಸ ನೃಪತಿಃ ಸಂಶುಷ್ಕಗಲಕಂಧರಃ || ೩೪ ||

ಮಯಾ ತು ಕಿಂ ಕೃತಂ ಕರ್ಮ ಪ್ರಾಪ್ತಂ ದುಃಖಂ ಯದೀದೃಶಮ್ |
ಮಯಾ ಚ ತೋಷಿತಾ ದೇವಾ ಯಜ್ಞೈಃ ಪೂಜಾಭಿರೇವ ಚ || ೩೫ ||

ತಥೈವ ಬ್ರಾಹ್ಮಣಾ ದಾನೈಸ್ತೋಷಿತಾ ಮಿಷ್ಟಭೋಜನೈಃ |
ಪ್ರಜಾಶ್ಚೈವ ಯಥಾಕಾಲಂ ಪುತ್ರವತ್ಪರಿಪಾಲಿತಾಃ || ೩೬ ||

ಕಸ್ಮಾದ್ದುಃಖಂ ಮಯಾ ಪ್ರಾಪ್ತಮೀದೃಶಂ ದಾರುಣಂ ಮಹತ್ |
ಇತಿ ಚಿಂತಾವಶೋ ರಾಜಾ ಜಗಾಮಾಥಾಗ್ರತೋ ವನಮ್ || ೩೭ ||

ಸುಕೃತಸ್ಯ ಪ್ರಭಾವೇಣ ಸರೋ ದೃಷ್ಟಂ ಮನೋರಮಮ್ |
ಮಾನಸೇನ ಸ್ಪರ್ಧಮಾನಂ ಪದ್ಮಿನೀಪರಿಶೋಭಿತಮ್ || ೩೮ ||

ಕಾರಂಡವೈಶ್ಚಕ್ರವಾಕೈ ರಾಜಹಂಸೈಶ್ಚ ನಾದಿತಮ್ |
ಮಕರೈರ್ಬಹುಭಿರ್ಯುಕ್ತಂ ಮತ್ಸ್ಯೈರ್ಜಲಚರೈರ್ಯುತಮ್ || ೩೯ ||

---

ರಾಜನು ಹಸಿವೆ ನೀರಡಿಕೆಗಳಿಂದ ಪೀಡಿತನಾಗಿ ವನದಲ್ಲಿ ದಿಕ್ಕು ತಪ್ಪಿ ಏನೊಂದೂ ತೋಚದಂತಾದನು. ಆಗ ಗಂಟಲು ಒಣಗಿ ಕಷ್ಟ ಬಡುತ್ತಿದ್ದ ರಾಜನು ವಿಚಾರಿಸಿದನು ||೩೪|| "ಅಯ್ಯೋ, ಇಂಥ ದುಃಖವು ಪ್ರಾಪ್ತವಾಗಲು ನಾನು ಅದಾವ ಕರ್ಮವನ್ನು ಮಾಡಿದ್ದೆನು? ನಾನಂತೂ ಯಜ್ಞಗಳಿಂದಲೂ ಮತ್ತು ವಿವಿಧ ಪೂಜೆಗಳಿಂದಲೂ ದೇವತೆಗಳನ್ನು ತುಷ್ಟಬಡಿಸಿದ್ದೇನೆ || ೩೫ || ಅದರಂತೆಯೇ ಮಿಷ್ಟಾನ್ನ ಭೋಜನಗಳಿಂದ ಹಾಗೂ ದಾನಗಳಿಂದ ಬ್ರಾಹ್ಮಣರನ್ನು ತೃಪ್ತಿಬಡಿಸಿದ್ದೇನೆ. ಪ್ರಜೆಗಳನ್ನಂತೂ ಸದಾಕಾಲ ಮಕ್ಕಳಂತೆ ಪರಿಪಾಲಿಸಿದ್ದೇನೆ || ೩೬ || ಹಾ ಅದಾವ ಕಾರಣಕ್ಕಾಗಿ ನನಗಿಂದು ಇಂಥ ದಾರುಣವಾದ ದುಃಖವು ಪ್ರಾಪ್ತವಾಗಿದೆ". ಹೀಗೆಯೇ ಚಿಂತಿಸುತ್ತ ರಾಜನು ಮುಂದಿನ ಬೇರೊಂದು ವನವನ್ನು ಪ್ರವೇಶಿಸಿದನು || ೩೭ || ಅಷ್ಟರಲ್ಲಿ ರಾಜನು ಪೂರ್ವ ಸುಕೃತದಿಂದ ಆ ವನದಲ್ಲಿ ಒಂದು ಮನೋಹರವಾದ ಸರೋವರವನ್ನು ಕಂಡು ಹರ್ಷ ಭರಿತನಾದನು. ಮಾನಸ ಸರೋವರಕ್ಕೆ ಪ್ರತಿಸ್ಪರ್ಧಿಯಂತಿದ್ದ, ಕಮಲಪುಷ್ಪಗಳಿಂದ ಪರಿಶೋಭಿಸುತ್ತಿದ್ದ || ೩೮ || ಕಾರಂಡಪಕ್ಷಿ, ಚಕ್ರವಾಕ ಪಕ್ಷಿ, ರಾಜಹಂಸ, ಮೊದಲಾದ ಪಕ್ಷಿಗಳ ಕಲಕಲನಾದದಿಂದ ತುಂಬಿದ, ಅನೇಕ ಮೊಸಳೆ, ಮೀನು ಹಾಗೂ ಜಲಚರ ಪ್ರಾಣಿಗಳಿಂದ ಕೂಡಿದ ಸರೋವರವನ್ನು ಕಂಡನು ||೩೯|| ಆ ಸರೋವರದ ಸನಿಹದಲ್ಲಿ ಅನೇಕ ಮುನಿಗಳ

ಸಮೀಪೇ ಸರಸಸ್ತತ್ರ ಮುನೀನಾಮಾಶ್ರಮಾನ್ ಬಹೂನ್ |
ದದರ್ಶ ರಾಜಾ ಲಕ್ಷ್ಮೀವಾನ್ನಿಮಿತ್ತೈಃ ಶುಭಶಂಸಿಭಿಃ || ೪೦ ||

ಸವ್ಯಾತ್ಪರತರಂ ಚಕ್ಷುರಪಸವ್ಯಸ್ತಥಾಕರಃ |
ಸ್ಫುರಿತಸ್ತಸ್ಯ ರಾಜ್ಞಶ್ಚ ಶಂಸಿತಂ ಶುಭಲಕ್ಷಣಮ್ || ೪೧ ||

ತಸ್ಯ ತೀರೇ ಮುನೀನ್ ದೃಷ್ಟ್ವಾ ಕುರ್ವಾಣಾನ್ನೈಗಮಂ ಜಪಮ್ |
ಅವತೀರ್ಯ ಹಯಾತ್ತಸ್ಮಾನ್ಮುನೀನಾಮಗ್ರತಃ ಸ್ಥಿತಃ || ೪೨ ||

ಪೃಥಕ್ ಪೃಥಕ್ ವವಂದೇ ಸ ಮುನೀಂಸ್ತಾನ್ ಶಂಸಿತವ್ರತಾನ್ |
ಕೃತಾಂಜಲಿಪುಟೋ ಭೂತ್ವಾ ದಂಡವಚ್ಚ ಪ್ರಣಮ್ಯ ಸಃ || ೪೩ ||

ಹರ್ಷೇಣ ಮಹತಾವಿಷ್ಟೋ ಬಭೂವ ನೃಪಸತ್ತಮಃ |
ತಮೂಚುಸ್ತೇಽಪಿ ಮುನಯಃ ಪ್ರಸನ್ನಾಃ ಸ್ಮೋ ವಯಂ ತವ || ೪೪ ||

ಕಥಯಸ್ವಾದ್ಯ ವೈ ರಾಜನ್ ಯತ್ತೇ ಮನಸಿ ವರ್ತತೇ |
ರಾಜೋವಾಚ
ಕೇ ಯೂಯಮುಗ್ರತಪಸಃ ಕಾ ಆಖ್ಯಾ ಭವತಾಮಪಿ || ೪೫ ||

ಕಿಮರ್ಥಮಾಗತಾ ಯುಯಂ ವದಂತು ಮಮ ತತ್ತ್ವತಃ |
ಮುನಯ ಊಚುಃ
ವಿಶ್ವೇದೇವಾ ವಯಂ ರಾಜನ್ ಸ್ನಾನಾರ್ಥಮಿಹ ಚಾಗತಾಃ || ೪೬ ||

---

ಆಶ್ರಮಗಳಿದ್ದವು. ಇದೆಲ್ಲವನ್ನು ನೋಡಿದ ರಾಜನಿಗೆ ಶುಭಸೂಚಕವಾದ ಶಕುನಗಳಾದವು || ೪೦ || ರಾಜನ ಬಲಗಣ್ಣು ಮತ್ತು ಎಡಭುಜಗಳು ಸ್ಫುರಿಸಿ ಮುಂದಾಗುವ ಶುಭಸೂಚನೆಯನ್ನು ನೀಡಿದವು || ೪೧ || ಸರೋವರದ ತೀರದಲ್ಲಿ ವೇದ ಮಂತ್ರಗಳನ್ನು ಜಪಿಸುತ್ತಿರುವ ಮುನಿಗಳನ್ನು ಕಂಡು ರಾಜನು ಕುದುರೆಯಿಂದ ಕೆಳಗಿಳಿದು ಅವರೆದುರಿನಲ್ಲಿ ಹೋಗಿ ನಿಂತುಕೊಂಡನು || ೪೨ || ಶ್ರೇಷ್ಠವಾದ ವ್ರತಾನುಷ್ಠಾನಗಳಿಂದ ಮಾನ್ಯರಾದ ಒಬ್ಬೊಬ್ಬ ಮುನಿಯನ್ನೂ ಪ್ರತ್ಯೇಕವಾಗಿ ವಂದಿಸುತ್ತ ಅವರಿಗೆ ದಂಡಪ್ರಣಾಮಗಳನ್ನು ಸಲ್ಲಿಸಿ ಕೈಜೋಡಿಸಿಕೊಂಡು ನಿಂತುಕೊಂಡನು || ೪೩ || ಹರ್ಷಭರಿತನಾದ ರಾಜನನ್ನು ಕಂಡು ಮುನಿಗಳು ಅಯ್ಯಾ, ನಾವು ಪ್ರಸನ್ನರಾಗಿದ್ದೇವೆ ||೪೪|| ನಿನ್ನ ಮನದಲ್ಲಿರುವದನ್ನು ತಿಳಿಸು ಎಂದೆನಲು ರಾಜನು ಹೇಳಿದನು ಭೋ, ಉಗ್ರವಾದ ತಪಸ್ಸನ್ನಾಚರಿಸುತ್ತಿರುವ ತಾವು ಯಾರು ? ತಮ್ಮ ನಾಮಧೇಯಗಳೇನು? || ೪೫ || ಯಾವ ಕಾರಣಕ್ಕಾಗಿ ತಾವುಗಳೆಲ್ಲ ಇಲ್ಲಿ ಬಂದು ನೆಲೆಸಿರುವಿರಿ ? ಇದೆಲ್ಲವನ್ನೂ ಯಥಾರ್ಥವಾಗಿ ನನಗೆ ತಿಳಿಸಿರಿ. ಆಗ ಮುನಿಗಳು ಹೇಳಿದರು ಹೇ ರಾಜನ್, ನಾವು ವಿಶ್ವೇದೇವತೆಗಳು. ಸ್ನಾನಕ್ಕಾಗಿ ಇಲ್ಲಿ

ಮಾಘೋ ನಿಕಟಮಾಯಾತ ಏತಸ್ಮಾತ್ಪಂಚಮೇಽಹನಿ |
ಅದ್ಯ ಹ್ಯೇಕಾದಶೀ ರಾಜನ್ ಪುತ್ರದಾನಾಮ ನಾಮತಃ || ೪೭ ||

ಪುತ್ರಂ ದದಾತ್ಯಸೌ ಶುಕ್ಲಾ ಪುತ್ರದಾ ಪುತ್ರಮಿಚ್ಛತಾಮ್ |

ರಾಜೋವಾಚ

ಮಮಾಪಿ ಯತ್ನೋ ಮುನಯಃ ಸುತಸ್ಯೋತ್ಪಾದನೇ ಮಹಾನ್ || ೪೮ ||

ಯದಿ ತುಷ್ಟಾ ಭವಂತೋ ಮೇ ಪುತ್ರೋ ವೈ ದೀಯತಾಂ ಶುಭಃ |

ಮುನಯ ಊಚುಃ

ಅಸ್ಮಿನ್ನೇವ ದಿನೇ ರಾಜನ್ ಪುತ್ರದಾ ನಾಮ ವರ್ತತೇ || ೪೯ ||

ಏಕಾದಶೀತಿ ವಿಖ್ಯಾತಾ ಕ್ರಿಯತಾಂ ವ್ರತಮುತ್ತಮಮ್ |
ಆಶೀರ್ವಾದೇನ ಚಾಸ್ಮಾಕಂ ಕೇಶವಸ್ಯ ಪ್ರಸಾದತಃ || ೫೦ ||

ಅವಶ್ಯಂ ತವ ರಾಜೇಂದ್ರ ಪುತ್ರಪ್ರಾಪ್ತಿರ್ಭವಿಷ್ಯತಿ |
ಇತ್ಯೇವಂ ವಚನಾತ್ತೇಷಾಂ ಕೃತಂ ರಾಜ್ಞಾ ವ್ರತಂ ಶುಭಮ್ || ೫೧ ||

ದ್ವಾದಶ್ಯಾಂ ಪಾರಣಂ ಕೃತ್ವಾ ಮುನೀನ್ನತ್ವಾ ಪುನಃ ಪುನಃ |
ಆಜಗಾಮ ಗೃಹಂ ರಾಜಾ ರಾಜ್ಞೀ ಗರ್ಭಂ ಸಮಾದಧೇ || ೫೨ ||

---

ಬಂದಿರುವೆವು ||೪೬|| ಇವತ್ತಿನಿಂದ ೫ ದಿನಗಳು ಕಳೆಯಲು ಮಾಘ ಮಾಸವು (ಮಾಘಸ್ನಾನವು) ಪ್ರಾಪ್ತವಾಗುವದು. ಇವತ್ತು ಪುತ್ರದಾ ಎಂದು ಖ್ಯಾತವಾಗಿರುವ ಏಕಾದಶೀ ತಿಥಿಯಾಗಿದೆ || ೪೭ || ಶುಕ್ಲ ಪಕ್ಷದ ಈ ಏಕಾದಶಿಯು ಪುತ್ರಾಪೇಕ್ಷಿಗಳಿಗೆ ಪುತ್ರರನ್ನು ಕರುಣಿಸುವದು. ಮುನಿಗಳ ಈ ಮಾತುಗಳನ್ನು ಕೇಳಿದಾಕ್ಷಣವೇ ರಾಜನು - ಭೋ ಮುನಿಶ್ರೇಷ್ಠರೇ, ಪುತ್ರಪ್ರಾಪ್ತಿಗಾಗಿ ದಾನಧರ್ಮಾದಿಗಳಿಂದ ನಾನು ಬಹಳಷ್ಟು ಪ್ರಯತ್ನಬಟ್ಟೆನು || ೪೮ || ತಾವುಗಳೆಲ್ಲ ನನ್ನಲ್ಲಿ ಪ್ರಸನ್ನರಾಗಿದ್ದರೆ ಒಬ್ಬ ಒಳ್ಳೆಯ ಪುತ್ರನನ್ನು ಕರುಣಿಸಿ ಅನುಗ್ರಹಿಸಿರಿ ಎಂದು ಪ್ರಾರ್ಥಿಸಲು ಮುನಿಗಳು ಹೇಳಿದರು - ಹೇ ರಾಜನ್, ಇಂದಿನ ದಿನವೇ ಪುತ್ರದಾ ಏಕಾದಶೀ ತಿಥಿಯಾಗಿದೆ || ೪೯ || ಈ ದಿನ ನೀನು ಉತ್ತಮವಾದ ಈ ವ್ರತವನ್ನು ಪರಿಪಾಲಿಸು. ನಮ್ಮ ಆಶೀರ್ವಾದದಿಂದಲೂ ಹಾಗೂ ಕೇಶವನ ಅನುಗ್ರಹದಿಂದಲೂ || ೫೦ || ನಿನಗೆ ಖಂಡಿತವಾಗಿ ಪುತ್ರಪ್ರಾಪ್ತಿಯಾಗುವದು. ಮುನಿಗಳ ಉಪದೇಶದಂತೆ ರಾಜನು ಶುಭಕರವಾದ ಆ ಏಕಾದಶೀ ವ್ರತವನ್ನು ಆಚರಿಸಿದನು ||೫೧|| ದ್ವಾದಶಿಯ ದಿನ ಸಕಾಲಕ್ಕೆ ಪಾರಣೆಯನ್ನು ಮಾಡಿ ಆ ಎಲ್ಲ ಮುನಿಗಳಿಗೆ ಪುನಃ ಪುನಃ ನಮಿಸಿ ತಿರುಗಿ ಹೊರಟು ತನ್ನ ಅರಮನೆಗೆ ಬಂದನು. ಕೆಲದಿನಗಳು ಕಳೆದ ನಂತರ ರಾಣಿಯು

ಮುನೀನಾಂ ವಚನೇನೈವ ಪುತ್ರದಾಯಾಃ ಪ್ರಭಾವತಃ |
ಪುತ್ರೋ ಜಾತಸ್ತಥಾ ಕಾಲೇ ತೇಜಸ್ವೀ ಪುಣ್ಯಕರ್ಮಕೃತ್ || ೫೩ ||

ಪಿತರಂ ತೋಷಯಾಮಾಸ ಪ್ರಜಾಪಾಲೋ ಬಭೂವ ಸಃ |
ಏತಸ್ಮಾತ್ಕಾರಣಾದ್ರಾಜನ್ ಕರ್ತವ್ಯಂ ಪುತ್ರದಾವ್ರತಮ್ || ೫೪ ||

ಲೋಕಾನಾಂ ಚ ಹಿತಾರ್ಥಾಯ ತವಾಗ್ರೇ ಕಥಿತಂ ಮಯಾ |
ಏತದ್ವ್ರತಂ ತು ಯೇ ಮರ್ತ್ಯಾಃ ಕುರ್ವಂತಿ ಪುತ್ರದಾಭಿಧಮ್ || ೫೫ ||

ಪುತ್ರಂ ಪ್ರಾಪ್ಯೇಹ ಲೋಕೇ ತು ಮೃತಾಸ್ತೇ ಸ್ವರ್ಗಗಾಮಿನಃ |
ಪಠನಾಚ್ಛ್ರವಣಾದ್ರಾಜನ್ ಅಶ್ವಮೇಧಫಲಂ ಲಭೇತ್ || ೫೬ ||

|| ಇತಿ ಶ್ರೀಭವಿಷ್ಯೋತ್ತರಪುರಾಣೇ ಪೌಷಶುಕ್ಲೈಕಾದಶ್ಯಾಃ
ಪುತ್ರದಾನಾಮ್ನ್ಯಾ ಮಾಹಾತ್ಮ್ಯಂ ಸಂಪೂರ್ಣಮ್|| || ೪ ||

---

ಗರ್ಭವತಿಯಾದಳು || ೫೨ || ಮುನಿಗಳ ಮಾತಿನಂತೆಯೇ ಆ ಪುತ್ರದಾ ವ್ರತದ ಪ್ರಭಾವದಿಂದ ರಾಣಿಯು ಒಂದು ಶುಭಮುಹೂರ್ತದಲ್ಲಿ ತೇಜಸ್ವಿಯಾದ, ಭಾಗ್ಯಶಾಲಿಯಾದ ಗಂಡು ಮಗುವಿಗೆ ಜನ್ಮವಿತ್ತಳು || ೫೩ || ಈ ವಂಶವೃದ್ಧಿಕರನಾದ ಪುತ್ರನನ್ನು ಪಡೆದು ರಾಜನು ತನ್ನ ಪಿತೃಗಳಿಗೆ ಸಂತೋಷವನ್ನುಂಟು ಮಾಡಿದನು. ಮುಂದೆ ನಿಶ್ಚಿಂತನಾಗಿ ಪ್ರಜಾಪರಿಪಾಲನೆಯ ಕಾರ್ಯದಲ್ಲಿ ಉದ್ಯುಕ್ತನಾದನು. ಹೇ ಧರ್ಮರಾಜಾ ಈ ಕಾರಣದಿಂದ ಪುತ್ರದಾವ್ರತವನ್ನು ಆಚರಿಸಬೇಕು || ೫೪ || ಲೋಕದ ಜನರಿಗೆಲ್ಲ ಹಿತವಾಗಲೆಂಬ ಉದ್ದೇಶದಿಂದ ಪುತ್ರದಾವ್ರತದ ಬಗ್ಗೆ ನಿನಗೆ ತಿಳಿಸಿದ್ದೇನೆ. ಪುತ್ರದಾನಾಮಕ ಈ ವ್ರತವನ್ನು ಯಾರು ಆಚರಿಸುವರೋ || ೫೫ || ಅವರು ಪುತ್ರನನ್ನು ಪಡೆದು ಇಹಲೋಕದಲ್ಲಿ ಸುಖದಿಂದ ಇದ್ದು ಮರಣಾನಂತರ ಸ್ವರ್ಗವಾಸವನ್ನು ಹೊಂದುವರು. ಹೇ ಧರ್ಮರಾಜಾ, ಈ ವ್ರತದ ಮಹಾತ್ಮೆಯ ಪಠನದಿಂದ ಹಾಗೂ ಶ್ರವಣದಿಂದ ಅಶ್ವಮೇಧಯಾಗದ ಫಲವು ಲಭಿಸುವುದು || ೫೬ ||

|| ಇಲ್ಲಿಗೆ ಶ್ರೀಭವಿಷ್ಯೋತ್ತರ ಪುರಾಣದಲ್ಲಿಯ ಪುತ್ರದಾ ಎಂಬ ಹೆಸರಿನ
ಪೌಷಶುಕ್ಲ ಏಕಾದಶಿಯ ಮಹಾತ್ಮೆಯು ಸಂಪೂರ್ಣವಾಯಿತು ||
|| ಶ್ರೀಕೃಷ್ಣಾರ್ಪಣಮಸ್ತು ||

# ಮಾಘ ಕೃಷ್ಣೈಕಾದಶೀ ವ್ರತ ಕಥಾ

**ದಾಲ್ಭ್ಯ ಉವಾಚ -**

**ಮರ್ತ್ಯಲೋಕೇ ತು ಸಂಪ್ರಾಪ್ತಾಃ ಪಾಪಂ ಕುರ್ವಂತಿ ಜಂತವಃ |**
**ಬ್ರಹ್ಮಹತ್ಯಾದಿಪಾಪೈಶ್ಚ ಹ್ಯನ್ಯೈಶ್ಚ ವಿವಿಧೈರ್ಯುತಾಃ || ೧ ||**

**ಪರದ್ರವ್ಯಾಪಹರ್ತಾರಃ ಪರವ್ಯಸನಮೋಹಿತಾಃ |**
**ಕಥಂ ನೋ ಯಾಂತಿ ನರಕಾನ್ ಬ್ರಹ್ಮಂಸ್ತದ್ಬ್ರೂಹಿ ತತ್ತ್ವತಃ || ೨ ||**

**ಅನಾಯಾಸೇನ ಭಗವನ್ ದಾನೇನಾಲ್ಪೇನ ಕೇನಚಿತ್ |**
**ಪಾಪಂ ಪ್ರಶಮಮಾಯಾತಿ ಯೇನ ತದ್ವಕ್ತುಮರ್ಹಸಿ || ೩ ||**

**ಪುಲಸ್ತ್ಯ ಉವಾಚ -**

**ಸಾಧು ಸಾಧು ಮಹಾಭಾಗ ಗುಹ್ಯಮೇತದುದಾಹೃತಮ್ |**
**ಯನ್ನ ಕಸ್ಯಚಿದಾಖ್ಯಾತಂ ಬ್ರಹ್ಮವಿಷ್ಣ್ವಿಂದ್ರ ದೈವತೈಃ || ೪ ||**

**ತದಹಂ ಕಥಯಿಷ್ಯಾಮಿ ತ್ವಯಾ ಪೃಷ್ಟೋ ದ್ವಿಜೋತ್ತಮ |**
**ತತೋ ಮಾಘೇ ತು ಸಂಪ್ರಾಪ್ತೇ ಶುಚಿಃ ಸ್ನಾತೋ ಜತೇಂದ್ರಿಯಃ || ೫ ||**

---

ದಾಲ್ಭ್ಯ ಋಷಿಗಳು ಪುಲಸ್ತ್ಯ ಮುನಿಗಳನ್ನು ಕುರಿತು ಪ್ರಶ್ನಿಸುತ್ತಾರೇ-ಹೇ ಬ್ರಹ್ಮಜ್ಞಾನಿಗಳಾದ ಪುಲಸ್ತ್ಯರೇ, ಮನುಷ್ಯಲೋಕಕ್ಕೆ ಬಂದ ಜೀವಿಗಳು ಒಂದಿಲ್ಲೊಂದು ಪಾಪವನ್ನು ಮಾಡುತ್ತಾರೆ. ಬ್ರಹ್ಮಹತ್ಯಾದಿ ಪಾಪಗಳಿಂದ ಅಥವಾ ಇತರ ವಿವಿಧ ಪಾಪಗಳಿಂದ ಕೂಡಿದವರಾಗಿರುತ್ತಾರೆ. || ೧ || ಅನ್ಯರ ದ್ರವ್ಯವನ್ನು ಅಪಹರಿಸುವವರು ಕೆಲವರಾದರೆ ಇನ್ನು ಕೆಲವರು ದುಶ್ಚಟಗಳಿಗೆ ಬಲಿಯಾಗುತ್ತಾರೆ. ತಾವು ಮಾಡಿದ ಪಾಪಗಳಿಂದ ನರಕವನ್ನು ಸೇರಬೇಕಾದ ಇವರು ಏನು ಮಾಡುವುದರಿಂದ ನರಕಭಾಗಿಗಳಾಗುವದಿಲ್ಲವೋ ಅಂಥ ಉಪಾಯವನ್ನು ತಿಳಿಸಿರಿ || ೨ || ಪೂಜ್ಯರೇ, ಅಲ್ಪದಾನದಿಂದಾಗಲೀ, ಇತರ ಉಪಾಯದಿಂದಾಗಲೀ ಅನಾಯಾಸವಾಗಿ ಮನುಷ್ಯರು ಪಾಪಗಳನ್ನು ಕಳೆದುಕೊಳ್ಳುವ ಮಾರ್ಗವನ್ನು ತಿಳಿಸಿರಿ || ೩ || ಆಗ ಪುಲಸ್ತ್ಯರು ಹೇಳುತ್ತಾರೆ - ಭಲೆ, ಮಹಾಭಾಗ ದಾಲ್ಭ್ಯ ಋಷಿಗಳೇ ಭಲೆ, ಬಹಳ ಗುಹ್ಯ ಪ್ರಮೇಯವನ್ನು ಕುರಿತು ಪ್ರಶ್ನಿಸಿರುವಿರಿ. ಬ್ರಹ್ಮ, ವಿಷ್ಣು, ಇಂದ್ರ ದೇವತೆಗಳಿಂದ ಇದುವರೆಗೆ ಯಾರಿಗೂ ತಿಳಿಸಲ್ಪಟ್ಟಿರದ || ೪ || ವಿಷಯುವನ್ನು ಇಂದು ನಿಮ್ಮ ಪ್ರಶ್ನೆಗೆ ಉತ್ತರವಾಗಿ ತಿಳಿಸುವೆನು. ಹೇ ದ್ವಿಜೋತ್ತಮಾ - ಮಾಘಮಾಸದ ಪ್ರಾರಂಭದಿನದಿಂದಲೇ ಮನುಷ್ಯನು ಜಿತೇಂದ್ರಿಯನಾಗಿದ್ದು ನಿತ್ಯ ಪ್ರಾತಃ ಸ್ನಾನವನ್ನು ಮಾಡಿ ಶುದ್ಧನಾಗಿರಬೇಕು. || ೫ || ಕಾಮ, ಕ್ರೋಧ, ಅಭಿಮಾನ, ಈರ್ಷ್ಯಾ, ಲೋಭ,

ಕಾಮಕ್ರೋಧಾಭಿಮಾನೇರ್ಷ್ಯಾಲೋಭಪೈಶುನ್ಯವರ್ಜಿತಃ |
ದೇವದೇವಂ ಚ ಸಂಸ್ಮೃತ್ಯ ಪಾದೌ ಪ್ರಕ್ಷಾಲ್ಯ ವಾರಿಣಾ || ೬ ||

ಭೂಮಾವಪತಿತಂ ಗ್ರಾಹ್ಯಂ ಗೋಮಯಂ ತತ್ರ ಮಾನವೈಃ |
ತಿಲಾನ್ ಪ್ರಕ್ಷಿಪ್ಯ ಕಾರ್ಪಾಸಂ ಪಿಂಡಕಾಂಶ್ಚೈವ ಕಾರಯೇತ್ || ೭ ||

ಅಷ್ಟೋತ್ತರಶತಂ ಚೈವ ನಾತ್ರ ಕಾರ್ಯಾ ವಿಚಾರಣಾ |
ತತೋ ಮಾಘೇ ಚ ಸಂಪ್ರಾಪ್ತೇ ಹ್ಯಾಷಾಢರ್ಕ್ಷಂ ಭವೇದ್ಯದಿ || ೮ ||

ಮೂಲೇ ವಾ ಕೃಷ್ಣಪಕ್ಷಸ್ಯೈಕಾದಶ್ಯಾಂ ನಿಯಮಂ ತತಃ |
ಗೃಹ್ಣೀಯಾತ್ ಪುಣ್ಯಫಲದಂ ವಿಧಾನಂ ತತ್ರ ಮೇ ಶ್ರುಣು || ೯ ||

ದೇವದೇವಂ ಸಮಭ್ಯರ್ಚ್ಯ ಸುಸ್ನಾತಃ ಪ್ರಯತಃ ಶುಚಿಃ |
ಕೃಷ್ಣನಾಮಾನಿ ಸಂಕೀರ್ತ್ಯ ಏಕಾದಶ್ಯಾಮುಪೋಷಿತಃ || ೧೦ ||

ರಾತ್ರೌ ಜಾಗರಣಂ ಕುರ್ಯಾದ್ರಾತ್ರೌ ಹೋಮಂ ಚ ಕಾರಯೇತ್ |
ಅರ್ಚಯೇದ್ದೇವದೇವೇಶಂ ಶಂಖಚಕ್ರಗದಾಧರಮ್ || ೧೧ ||

ಚಂದನಾಗರುಕರ್ಪೂರೈಃ ನೈವೇದ್ಯೈಃ ಶರ್ಕರಾದಿಭಿಃ |
ಸಂಸ್ಮೃತ್ಯ ನಾಮ್ನಾ ಚ ತತಃ ಕೃಷ್ಣಾಖ್ಯೇನ ಪುನಃ ಪುನಃ || ೧೨ ||

---

ಮೊದಲಾದವುಗಳನ್ನು ತ್ಯಜಿಸಿದವನಾಗಿ, ಚಾಡಿ ಹೇಳುವದು, ದುಷ್ಟತನ, ಮೋಸಗೊಳಿಸುವದು ಮುಂತಾದವುಗಳನ್ನು ಮಾಡದೇ ತನ್ನ ಕೈಕಾಲುಗಳನ್ನು ತೊಳೆದುಕೊಂಡು ದೇವದೇವೋತ್ತಮನಾದ ಶ್ರೀಹರಿಯನ್ನು ಸ್ಮರಿಸಬೇಕು || ೬ || ದಾರಿಯ ಮೇಲೆ ಬಿದ್ದಿರದ (ಆಕಳ ಮನೆಯಲ್ಲಿದ್ದ) ಗೋಮಯವನ್ನು ತೆಗೆದುಕೊಂಡು ಬಂದು ಆದರಲ್ಲಿ ತಿಲಗಳನ್ನು ಮತ್ತು ಹತ್ತಿಯನ್ನು ಹಾಕಿ ಕಲಿಸಿ ಚಿಕ್ಕ ಚಿಕ್ಕ ೧೦೮ ಪಿಂಡಗಳನ್ನು ತಯಾರಿಸಬೇಕು ||೭|| ಅನಂತರ ಮಾಘ ಮಾಸದಲ್ಲಿ ಪೂರ್ವಾಷಾಢಾ ನಕ್ಷತ್ರವಿದ್ದ ದಿನವಾಗಲೀ || ೮ || ಮೂಲಾ ನಕ್ಷತ್ರವಿದ್ದ ದಿನವಾಗಲೀ ಮಾಘ ಕೃಷ್ಣ ಏಕಾದಶೀ ದಿನವು ಬರಲಾಗಿ ಅಂದಿನ ದಿನ ವ್ರತದ ನಿಯಮವನ್ನು ಸ್ವೀಕಾರ ಮಾಡಬೇಕು. ಆ ವ್ರತದ ಫಲಪ್ರದವಾದ ವಿಧಾನವನ್ನು ತಿಳಿಸುವೆನು ಕೇಳಿರಿ. || ೯ || ಆ ದಿನ ಸ್ನಾನಮಾಡಿ ಶುಚಿರ್ಭೂತನಾಗಿ ದೇವದೇವೋತ್ತಮನಾದ ಶ್ರೀಹರಿಯನ್ನು ಭಕ್ತಿಯಿಂದ ಪೂಜಿಸಿ ಶ್ರೀಕೃಷ್ಣನ ನಾಮಗಳನ್ನು ಪಠಿಸಬೇಕು. ಏಕಾದಶಿಯ ದಿನ ಉಪವಾಸದಿಂದ ಇದ್ದು || ೧೦ || ರಾತ್ರಿ ಜಾಗರಣೆಯನ್ನು ಮತ್ತು ಹೋಮವನ್ನು ಮಾಡಬೇಕು. ಶಂಖ ಚಕ್ರ ಗದಾಧಾರಿಯಾದ ದೇವೇಶನನ್ನು ಪೂಜಿಸಬೇಕು || ೧೧ || ಚಂದನ, ಆಗರು, ಕರ್ಪೂರಗಳಿಂದ ಪೂಜಿಸಿ, ಮತ್ತು ಶರ್ಕರಾದಿಗಳನ್ನು ನಿವೇದಿಸಿ ಶ್ರೀಕೃಷ್ಣನನ್ನು ಪುನಃ ಪುನಃ ಭಕ್ತಿಯಿಂದ ಸ್ಮರಿಸಬೇಕು || ೧೨ || ಸಂಡಿಗೆ ಕುಂಬಳಕಾಯಿ, ತೆಂಗಿನಕಾಯಿ

**ಕೂಷ್ಮಾಂಡೈರ್ನಾರಿಕೇಲೈಶ್ಚ ಹ್ಯಥವಾ ಬೀಜಪೂರಕೈಃ |**
**ಸರ್ವಾಭಾವೇSಪಿ ವಿಪ್ರೇಂದ್ರ ಶಸ್ತಂ ಪೂಗೀಫಲಂ ತದಾ || ೧೩ ||**

**ಅರ್ಘ್ಯಂ ದತ್ವಾ ವಿಧಾನೇನ ಪೂಜಯಿತ್ವಾ ಜನಾರ್ದನಮ್ |**
**ಕೃಷ್ಣ ಕೃಷ್ಣ ಕೃಪಾಲುಸ್ತ್ವಮಗತೀನಾಂ ಗತಿಪ್ರದ || ೧೪ ||**

**ಸಂಸಾರಾರ್ಣವಮಗ್ನಾನಾಂ ಪ್ರಸೀದ ಪರಮೇಶ್ವರ |**
**ನಮಸ್ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ || ೧೫ ||**

**ಸುಬ್ರಹ್ಮಣ್ಯ ನಮಸ್ತೇSಸ್ತು ಮಹಾಪುರುಷಪೂರ್ವಜ |**
**ಗೃಹಾಣಾರ್ಘ್ಯಂ ಮಯಾ ದತ್ತಂ ಲಕ್ಷ್ಮ್ಯಾ ಸಹ ಜಗತ್ಪತೇ || ೧೬ ||**

**ತತಸ್ತು ಪೂಜಯೇದ್ವಿಪ್ರಮುದಕುಂಭಂ ಪ್ರದಾಪಯೇತ್ |**
**ಛತ್ರೋಪಾನಹವಸ್ತ್ರೈಶ್ಚ ಕೃಷ್ಣೋ ಮೇ ಪ್ರೀಯತಾಮಿತಿ || ೧೭ ||**

**ಕೃಷ್ಣಾ ಧೇನುಃ ಪ್ರದಾತವ್ಯಾ ಯಥಾಶಕ್ತ್ಯಾ ದ್ವಿಜೋತ್ತಮ |**
**ತಿಲಪಾತ್ರಂ ದ್ವಿಜಶ್ರೇಷ್ಠ ದದ್ಯಾತ್ತತ್ರ ವಿಚಕ್ಷಣಃ || ೧೮ ||**

**ಸ್ನಾನಪ್ರಾಶನಯೋಃ ಶಸ್ತಾಃ ಶ್ವೇತಾಃ ಕೃಷ್ಣಾಸ್ತಿಲಾ ಮುನೇ |**
**ತಾನ್ ಪ್ರದದ್ಯಾತ್ ಪ್ರಯತ್ನೇನ ಯಥಾಶಕ್ತ್ಯಾ ದ್ವಿಜೋತ್ತಮ || ೧೯ ||**

---

ಅಥವಾ ಮಾದಾಳದ ಫಲಗಳನ್ನು ಸಮರ್ಪಿಸಬೇಕು. ಹೇ ವಿಪ್ರೇಂದ್ರಾ ಇದಾವುದೂ ಲಭ್ಯವಾಗದಿದ್ದರೆ ಅಡಿಕೆಬೆಟ್ಟಗಳನ್ನೇ ಸಮರ್ಪಿಸಬಹುದು. || ೧೩ || ವಿಧಿಪೂರ್ವಕ ಜನಾರ್ದನನನ್ನು ಭಕ್ತಿಯಿಂದ ಪೂಜಿಸಿ ಅನಂತರ ಅವನಿಗೆ ಅರ್ಘ್ಯವನ್ನು ಕೊಡಬೇಕು. ಹೇ ಕೃಷ್ಣ ಕೃಷ್ಣ, ನೀನು ನಿರ್ಗತಿಕರಿಗೆ ಗತಿಪ್ರದನಾಗಿರುವಿ. ನೀನು ಪರಮದಯಾಳುವಾಗಿರುವಿ ||೧೪ || ಹೇ ಪರಮೇಶ್ವರಾ ಸಂಸಾರಸಾಗರದಲ್ಲಿ ಬಿದ್ದು ದುಃಖಬಡುತ್ತಿರುವವರ ಮೇಲೆ ಪ್ರಸನ್ನನಾಗು. ಹೇ ಪುಂಡರೀಕಾಕ್ಷ ನಿನಗೆ ನಮಿಸುವೆನು, ಹೇ ವಿಶ್ವಭಾವನಾ, ನಿನಗೆ ನಮಸ್ಕಾರವು || ೧೫ || ಹೇ ಸುಬ್ರಹ್ಮಣ್ಯ, ಮಹಾಪುರುಷನೇ, ಸನಾತನನೇ ನಿನಗೆ ನಮಿಸುತ್ತೇನೆ, ಹೇ ಜಗತ್ಪತೇ, ನಾನು ಕೊಡುತ್ತಿರುವ ಅರ್ಘ್ಯವನ್ನು ಲಕ್ಷ್ಮೀಸಹಿತನಾಗಿ ಸ್ವೀಕರಿಸುವವನಾಗು || ೧೬ || ಹೀಗೆ ರಾತ್ರಿಯಲ್ಲಿ ಶ್ರೀಹರಿಯನ್ನು ಪೂಜಿಸಿ ಅನಂತರ ಬ್ರಾಹ್ಮಣರ ಪೂಜೆಯನ್ನು ಮಾಡಬೇಕು. ಶ್ರೀಕೃಷ್ಣನು ನನ್ನಲ್ಲಿ ಪ್ರಸನ್ನನಾಗಲಿ ಎಂದು ಪ್ರಾರ್ಥಿಸಿ ಬ್ರಾಹ್ಮಣರಿಗೆ ಉದಕುಂಭದಾನವನ್ನು ಮತ್ತು ಛತ್ರ, ಕಾಲ್ಮರಿ (ಪಾದರಕ್ಷೆ), ವಸ್ತ್ರಗಳನ್ನು ಕೊಟ್ಟು ಪೂಜಿಸಬೇಕು || ೧೭ || ಹೇ ಮುನಿಶ್ರೇಷ್ಠನೇ, ವ್ರತ ಮಾಡುವವನು ತನ್ನ ಶಕ್ತ್ಯನುಸಾರ ಕಪ್ಪು ಆಕಳನ್ನು ದಾನವಾಗಿ ಕೊಡಬೇಕು. ಯೋಗ್ಯನಾದ ಬ್ರಾಹ್ಮಣನಿಗೆ ಪಾತ್ರೆಯಲ್ಲಿ ತಿಲವನ್ನು ಹಾಕಿ ತುಂಬಿ ದಾನಮಾಡಬೇಕು. || ೧೮ || ಹೇ ಮುನಿವರ, ಸ್ನಾನ

ತಿಲಪ್ರರೋಹಜಾಃ ಕ್ಷೇತ್ರೇ ಯಾವತ್ಸಂಖ್ಯಾಸ್ತಿಲಾ ದ್ವಿಜ |
ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ || ೨೦ ||

ತಿಲಸ್ನಾಯೀ ತಿಲೋದ್ವರ್ತೀ ತಿಲಹೋಮೀ ತಿಲೋದಕೀ |
ತಿಲಭುಕ್ ತಿಲದಾತಾ ಚ ಷಟ್ ತಿಲಾ ಪಾಪನಾಶಕಾಃ || ೨೧ ||

( || ಇಯಮೇವ ಷಟ್ ತಿಲಾಖ್ಯಾ ||)

ನಾರದ ಉವಾಚ -

ಕೃಷ್ಣ ಕೃಷ್ಣ ಮಹಾಬಾಹೋ ನಮಸ್ತೇ ಭಕ್ತಭಾವನ |
ಷಟ್ ತಿಲೈಕಾದಶೀಭೂತಂ ಕೀದೃಶಂ ಫಲಮಶ್ನುತೇ || ೨೨ ||

ಸೋಪಾಖ್ಯಾನಂ ಮಮ ಬ್ರೂಹಿ ಯದಿ ತುಷ್ಟೋ ऽಸಿ ಯಾದವ |

ಶ್ರೀ ಕೃಷ್ಣ ಉವಾಚ -

ಶೃಣು ಬ್ರಹ್ಮನ್ ಯಥಾವೃತ್ತಂ ದೃಷ್ಟಂ ತತ್ ಕಥಯಾಮಿ ತೇ || ೨೩ ||

ಮೃತ್ಯುಲೋಕೇ ಪುರಾ ಹ್ಯಾಸೀದ್ ಬ್ರಾಹ್ಮಣ್ಯೇಕಾ ಚ ನಾರದ |
ಬ್ರಹ್ಮಚರ್ಯರತಾ ನಿತ್ಯಂ ದೇವಪೂಜಾರತಾ ಸದಾ || ೨೪ ||

---

ಮಾಡಲು (ತಿಲಸ್ನಾನ) ಮತ್ತು ಸೇವಿಸಲು (ತಿಲಭಕ್ಷಣ) ಬಿಳಿ ಎಳ್ಳು ಪ್ರಶಸ್ತವೆಂದೂ, ದಾನ ತರ್ಪಣಾದಿಗಳಿಗೆ ಕರೀ ಎಳ್ಳು ಪ್ರಶಸ್ತವೆಂದೂ ತಿಳಿಯಲ್ಪಟ್ಟಿದೆ. ಆದ್ದರಿಂದ ಶಕ್ತ್ಯನುಸಾರ ಕರೀಎಳ್ಳನ್ನು ದಾನವಾಗಿ ಕೊಡಬೇಕು || ೧೯ || ಎಳ್ಳನ್ನು ಹೊಲಗಳಲ್ಲಿ ಬಿತ್ತಿ ಬೆಳೆಸಬೇಕು. ಈ ರೀತಿ ಮಾಡುವವನಿಗೆ, ಬೆಳೆದ ಎಳ್ಳಿನ ಗಿಡಗಳಲ್ಲಿರುವ ಎಳ್ಳಿನ ಸಂಖ್ಯೆಯ ಸಹಸ್ರವರ್ಷಗಳ ವರೆಗೆ ಸ್ವರ್ಗಲೋಕ ವಾಸವು ಪ್ರಾಪ್ತವಾಗುವದು. || ೨೦ || ತಿಲಸ್ನಾನ ಮಾಡಬೇಕು. ತಿಲವನ್ನು ಮೈಗೆ ಹಚ್ಚಿಕೊಂಡು ಶಿರಃ ಸ್ನಾನ ಮಾಡಬೇಕು. ತಿಲದಿಂದ ಹೋಮ ಮಾಡಬೇಕು. ತಿಲಸಹಿತ ಜಲತರ್ಪಣ ಕೊಡಬೇಕು. ತಿಲ ಭಕ್ಷಣ ಮಾಡಬೇಕು. ಮತ್ತು ತಿಲದಾನ ಮಾಡಬೇಕು. ಈ ಪ್ರಕಾರ ತಿಲಸಹಿತ ಮಾಡಲ್ಪಡುವ ಆರು ಕಾರ್ಯಗಳು ಪಾಪನಾಶಕವಾಗಿವೆ. || ೨೧ || ಇದೇ ಷಟ್ ತಿಲಾಖ್ಯಾ ಎಂದು ಪ್ರಸಿದ್ಧವಾಗಿದೆ. ಆಗ ನಾರದರು ಶ್ರೀ ಕೃಷ್ಣನನ್ನು ಕುರಿತು ಹೇ ಶ್ರೀಕೃಷ್ಣ, ಮಹಾಬಾಹೋ, ಭಕ್ತವತ್ಸಲಾ, ನಿನಗೆ ನಮಸ್ಕಾರವು. ನೀನು ನನ್ನ ಮೇಲೆ ಸಂತುಷ್ಟನಾಗಿದ್ದರೆ ಷಟ್ ತಿಲೈಕಾದಶೀ ವ್ರತದ ಉಪಾಖ್ಯಾನವನ್ನು ಮತ್ತು ವ್ರತದ ಫಲವನ್ನು ನನಗೆ ತಿಳಿಸಿ ಅನುಗ್ರಹಿಸು || ೨೨ || ಎಂದು ಪ್ರಾರ್ಥಿಸಲು ಶ್ರೀ ಕೃಷ್ಣನು ಹೇಳುತ್ತಾನೆ ಹೇ ದೇವರ್ಷಿ ನಾರದಾ, ಈ ವಿಷಯದಲ್ಲಿ ನಾನು ಪ್ರತ್ಯಕ್ಷ ಕಂಡಿರುವ ವಿಷಯವನ್ನು ನಿನಗೆ ತಿಳಿಸುವೆನು ಕೇಳು || ೨೩ || ಹಿಂದಕ್ಕೆ ಮರ್ತ್ಯಲೋಕದಲ್ಲಿ ನಿತ್ಯವೂ ಬ್ರಹ್ಮಚರ್ಯವ್ರತದಲ್ಲಿದ್ದ ಮತ್ತು ದೇವಪೂಜಾದಿಗಳಲ್ಲಿ ಆಸಕ್ತಳಾದ ಒಬ್ಬ ಬ್ರಾಹ್ಮಣ

ಮಾಸೋಪವಾಸನಿರತಾ ಮಮ ಭಕ್ತಾ ಚ ಸರ್ವದಾ |
ಕೃಷ್ಣೋಪವಾಸಸಂಯುಕ್ತಾ ಮಮ ಪೂಜಾಪರಾಯಣಾ || ೨೫ ||

ಶರೀರಂ ಕ್ಲೇಶಿತಂ ನಿತ್ಯಮುಪವಾಸೈರ್ದ್ವಿಜೋತ್ತಮ |
ದೀನಾನಾಂ ಬ್ರಾಹ್ಮಣಾನಾಂ ಚ ಕುಮಾರೀಣಾಂ ಚ ಭಕ್ತಿತಃ || ೨೬ ||

ಗೃಹಾದಿಕಂ ಪ್ರಯಚ್ಛಂತೀ ಸರ್ವಕಾಲಂ ಮಹಾಮತಿಃ |
ಅತಿಕೃಚ್ಛ್ರರತಾ ಸಾ ತು ಸರ್ವಕಾಲೇಷು ವೈ ದ್ವಿಜ || ೨೭ ||

ಬ್ರಾಹ್ಮಣಾ ನಾನ್ನದಾನೇನ ತರ್ಪಿತಾ ದೇವತಾ ನ ಚ |
ತತಃ ಕಾಲೇನ ಮಹತಾ ಮಯಾ ವೈ ಚಿಂತಿತಂ ದ್ವಿಜ || ೨೮ ||

ಶುದ್ಧಮಸ್ಯಾಃ ಶರೀರಂ ಹಿ ವ್ರತೈಃ ಕೃಚ್ಛ್ರೈರ್ನ ಸಂಶಯಃ |
ಅರ್ಜಿತೋ ವೈಷ್ಣವೋ ಲೋಕಃ ಕಾಯಕ್ಲೇಶೇನ ವೈ ತಯಾ || ೨೯ ||

ನ ದತ್ತಮನ್ನದಾನಂ ಹಿ ಯೇನ ತೃಪ್ತಿಃ ಪರಾ ಭವೇತ್ |
ಏತಜ್ಜಿಜ್ಞಾಸಯಾ ಬ್ರಹ್ಮನ್ ಮೃತ್ಯುಲೋಕಮುಪಾಗತಃ || ೩೦ ||

ಕಾಪಾಲಂ ರೂಪಮಾಸ್ಥಾಯ ಭಿಕ್ಷಾಪಾತ್ರೇಣ ಯಾಚಿತಾ |

ಸ್ತ್ರೀ ಇದ್ದಳು.|| ೨೪ || ಮಾಸೋಪವಾಸಗಳನ್ನು ತಪ್ಪದೇ ಆಚರಿಸುತ್ತಿದ್ದ ಅವಳು ಸದಾ ನನ್ನಲ್ಲಿ ಭಕ್ತಿ ಮಾಡುತ್ತಿದ್ದಳು. ಶ್ರೀ ಕೃಷ್ಣನನ್ನು ಉದ್ದೇಶಿಸಿ ಉಪವಾಸ ಮಾಡುತ್ತಿದ್ದಳು. ನನ್ನ ಪೂಜಾದಲ್ಲೇ ಪರಾಯಣಳಾಗಿದ್ದಳು. || ೨೫ || ಹೇ ದ್ವಿಜೋತ್ತಮಾ, ಹೀಗೆ ಮಾಡುತ್ತಿರುವಉಪವಾಸಾದಿಗಳಿಂದ ಅವಳ ಶರೀರವು ಕೃಶವಾಗಿದ್ದಿತು. ದೀನರಿಗೆ, ಬ್ರಾಹ್ಮಣರಿಗೆ, ಕುಮಾರಿಯರಿಗೆ ಅವಳು ಆದರ ಶ್ರದ್ಧೆಗಳಿಂದ || ೨೬ || ಮನೆ ಮುಂತಾದವುಗಳನ್ನು ಕೊಡುತ್ತಿದ್ದಳು. ಕೃಚ್ಛ್ರವ್ರತಾದಿಗಳಿಂದ ಅವಳು ಇನ್ನಷ್ಟು ಕೃಶಳಾದಳು. ||೨೭|| ಇಷ್ಟೆಲ್ಲ ಮಾಡುತ್ತಲಿದ್ದ ಅವಳು ಒಮ್ಮೆಯೂ ಬ್ರಾಹ್ಮಣರನ್ನು ಹಾಗೂ ದೇವತೆಗಳನ್ನು ಅನ್ನದಾನದಿಂದ ತೃಪ್ತಿಬಡಿಸಲಿಲ್ಲ. ಬಹುಕಾಲ ಹೀಗೆ ಗತಿಸಲು ನಾನು ಒಮ್ಮೆ ವಿಚಾರಿಸಿದೆನು. ಏನೆಂದರೆ || ೨೮ || ಕೃಚ್ಛ್ರ ಮೊದಲಾದ ವ್ರತಗಳಿಂದ ಇವಳ ದೇಹವಂತೂ ನಿಶ್ಚಯವಾಗಿ ಪವಿತ್ರವಾಗಿದೆ. ಕಾಯಕ್ಲೇಶದಿಂದ ಇವಳು ಈಗಾಗಲೇ ವಿಷ್ಣುಲೋಕದಲ್ಲಿ ಸ್ಥಾನವನ್ನು ಭದ್ರಪಡಿಸಿಕೊಂಡಿದ್ದಾಳೆ. || ೨೯ || ಆದರೆ ಪೂರ್ಣ ತೃಪ್ತಿಗೆ ಕಾರಣವಾದ ಅನ್ನದಾನವನ್ನು ಇವಳು ಇದುವರೆಗೂ ಮಾಡಲಿಲ್ಲ. ಅವಳನ್ನು ಪರೀಕ್ಷಿಸಿ ಎಲ್ಲವನ್ನೂ ತಿಳಿದುಕೊಳ್ಳಬೇಕೆಂಬ ವಿಚಾರದಿಂದ ನಾನು ಭೂಲೋಕಕ್ಕೆ ಬಂದು ಅವಳಿದ್ದಲ್ಲಿ ಹೋದೆನು ||೩೦|| ಸನ್ಯಾಸಿಯ ವೇಷವನ್ನು ಧರಿಸಿ ಕೈಯಲ್ಲಿ ಭಿಕ್ಷಾ ಪಾತ್ರೆಯನ್ನು ಹಿಡಿದುಕೊಂಡು

ಬ್ರಾಹ್ಮಣ್ಯುವಾಚ -

ಕಸ್ಮಾತ್ತ್ವಮಾಗತೋ ಬ್ರಹ್ಮನ್ ವದ ಸತ್ಯಂ ಮಮಾಗ್ರತಃ || ೩೧ ||

ಪುನರೇವ ಮಯಾ ಪ್ರೋಕ್ತಂ ದೇಹಿ ಭಿಕ್ಷಾಂ ಚ ಸುಂದರಿ |
ತಯಾ ಕೋಪೇನ ಮಹತಾ ಮೃತ್ಪಿಂಡಸ್ತಾಮ್ರಭಾಜನೇ || ೩೨ ||

ಕ್ಷಿಪ್ತೋ ಯಾವತ್ತಯಾ ದೇವ್ಯಾ ಪುನಃ ಸ್ವರ್ಗಂ ಗತೋ ದ್ವಿಜ |
ತತಃ ಕಾಲೇನ ಮಹತಾ ತಾಪಸೀ ಸುಮಹಾವ್ರತಾ || ೩೩ ||

ಸದೇಹಾ ಸ್ವರ್ಗಮಾಯಾತಾ ವ್ರತಚರ್ಯಾಪ್ರಭಾವತಃ |
ಮೃತ್ಪಿಂಡಸ್ಯ ಪ್ರಭಾವೇಣ ಗೃಹಂ ಪ್ರಾಪ್ತಂ ಮನೋಹರಮ್ || ೩೪ ||

ಪರಂ ತಚ್ಚೈವ ವಿಪ್ರರ್ಷೇ ಧಾನ್ಯಕೋಶಾದಿವರ್ಜಿತಮ್ |
ಗೃಹಂ ಯಾವತ್ಪ್ರವಿಶ್ಯೈಷಾ ನ ಕಿಂಚಿತ್ ತತ್ರ ಪಶ್ಯತಿ || ೩೫ ||

ತಾವದ್ಗೃಹಾದ್ವಿನಿಷ್ಕ್ರಮ್ಯ ಮಮಾಂತೇ ಚಾಗತಾ ದ್ವಿಜ |
ಕ್ರೋಧೇನ ಮಹತಾವಿಷ್ಟಾ ತ್ವಿದಂ ವಚನಮಬ್ರವೀತ್ || ೩೬ ||

ಮಯಾ ವ್ರತೈಶ್ಚ ಕೃಚ್ಛ್ರೈಶ್ಚ ಉಪವಾಸೈರನೇಕಶಃ |
ಪೂಜಯಾಽಽ ರಾಧಿತೋ ದೇವಃ ಸರ್ವಲೋಕಸ್ಯ ಭಾವನಃ || ೩೭ ||

ಅವಳಲ್ಲಿ ಭಿಕ್ಷೆಗಾಗಿ ಪ್ರಾರ್ಥಿಸಿದಾಗ ಆ ಬ್ರಾಹ್ಮಣಸ್ತ್ರೀಯು ಹೇಳಿದಳು ಭೋ ಬ್ರಹ್ಮನ್, ನೀನು ಎಲ್ಲಿಂದ ಬಂದಿರುವಿ ಎಂಬುದನ್ನು ನನ್ನೆದುರು ಸತ್ಯವಾಗಿ ಹೇಳುವವನಾಗು || ೩೧|| ಅವಳ ಮಾತಿಗೆ ಉತ್ತರಿಸದೇ ನಾನು ಮತ್ತೆ "ಹೇ ಸುಂದರಿ, ಭಿಕ್ಷೆಯನ್ನು ನೀಡು" - ಎಂದು ಕೇಳಲು ಅವಳು ಅತಿ ಕೋಪದಿಂದ ನನ್ನ ತಾಮ್ರದ ಭಿಕ್ಷಾಪಾತ್ರೆಯಲ್ಲಿ ಒಂದು ಮಣ್ಣಿನ ಪಿಂಡವನ್ನು ಎಸೆದಳು. || ೩೨ || ಆ ಕೂಡಲೇ ನಾನು ಅಲ್ಲಿಂದ ಹೊರಟು ಸ್ವರ್ಗಲೋಕಕ್ಕೆ ಬಂದೆನು. ಮುಂದೆ ಬಹುಕಾಲದ ನಂತರ ಆ ಮಹಾವ್ರತೆಯಾದ ತಾಪಸಿಯು ||೩೩|| ಕಾಲವಶಳಾಗಿ ಅದುವರೆಗೆ ಆಚರಿಸಿದ್ದ ವಿವಿಧ ವ್ರತಗಳ ಪ್ರಭಾವದಿಂದ ಮನುಷ್ಯದೇಹದಿಂದಲೇ ಸ್ವರ್ಗಲೋಕವನ್ನು ಸೇರಿದಳು. ನನಗೆ ಕೊಟ್ಟ ಮೃತ್ಪಿಂಡದಾನದ ಪ್ರಭಾವದಿಂದ ಅವಳು ಸ್ವರ್ಗಲೋಕದಲ್ಲಿ ಮನೋಹರವಾದ ಮನೆಯನ್ನು ಪಡೆದಳು. ||೩೪|| ಆದರೆ ಹೇ ನಾರದಾ, ಧಾನ್ಯಕೋಶಾದಿಗಳಿಲ್ಲದ ಮನೆಯನ್ನು ಪ್ರವೇಶಿಸಿದ ಆ ಸ್ತ್ರೀಯು ಅಲ್ಲಿ ಏನನ್ನೂ ಕಾಣದೇ || ೩೫ || ಕೂಡಲೇ ಆ ಮನೆಯಿಂದ ಹೊರಹೊರಟು ನಾನಿರುವಲ್ಲಿ ಬಂದಳು ಮತ್ತು ಬಹು ಕೋಪಾವಿಷ್ಟಳಾಗಿ ನನ್ನನ್ನು ಕುರಿತು ಹೀಗೆ ಹೇಳಿದಳು ||೩೬|| ನಾನು ಅನೇಕ ಸಲ ಕೃಚ್ಛ್ರ ಮೊದಲಾದ ವ್ರತಗಳನ್ನು ಆಚರಿಸಿ, ಉಪವಾಸದಿಂದ ಇದ್ದು ಸರ್ವಲೋಕಾಧಿಪತಿಯಾದ ಶ್ರೀಹರಿಯನ್ನು ಪೂಜಿಸಿ ಆರಾಧಿಸಿದ್ದೇನೆ. || ೩೭ || ಹೀಗಿದ್ದರೂ

ನ ತತ್ರ ದೃಶ್ಯತೇ ಕಿಂಚಿತ್ ಗೃಹೇ ಮಮ ಜನಾರ್ದನ |
ತತಶ್ಚೋಕ್ತಾ ಮಯಾ ಸಾ ತು ಗೃಹೇ ಗಚ್ಛ ಯಥಾಗತಮ್ || ೩೮ ||

ಆಗಮಿಷ್ಯಂತಿ ಸುತರಾಂ ಕೌತೂಹಲಸಮನ್ವಿತಾಃ |
ದೇವಪತ್ನ್ಯಸ್ತು ತ್ವಾಂ ದ್ರಷ್ಟುಂ ವಿಸ್ಮಯೇನ ಸಮನ್ವಿತಾಃ || ೩೯ ||

ದ್ವಾರಂ ನೋದ್ಘಾಟನೀಯಂ ಹಿ ಷಟ್‌ತಿಲಾ ಪುಣ್ಯವಾಚನಾತ್ |
ಏವಂ ಶ್ರುತ್ವಾ ಗತಾ ಸಾ ತು ಯದಾ ವೈ ಮಾನುಷೀ ತದಾ || ೪೦ ||

ಅತ್ರಾಂತರೇ ಸಮಾಯಾತಾ ದೇವಪತ್ನ್ಯಶ್ಚ ನಾರದ |
ತಾಭಿಶ್ಚ ಕಥಿತಂ ತತ್ರ ತ್ವಾಂ ದ್ರಷ್ಟುಂ ಹಿ ಸಮಾಗತಾಃ || ೪೧ ||

ದ್ವಾರಮುದ್ಘಾಟಯ ತ್ವಂ ಚ ಪಶ್ಯಾಮಸ್ತ್ವಾಂ ಶುಭಾನನೇ |

ಮಾನುಷ್ಯುವಾಚ -

ಯದಿ ದ್ರಷ್ಟುಂ ಸಮಾಯಾತಾಃ ಸತ್ಯಂ ವಾಚ್ಯಂ ವಿಶೇಷತಃ || ೪೨ ||

ಷಟ್‌ತಿಲಾಯಾ ವ್ರತಂ ಪುಣ್ಯಂ ದ್ವಾರೋದ್ಘಾಟನಕಾರಣಾತ್ |
ಏಕಾಪಿ ತತ್ರ ನಾವೋಚತ್ ಷಟ್‌ತಿಲಾವ್ರತನಾಮತಃ || ೪೩ ||

ಅನ್ಯಯಾ ಕಥಿತಂ ತತ್ರ ದ್ರಷ್ಟವ್ಯಾ ಮಾನುಷೀ ಮಯಾ |
ತತೋ ದ್ವಾರಂ ಸಮುದ್ಘಾಟ್ಯ ದೃಷ್ಟ್ವಾ ತಾಭಿಶ್ಚ ಮಾನುಷೀ || ೪೪ ||

---

ಹೇ ಜನಾರ್ದನಾ, ಸ್ವರ್ಗಲೋಕದಲ್ಲಿ ನನಗಾಗಿ ಕೊಡಲ್ಪಟ್ಟಿರುವ ಈ ಮನೆಯಲ್ಲಿ ಒಂದು ಪದಾರ್ಥವೂ ಇಲ್ಲವಲ್ಲ ? ಆಗ ನಾನು ಅವಳನ್ನು ಕುರಿತು - "ಹೇ ದೇವಿ, ನೀನು ತಿರುಗಿ ಮನೆಗೆ ಹೋಗುವವಳಾಗು || ೩೮ || ನಿನ್ನನ್ನು ಕಾಣಲು ಕುತೂಹಲ ಭರಿತರಾದ ದೇವಪತ್ನಿಯರು ಶೀಘ್ರದಲ್ಲೇ ಬರುವರು || ೩೯ || ಆಗ ನೀನು ಅವರಿಂದ ಷಟ್‌ತಿಲಾ ಏಕಾದಶೀ ಮಹಾತ್ಮೆಯನ್ನು ಕೇಳದೇ ಮನೆಯ ದ್ವಾರವನ್ನು ತೆಗೆಯಬೇಡಾ" ಎಂದು ಹೇಳಿದನು. ಇದನ್ನು ಕೇಳಿ ಮನುಷ್ಯ ದೇಹದಲ್ಲಿದ್ದ ಆ ಸ್ತ್ರೀಯು ತಿರುಗಿ ತನ್ನ ಮನೆಗೆ ಹೊರಟು ಹೋದಳು || ೪೦ || ಅಷ್ಟರಲ್ಲಿ ದೇವಪತ್ನಿಯರು ಅವಳ ಮನೆಗೆ ಬಂದು || ಹೇ ಶುಭಾನನೇ, ನಿನ್ನನ್ನು ಕಾಣಲು ನಾವೆಲ್ಲ ಬಂದಿದ್ದೇವೆ || ೪೧ || ಬಾಗಿಲನ್ನು ತೆರೆ, ನಿನ್ನನ್ನು ನೋಡುವೆವು" ಎಂದು ನುಡಿದರು. ಆಗ ಒಳಗಿದ್ದ ಮನುಷ್ಯ ಸ್ತ್ರೀಯು ಭೋ ದೇವಪತ್ನಿಯರೇ, ನೀವು ನನ್ನನ್ನು ನೋಡಲು ಬಂದಿರುವಿರಾದರೆ || ೪೨ || ಬಾಗಿಲು ತೆರೆಯುವ ಪೂರ್ವದಲ್ಲಿ ಪುಣ್ಯಪ್ರದವಾದ ಷಟ್‌ತಿಲಾವ್ರತದ ಕಥೆಯನ್ನು ತಿಳಿಸುವವರಾಗಿರಿ ಎಂದೆನಲು ಅವರಲ್ಲಿ ಒಬ್ಬರೂ ಆ ಬಗ್ಗೆ ಹೇಳಲು ಸಮರ್ಥರಾಗಲಿಲ್ಲ || ೪೩ || ಸ್ವಲ್ಪ ಸಮಯದ ನಂತರ ಒಬ್ಬ ದೇವಕನ್ಯೆಯು ಆ ವ್ರತದ ಮಹಾತ್ಮೆಯನ್ನು ತಿಳಿಸಿ - "ಹೇ ಸ್ತ್ರೀಯೇ, ಇನ್ನು ದ್ವಾರವನ್ನು

ನ ದೇವೀ ನ ಚ ಗಂಧರ್ವೀ ನಾಸುರೀ ನ ಚ ಪನ್ನಗೀ |
ದೃಷ್ಟ್ವಾ ಪೂರ್ವಂ ತಥಾ ನಾರೀ ಯಾದೃಶೀಯಂ ದ್ವಿಜರ್ಷಭ || ೪೫ ||

ದೇವೀನಾಮುಪದೇಶೇನ ಷಟ್‌ತಿಲಾಯಾ ವ್ರತಂ ಕೃತಮ್ |
ಮಾನುಷ್ಯಾ ಸತ್ಯವ್ರತಯಾ ಭುಕ್ತಿಮುಕ್ತಿಫಲಪ್ರದಮ್ || ೪೬ ||

ರೂಪಕಾಂತಿಸಮಾಯುಕ್ತಾ ಕ್ಷಣೇನ ಸಮವಾಪ ಸಾ |
ಧನಂ ಧಾನ್ಯಂ ಚ ವಸ್ತ್ರಾದಿ ಸುವರ್ಣಂ ರೌಪ್ಯಮೇವ ಚ || ೪೭ ||

ಸರ್ವಂ ಗೃಹಂ ಸುಸಂಪನ್ನಂ ಷಟ್‌ತಿಲಾಯಾಃ ಪ್ರಸಾದತಃ |
ಅತಿತೃಷ್ಣಾ ನ ಕರ್ತವ್ಯಾ ವಿತ್ತಶಾಠ್ಯಂ ವಿವರ್ಜಯೇತ್ || ೪೮ ||

ಆತ್ಮವಿತ್ತಾನುಸಾರೇಣ ತಿಲಾನ್ ವಸ್ತ್ರಾದಿ ದಾಪಯೇತ್ |
ಲಭತೇ ಚೈವಮಾರೋಗ್ಯಂ ತತೋ ಜನ್ಮನಿ ಜನ್ಮನಿ || ೪೯ ||

ದಾರಿದ್ರ್ಯಂ ನ ಚ ಕಷ್ಟಂ ವೈ ನ ಚ ದೌರ್ಭಾಗ್ಯಮೇವ ಚ |
ನ ಭವೇದ್ಧೇ ದ್ವಿಜಶ್ರೇಷ್ಠ ಷಟ್‌ತಿಲಾಯಾ ಉಪೋಷಣಾತ್ || ೫೦ ||

ತೆಗೆ. ಮನುಷ್ಯ ಸ್ತ್ರೀಯಾದ ನಿನ್ನನ್ನು ನೋಡಬೇಕಾಗಿದೆ ಎಂದೆನಲು ಒಳಗಿದ್ದ ಸ್ತ್ರೀಯು ಬಾಗಿಲನ್ನು ತೆರೆದಳು. ಆಗ ದೇವಪತ್ನಿಯರೆಲ್ಲ ಮನೆಯೊಳಗೆ ಹೋಗಿ ಆ ಸ್ತ್ರೀಯನ್ನು ನೋಡಿದರು. || ೪೪ || ಇವಳು ದೇವಕನ್ಯೆಯಲ್ಲ, ಗಂಧರ್ವ ಸ್ತ್ರೀಯಲ್ಲ, ಅಸುರ ಸ್ತ್ರೀಯೂ ಅಲ್ಲ, ನಾಗ ಕನ್ಯೆಯೂ ಅಲ್ಲ. ಆ ಮೊದಲು ಕಂಡ ಸ್ತ್ರೀಯರಂತೆಯೇ ಇದ್ದ ಈ ಸ್ತ್ರೀಯನ್ನು ನೋಡಿದರು. || ೪೫ || ಈ ದೇವಪತ್ನಿಯರ ಉಪದೇಶದಂತೆ ಬ್ರಾಹ್ಮಣಿಯು ಷಟ್‌ತಿಲಾವ್ರತವನ್ನು ಆಚರಿಸಿದಳು. ಭುಕ್ತಿ ಮುಕ್ತಿಫಲಪ್ರದವಾದ ವ್ರತವನ್ನು ಶ್ರದ್ಧೆಯಿಂದ ಆಚರಿಸಿದ ಆ ಮಾನುಷಿ ಸ್ತ್ರೀಯು || ೪೬ || ಕ್ಷಣದಲ್ಲೇ ರೂಪಕಾಂತಿಗಳಿಂದ ಶೋಭಿಸತೊಡಗಿದಳು. ಷಟ್‌ತಿಲಾ ವ್ರತದ ಪ್ರಭಾವದಿಂದ ಅವಳ ಮನೆಯು ಧನ, ಧಾನ್ಯ, ವಸ್ತ್ರಾದಿ, ಸುವರ್ಣ, ರಜತ ಮೊದಲಾದವುಗಳಿಂದ || ೪೭ || ತುಂಬಿ ಸಮೃದ್ಧವಾಯಿತು. ಆದ್ದರಿಂದ ಹೇ ನಾರದಾ, ಲೋಭದಿಂದ ಅತ್ಯಾಶೆಯನ್ನು ಮಾಡಬಾರದು. ಮತ್ತು ವಿತ್ತಶಾಠ್ಯವನ್ನೂ ಮಾಡಬಾರದು. || ೪೮ || ತನ್ನಲ್ಲಿರುವ ದ್ರವ್ಯಶಕ್ತಿಯನ್ನು ಅನುಸರಿಸಿ ತಿಲ ಮತ್ತು ವಸ್ತ್ರಾದಿಗಳ ದಾನ ಮಾಡಬೇಕು. ಹೀಗೆ ಮಾಡುವುದರಿಂದ ಜನ್ಮಜನ್ಮಾಂತರಗಳಲ್ಲಿ ಒಳ್ಳೆಯ ಆರೋಗ್ಯವು ಪ್ರಾಪ್ತವಾಗುವದು. || ೪೯ || ಹೇ ನಾರದಾ ಷಟ್‌ತಿಲಾ ವ್ರತದ ದಿನ ಉಪವಾಸ ಮಾಡುವದರಿಂದ, ದಾರಿದ್ರ್ಯ, ಕಷ್ಟ, ದೌರ್ಭಾಗ್ಯವೆಲ್ಲವೂ ದೂರಾಗುವವು. || ೫೦ || ಧರ್ಮರಾಜಾ, ಈ ವ್ರತಾನುಷ್ಠಾನದಿಂದ ತಿಲದಾನಿಯು ನಿಶ್ಚಿತವಾಗಿ ಸಕಲ ಪಾತಕಗಳಿಂದ ಮುಕ್ತನಾಗುವನು || ೫೧ || ಸರಿಯಾಗಿ ವಿಧಿಪೂರ್ವಕ

ಅನೇನ ವಿಧಿನಾ ರಾಜನ್ ತಿಲದಾತಾ ನ ಸಂಶಯಃ |
ಮುಚ್ಯತೇ ಪಾತಕೈಃ ಸರ್ವೈರ್ನಾತ್ರ ಕಾರ್ಯಾ ವಿಚಾರಣಾ || ೫೧ ||

ದಾನಂ ಚ ವಿಧಿನಾ ಸಮ್ಯಕ್ ಸರ್ವಪಾಪಪ್ರಣಾಶನಮ್ |
ನಾನರ್ಥಭೂತೋ ನಾಯಾಸಃ ಶರೀರೇ ಮುನಿಸತ್ತಮ || ೫೨ ||

|| ಇತಿ ಶ್ರೀಭವಿಷ್ಯೋತ್ತರ ಪುರಾಣೇ ಮಾಘ ಕೃಷ್ಣ ಷಟ್‌ತಿಲೈಕಾದಶೀ
ವ್ರತಮಾಹಾತ್ಮ್ಯಂ ಸಂಪೂರ್ಣಮ್ || ೫ ||

---

ಕೊಡಲ್ಪಟ್ಟ ತಿಲದಾನವು ಸಕಲ ಪಾಪಗಳನ್ನು ನಾಶಮಾಡಲು ಸಮರ್ಥವಾಗಿದೆ. ಈ ದಾನದಿಂದ ಯಾವ ಅನರ್ಥಗಳೂ ಉಂಟಾಗಲಾರವು ಹಾಗೂ ಇದು ಅನಾಯಾಸ ಸಾಧ್ಯವಾದ ವ್ರತವಾಗಿದೆ. || ೫೨ ||

|| ಇಲ್ಲಿಗೆ ಶ್ರೀ ಭವಿಷ್ಯೋತ್ತರ ಪುರಾಣದಲ್ಲಿಯ ಮಾಘ ಕೃಷ್ಣಪಕ್ಷದ ಷಟ್‌ತಿಲಾ
ಏಕಾದಶೀವ್ರತ ಮಹಾತ್ಮೆಯು ಸಮಾಪ್ತವಾಯಿತು ||
|| ಶ್ರೀಕೃಷ್ಣಾರ್ಪಣಮಸ್ತು ||

# ಮಾಘಶುಕ್ಲೈಕಾದಶೀ ವ್ರತ ಕಥಾ

ಯುಧಿಷ್ಠಿರ ಉವಾಚ -

ಸಾಧು ಕೃಷ್ಣ ತ್ವಯಾ ಪ್ರೋಕ್ತಾ ಆದಿದೇವ ಜಗತ್ಪತೇ |
ಸ್ವೇದಜಾ ಅಂಡಜಾಶ್ಚೈವ ಉದ್ಭಿಜಾಶ್ಚ ಜರಾಯುಜಾಃ || ೧ ||

ತೇಷಾಂ ಕರ್ತಾ ವಿಕರ್ತಾ ಚ ಪಾಲಕಃ ಕ್ಷಯಕಾರಕಃ |
ಮಾಘಸ್ಯ ಕೃಷ್ಣಪಕ್ಷೇ ತು ಷಟ್‌ತಿಲಾ ಕಥಿತಾ ತ್ವಯಾ || ೨ ||

ಶುಕ್ಲೇ ಚೈಕಾದಶೀ ಯಾ ಚ ಕಥಯಸ್ವ ಪ್ರಸಾದತಃ |
ಕಿಂ ನಾಮಾ ಕೋ ವಿಧಿಸ್ತಸ್ಯಾಃ ಕೋ ದೇವಸ್ತತ್ರ ಪೂಜ್ಯತೇ || ೩ ||

ಕೃಷ್ಣ ಉವಾಚ -

ಕಥಯಿಷ್ಯಾಮಿ ರಾಜೇಂದ್ರ ಶುಕ್ಲೇ ಮಾಘಸ್ಯ ಯಾ ಭವೇತ್ |
ಜಯಾ ನಾಮ್ನೀತಿ ವಿಖ್ಯಾತಾ ಸರ್ವಪಾಪಹರಾ ಪರಾ || ೪ ||

ಪವಿತ್ರಾ ಪಾಪಹಂತ್ರೀ ಚ ಪಿಶಾಚತ್ವವಿನಾಶಿನೀ |
ನೈವ ತಸ್ಯಾ ವ್ರತೇ ಚೀರ್ಣೇ ಪ್ರೇತತ್ವಂ ಜಾಯತೇ ನೃಣಾಮ್ || ೫ ||

---

ಹೇ ಶ್ರೀಕೃಷ್ಣಪರಮಾತ್ಮಾ, ಆದಿದೇವಾ, ಜಗತ್ಪತೇ, ನೀನು ಜಗತ್ತಿನಲ್ಲಿರುವ ಸಕಲ ಸ್ವೇದಜ, ಅಂಡಜ, ಉದ್ಭಿಜ ಮತ್ತು ಜರಾಯುಜ ಪ್ರಾಣಿಗಳ || ೧ || ಸೃಷ್ಟಿ, ಸ್ಥಿತಿ, ಹಾಗೂ ಸಂಹಾರಗಳಿಗೆ ಮೂಲಕಾರಣನಾಗಿರುವಿ. ಹೇ ಪ್ರಭೋ, ಮಾಘಮಾಸದ ಕೃಷ್ಣಪಕ್ಷದಲ್ಲಿ ಬರುವ "ಷಟ್‌ತಿಲಾ" ಏಕಾದಶಿಯ ಮಹಾತ್ಮೆಯನ್ನು ಇದುವರೆಗೆ ತಿಳಿಸಿರುವಿ || ೨ || ಇನ್ನು ಮುಂದೆ ಅನುಗ್ರಹಮಾಡಿ ಮಾಘ ಮಾಸದ ಶುಕ್ಲಪಕ್ಷದ ಏಕಾದಶಿಯ ಬಗ್ಗೆ ತಿಳಿಸಬೇಕು. ಆ ಏಕಾದಶಿಯ ಹೆಸರೇನು ? ಅಂದು ಮಾಡಬೇಕಾದ ವಿಧಿಗಳಾವವು ? ಆ ದಿನ ಯಾವ ದೇವತೆಯು ಪೂಜಿಸಲ್ಪಡಬೇಕು ? ಎಂದು ಯುಧಿಷ್ಠಿರನು ಪ್ರಾರ್ಥಿಸಲು ||೩|| ಶ್ರೀ ಕೃಷ್ಣನು ಹೇಳುತ್ತಾನೆ ಹೇ ರಾಜೇಂದ್ರ, ಮಾಘಮಾಸದ ಶುಕ್ಲ ಏಕಾದಶಿಯ ಕಥೆಯನ್ನು ಹೇಳುವೆನು ಕೇಳು."ಜಯಾ"ಎಂಬ ಹೆಸರಿನಿಂದ ಪ್ರಸಿದ್ಧವಾದ ಆ ಏಕಾದಶಿಯು ಸಕಲ ಪಾಪಗಳನ್ನು ನಾಶಮಾಡುವ ಶ್ರೇಷ್ಠದಿನವಾಗಿದೆ. || ೪ || ಅತ್ಯಂತ ಪವಿತ್ರವೂ, ಪಾಪಗಳನ್ನು ಕಳೆಯುವಂಥದೂ, ಪಿಶಾಚ ಬಾಧೆಯನ್ನು ನಿವಾರಿಸುವಂಥದೂ ಆಗಿದೆ. ಆ ಏಕಾದಶೀ ವ್ರತವನ್ನು ಅನುಷ್ಠಾನ ಮಾಡುವವರಿಗೆ ಎಂದೂ ಪ್ರೇತತ್ವವು ಉಂಟಾಗುವದಿಲ್ಲ. || ೫ || ಪಾಪಗಳನ್ನು ಕಳೆದು ಮೋಕ್ಷವನ್ನು ಕೊಡುವ ಈ ಏಕಾದಶಿಗಿಂತ ಹೆಚ್ಚಿನದಾದ

ನಾತಃ ಪರತರಾ ಕಾಚಿತ್ ಪಾಪಘ್ನೀ ಮೋಕ್ಷದಾಯಿನೀ |
ಏತಸ್ಮಾತ್ಕಾರಣಾದ್ರಾಜನ್ ಕರ್ತವ್ಯೇಯಂ ಪ್ರಯತ್ನತಃ || ೬ ||

ಶ್ರೂಯತಾಂ ರಾಜಶಾರ್ದೂಲ ಕಥಾ ಪೌರಾಣಿಕೀ ಶುಭಾ |
ಪಂಕಜಾಖ್ಯಪುರಾಣೇಽಸ್ಯಾ ಮಹಿಮಾ ಕಥಿತೋ ಮಯಾ || ೭ ||

ಏಕದಾ ನಾಕಲೋಕೇ ವೈ ಇಂದ್ರೋ ರಾಜ್ಯಂ ಚಕಾರ ಹ |
ದೇವಾಶ್ಚ ತತ್ರ ಸೌಖ್ಯೇನ ನಿವಸಂತಿ ಮನೋರಮೇ || ೮ ||

ಪೀಯೂಷಪಾನನಿರತಾಃ ಹ್ಯಪ್ಸರೋಗಣಸೇವಿತಾಃ |
ನಂದನಂ ತು ವನಂ ತತ್ರ ಪಾರಿಜಾತೋಪಶೋಭಿತಮ್ || ೯ ||

ರಮಯಂತಿ ರಮಂತ್ಯತ್ರ ಹ್ಯಪ್ಸರೋಭಿರ್ದಿವೌಕಸಃ |
ಏಕದಾ ರಮಮಾಣೋಽಸೌ ದೇವೇಂದ್ರಃ ಸ್ವೇಚ್ಛಯಾ ನೃಪ || ೧೦ ||

ನರ್ತಯಾಮಾಸ ಹರ್ಷಾತ್ಸ ಪಂಚಾಶತ್ಕೋಟಿನಾಯಿಕಾಃ |
ಗಂಧರ್ವಾಸ್ತತ್ರ ಗಾಯಂತಿ ಗಂಧರ್ವಾಃ ಪುಷ್ಪದಂತಕಃ || ೧೧ ||

ಚಿತ್ರಸೇನಶ್ಚ ತತ್ರೈವ ಚಿತ್ರಸೇನಸುತಾ ತಥಾ |
ಮಾಲಿನೀತಿ ಚ ನಾಮ್ನಾ ತು ಚಿತ್ರಸೇನಸ್ಯ ಕಾಮಿನೀ || ೧೨ ||

---

ಬೇರೊಂದು ವ್ರತವಿಲ್ಲ. ಆದ್ದರಿಂದ ಹೇ ರಾಜನ್, ಈ ಏಕಾದಶೀ ವ್ರತವನ್ನು ಪ್ರಯತ್ನ ಪೂರ್ವಕ ಆಚರಿಸಬೇಕು. || ೬ || ಹೇ ರಾಜಶ್ರೇಷ್ಠನೇ, ಈ ವಿಷಯದಲ್ಲಿ ಪ್ರಸಿದ್ಧವಾದ ಶುಭಕರವಾದ ಒಂದು ಪೌರಾಣಿಕ ಕಥೆಯನ್ನು ಹೇಳುವೆನು ಕೇಳು. ಈ ಏಕಾದಶಿಯ ಮಹಾತ್ಮೆಯನ್ನು ನಾನು ಈ ಮೊದಲು ಪದ್ಮಪುರಾಣದಲ್ಲಿ ತಿಳಿಸಿದ್ದೇನೆ || ೭ || ಹಿಂದಕ್ಕೆ ಸ್ವರ್ಗಲೋಕದಲ್ಲಿ ಇಂದ್ರನು ರಾಜ್ಯಭಾರ ಮಾಡುತ್ತಿರುವಾಗ ರಮಣೀಯವಾದ ಆ ಲೋಕದಲ್ಲಿ ದೇವತೆಗಳೆಲ್ಲರೂ || ೮ || ಸದಾ ಅಮೃತಪಾನ ಮಾಡುತ್ತ ಅಪ್ಸರಗಣಗಳಿಂದ ಸೇವಿತರಾಗಿ ಸುಖದಿಂದ ವಾಸವಾಗಿದ್ದರು. ಪಾರಿಜಾತ ಪುಷ್ಪಗಳಿಂದ ಶೋಭಿಸುತ್ತಿರುವ ನಂದವನದಲ್ಲಿ ದೇವತೆಗಳು || ೯ || ಅಪ್ಸರೆಯರೊಂದಿಗೆ ಕ್ರೀಡಿಸುತ್ತ ಸಂತೋಷದಿಂದ ಇದ್ದರು. ಈ ರೀತಿ ದೇವತೆಗಳು ಹಾಗೂ ಅಪ್ಸರೆಯರು ಕ್ರೀಡಿಸುತ್ತಿದ್ದ ಸ್ಥಳದಲ್ಲಿಯೇ ಒಮ್ಮೆ ದೇವೇಂದ್ರನೂ ಸ್ವೇಚ್ಛೆಯಿಂದ ವಿಹರಿಸುತ್ತ || ೧೦ || ಹರ್ಷಾತಿರೇಕದಿಂದ ೫೦ ಕೋಟಿ ಅಪ್ಸರೆಯರು ನರ್ತನ ಮಾಡುವಂತೆ ಆಜ್ಞಾಪಿಸಿದನು. ಅಪ್ಸರೆಯರು ನರ್ತನ ಪ್ರಾರಂಭಿಸಲು, ಪುಷ್ಪದಂತಕ || ೧೧ || ಚಿತ್ರಸೇನ ಮೊದಲಾದ ಗಂಧರ್ವರು ಗಾಯನ ಮಾಡಲು ಪ್ರಾರಂಭಿಸಿದರು. ಅಪ್ಸರಲ್ಲಿ ಚಿತ್ರಸೇನ ಗಂಧರ್ವನ ಮಗಳು ಮತ್ತು ಅವನ ಮಾಲಿನೀ ಎಂಬ ಪ್ರೇಯಸಿಯು ಆ ಸ್ಥಳಕ್ಕೆ ಬಂದರು || ೧೨ || ಚಿತ್ರಸೇನನಿಂದ

ಮಾಲಿನ್ಯಾಂ ತು ಸಮುತ್ಪನ್ನಃ ಪುಷ್ಪವಾನಿತಿ ನಾಮತಃ |
ತಸ್ಯ ಪುಷ್ಪವತಃ ಪುತ್ರೋ ಮಾಲ್ಯವಾನ್ನಾಮ ನಾಮತಃ || ೧೩ ||

ಗಂಧರ್ವೀ ಪುಷ್ಪವತ್ಯಾಖ್ಯಾ ಮಾಲ್ಯವತ್ಯತಿಮೋಹಿತಾ |
ಕಾಮಸ್ಯ ಚ ಶರೈಸ್ತೀಕ್ಷ್ಣೈರ್ವಿದ್ಧಾಂಗೀ ಸಾ ಬಭೂವ ಹ || ೧೪ ||

ತಯಾ ಭಾವೈಃ ಕಟಾಕ್ಷೈಶ್ಚ ಮಾಲ್ಯವಾಂಶ್ಚ ವಶೀಕೃತಃ |
ಲಾವಣ್ಯರೂಪಸಂಪತ್ತ್ಯಾ ತಸ್ಯಾ ರೂಪಂ ನೃಪ ಶೃಣು || ೧೫ ||

ಬಾಹೂ ತಸ್ಯಾಸ್ತು ಕಾಮೇನ ಕಂಠಪಾಶೌ ಕೃತಾವಿವ |
ಚಂದ್ರವದ್ವದನಂ ತಸ್ಯಾ ನಯನೇ ಶ್ರವಣಾಯತೇ || ೧೬ ||

ಕರ್ಣೌ ತು ಶೋಭಿತೌ ತಸ್ಯಾಃ ಕುಂಡಲಾಭ್ಯಾಂ ನೃಪೋತ್ತಮ |
ಕಂಬುಗ್ರೀವಯುತಾ ಚೈವ ದಿವ್ಯಾಭರಣಭೂಷಿತಾ || ೧೭ ||

ಪೀನೋನ್ನತೌ ಕುಚೌ ತಸ್ಯಾಃ ಮುಷ್ಟಿಮಾತ್ರಂ ಚ ಮಧ್ಯಮಮ್ |
ನಿತಂಬೌ ವಿಪುಲೌ ತಸ್ಯಾ ವಿಸ್ತೀರ್ಣಂ ಜಘನಸ್ಥಲಮ್ || ೧೮ ||

ಚರಣೌ ಶೋಭಮಾನೌ ತೌ ರಕ್ತೋತ್ಪಲಸಮದ್ಯುತೀ |
ಈದೃಶ್ಯಾಂ ಪುಷ್ಪವತ್ಯಾಂ ಸ ಮಾಲ್ಯವಾನತಿಮೋಹಿತಃ || ೧೯ ||

---

ಮಾಲಿನಿಯಲ್ಲಿ ಪುಷ್ಪವಾನ ಎಂಬ ಗಂಧರ್ವನು ಜನಿಸಿದ್ದನು. ಆ ಪುಷ್ಪವಾನನಿಗೆ ಮಾಲ್ಯವಾನ ಎಂಬ ಹೆಸರಿನ ಮಗನಿದ್ದನು. || ೧೩ || ಪುಷ್ಪವತಿ ಎಂಬ ಗಂಧರ್ವ ಸ್ತ್ರೀಯು ಈ ಮಾಲ್ಯವಾನನಲ್ಲಿ ಬಹು ಅನುರಕ್ತಳಾದಳು. ಮನ್ಮಥನ ತೀಕ್ಷ್ಣವಾದ ಶರಗಳಿಂದ ವಿದ್ಧಳಾದ ಅವಳು || ೧೪ || ತನ್ನ ಹಾವಭಾವಗಳಿಂದಲೂ, ಕಟಾಕ್ಷವೀಕ್ಷಣೆಗಳಿಂದಲೂ, ಮಾಲ್ಯವಾನನನ್ನು ವಶೀಕರಿಸಿಕೊಂಡಳು. ಹೇ ರಾಜಾ, ಸೌಂದರ್ಯ ಸಂಪತ್ತಿನಿಂದ ಶೋಭಿಸುತ್ತಿರುವ ಅವಳ ರೂಪವನ್ನು ವರ್ಣಿಸುವೆನು ಕೇಳು || ೧೫ || ಅವಳ ಬಾಹುಗಳು ಮನ್ಮಥನಿಂದ ಮಾಡಲ್ಪಟ್ಟ ಕಂಠಪಾಶಗಳಂತಿದ್ದವು. ಮುಖವು ಚಂದ್ರನಂತೆಯೂ, ಕಣ್ಣುಗಳು ಕಿವಿಗಳವರೆಗೆ ವಿಸ್ತೃತವಾಗಿಯೂ || ೧೬ || ಕಿವಿಗಳು ಕುಂಡಲಾಭರಣಗಳಿಂದ ಶೋಭಿಸುವಂಥವೂ ಆಗಿದ್ದವು. ಅವಳ ಶಂಖಾಕೃತಿಯಂತಿರುವ ಕಂಠವು ದಿವ್ಯವಾದ ಅನೇಕ ಸುವರ್ಣಾಭರಣಗಳಿಂದ ಅಲಂಕೃತವಾಗಿದ್ದಿತು. || ೧೭ || ಅವಳ ಸ್ತನಗಳು ಪುಷ್ಟವಾಗಿದ್ದವು. ಮಧ್ಯಭಾಗವು ಮುಷ್ಟಿಪ್ರಮಾಣದಷ್ಟು ಕೃಶವಾಗಿದ್ದಿತು. ಅವಳ ನಿತಂಬಗಳು ತುಂಬಿಕೊಂಡಿದ್ದವು. ಜಘನಸ್ಥಳವು ವಿಸ್ತಾರವಾಗಿದ್ದಿತು. || ೧೮ || ರಕ್ತ ಕಮಲಗಳಂತೆ ಅವಳ ಚರಣಗಳು ಕಾಂತಿಯುತವಾಗಿದ್ದವು. ಇಂತು ಬಹು ಸುಂದರಿಯಾದ ಆ ಪುಷ್ಪವತಿಯಲ್ಲಿ ಮಾಲ್ಯವಾನನು ಅತಿಮೋಹಿತನಾದನು. || ೧೯ || ಇಂದ್ರನಿಗೆ ಸಂತೋಷವನ್ನುಂಟು

ಶಕ್ರಸ್ಯ ಪರಿತೋಷಾಯ ನೃತ್ಯಾರ್ಥಂ ತೌ ಸಮಾಗತೌ |
ಗಾಯಮಾನೌ ಚ ತೌ ತತ್ರ ಹ್ಯಪ್ಸರೋಗಣಸಂಗತೌ || ೨೦ ||

ನ ಶುದ್ಧಗಾನಂ ಗಾಯೇತಾಂ ಚಿತ್ತಾಭ್ರಮಸಮನ್ವಿತೌ |
ಬದ್ಧದೃಷ್ಟೀ ತಥಾಽನ್ಯೋನ್ಯಂ ಕಾಮಬಾಣವಶಂಗತೌ || ೨೧ ||

ಜ್ಞಾತ್ವಾ ಲೇಖರ್ಷಭಸ್ತತ್ರ ಸಂಗತಂ ಮಾನಸಂ ತಯೋಃ |
ಕಾಲಕ್ರಿಯಾಣಾಂ ಸಲ್ಲೋಪಾತ್ತಥಾ ಗೀತಾವಭಂಜನಾತ್ || ೨೨ ||

ಚಿಂತಯಿತ್ವಾ ತು ಮಘವಾ ಹ್ಯವಜ್ಞಾನಂ ತಥಾಽಽತ್ಮನಃ |
ಕುಪಿತಶ್ಚ ತಯೋರಿತ್ಥಂ ಶಾಪಂ ದಾಸ್ಯನ್ನಿದಂ ಜಗೌ || ೨೩ ||

ಧಿಗ್ವಾಂ ಪಾಪರತೌ ಮೂಢಾವಾಜ್ಞಾಭಂಗಕರೌ ಮಮ |
ಯುವಾಂ ಪಿಶಾಚೌ ಭವತಾಂ ದಂಪತೀ ರೂಪಧಾರಿಣೌ || ೨೪ ||

ಮೃತ್ಯುಲೋಕಮನುಪ್ರಾಪ್ತೌ ಭುಂಜಾನೌ ಕರ್ಮಣಃ ಫಲಮ್ |
ಏವಂ ಭಗವತಾ ಶಪ್ತಾವುಭೌ ದುಃಖಿತಮಾನಸೌ || ೨೫ ||

ಹಿಮವಂತಮನುಪ್ರಾಪ್ತಾವಿಂದ್ರಶಾಪವಿಮೋಹಿತೌ |
ಉಭೌ ಪಿಶಾಚತಾಂ ಪ್ರಾಪ್ತೌ ದಾರುಣಂ ದುಃಖಮೇವ ಚ || ೨೬ ||

---

ಮಾಡುವದಕ್ಕಾಗಿ ಅವರಿಬ್ಬರೂ ಆ ಸ್ಥಳಕ್ಕೆ ಬಂದು ಅಪ್ಸರ ಗಣಗಳೊಂದಿಗೆ ಸೇರಿ ಅಲ್ಲಿ ಗಾಯನ ಮಾಡತೊಡಗಿದರು. || ೨೦ || ಆದರೆ ಮನಸ್ಸಿನ ಏಕಾಗ್ರತೆ ಇಲ್ಲದಿರುವ ಅವರಿಬ್ಬರೂ ಶಾಸ್ತ್ರ ಶುದ್ಧವಾಗಿ ಹಾಡುತ್ತಿರಲಿಲ್ಲ. ಮತ್ತು ಕಾಮಬಾಣದಿಂದ ಪೀಡಿತರಾಗಿ ಒಬ್ಬರನ್ನೊಬ್ಬರು ನೆಟ್ಟದೃಷ್ಟಿಯಿಂದ ನೋಡುತ್ತ ನಿಂತರು || ೨೧ || ಅವರು ತನ್ನೆದುರಿನಲ್ಲೇ ಈ ರೀತಿ ಪರಸ್ಪರರಲ್ಲಿ ಅನುರಕ್ತರಾಗಿರುವದನ್ನು ಇಂದ್ರನು ತಿಳಿದು ಅಲ್ಲಿ ತನ್ನ ಆಜ್ಞೆಯನ್ನು ಮೀರಿ ವರ್ತಿಸುತ್ತಿರುವದರಿಂದಲೂ ಹಾಗೂ ಸಂಗೀತಸಭೆಯಲ್ಲಿ ಇವರಿಬ್ಬರ ಕಾರಣದಿಂದ ತಾಲ ಹಾಗೂ ರಾಗಗಳ ಭಂಗವಾಗಿದ್ದರಿಂದಲೂ || ೨೨ || ಇದು ತನಗಾದ ಅವಮಾನವೆಂದು ಬಗೆದನು. ಮತ್ತು ಕುಪಿತನಾಗಿ ಅವರಿಬ್ಬರಿಗೆ ಶಾಪವನ್ನು ಕೊಡುತ್ತ ಹೇಳಿದನು || ೨೩ || ಎಲೈ ಮೂಢರೇ ನೀವು ಹೀಗೆ ಪಾಪ ಕಾರ್ಯದಲ್ಲಿ ರತರಾಗಿ ನನ್ನ ಆಜ್ಞೆಯನ್ನು ಮೀರಿ ನಡೆದಿರುವಿರಿ. ನೀವಿಬ್ಬರೂ ದಂಪತಿಗಳಾಗಿ ಪಿಶಾಚಜನ್ಮವನ್ನು ಹೊಂದಿ || ೨೪ || ಮೃತ್ಯುಲೋಕದಲ್ಲಿ ಈಗ ಮಾಡಿದ ಕರ್ಮದ ಫಲವನ್ನು ಭೋಗಿಸಿರಿ. ಈ ರೀತಿ ಇಂದ್ರನಿಂದ ಶಪ್ತರಾದ ಅವರು ಬಹುದುಃಖಿತರಾಗಿ || ೨೫ || ಶಾಪಪ್ರಭಾವದಿಂದ ಹಿಮಾಲಯ ಪರ್ವತದಲ್ಲಿ ಪಿಶಾಚಿಗಳಾಗಿ ಸಂಚರಿಸತೊಡಗಿದರು. ಅಲ್ಲಿ ದಾರುಣವಾದ ದುಃಖವನ್ನು ಅನುಭೋಗಿಸುತ್ತ || ೨೬ || ಮಹಾಕಷ್ಟದಲ್ಲಿ ಕಾಲಕಳೆಯತೊಡಗಿದರು. ಶಾಪ ಪೀಡಿತರಾದ

ಸಂತಪ್ತಮಾನಸೌ ತತ್ರ ಮಹಾಕೃಚ್ಛ್ರಗತಾವುಭೌ |
ಗಂಧಂ ರಸಂ ಚ ಸ್ಪರ್ಶಂ ಚ ನ ಜಾನೀತೌ ವಿಮೋಹಿತೌ || ೨೭ ||

ಪೀಡ್ಯಮಾನೌ ತು ದಾಹೇನ ದೇಹಪಾತಕರೇಣ ಚ |
ತೌ ನ ನಿದ್ರಾಸುಖಂ ಪ್ರಾಪ್ತೌ ಕರ್ಮಣಾ ತೇನ ಪೀಡಿತೌ || ೨೮ ||

ಪರಸ್ಪರಂ ವಾದಮಾನೌ ಚೇರತುರ್ಗಿರಿಗಹ್ವರಮ್ |
ಪೀಡ್ಯಮಾನೌ ತು ಶೀತೇನ ತುಷಾರಪ್ರಭವೇಣ ತೌ || ೨೯ ||

ದಂತಘರ್ಷಂ ಪ್ರಕುರ್ವಾಣೌ ರೋಮಾಂಚಿತವಪುರ್ಧರೌ |
ಊಚೇ ಪಿಶಾಚಃ ಶೀತಾರ್ತಃ ಸ್ವಪತ್ನೀಂ ತಾಂ ಪಿಶಾಚಿಕಾಮ್ || ೩೦ ||

ಕಿಮಾವಾಭ್ಯಾಂ ಕೃತಂ ಪಾಪಮತ್ಯಂತಂ ದುಃಖದಾಯಕಮ್ |
ಯೇನ ಪ್ರಾಪ್ತಂ ಪಿಶಾಚತ್ವಂ ಸ್ವೇನ ದುಷ್ಕೃತಕರ್ಮಣಾ || ೩೧ ||

ನರಕಂ ದಾರುಣಂ ಮನ್ಯೇ ಪಿಶಾಚತ್ವಂ ಚ ಗರ್ಹಿತಮ್ |
ತಸ್ಮಾತ್ಸರ್ವಪ್ರಯತ್ನೇನ ಪಾಪಂ ನೈವ ಸಮಾಚರೇತ್ || ೩೨ ||

ಇತಿ ಚಿಂತಾಪರೌ ತತ್ರ ಹ್ಯಾಸ್ತಾಂ ದುಃಖೇನ ಕರ್ಶಿತೌ |
ದೈವಯೋಗಾತ್ತಯೋಃ ಪ್ರಾಪ್ತಾ ಮಾಘಸ್ಯೈಕಾದಶೀ ಸಿತಾ || ೩೩ ||

---

ಅವರಿಗೆ ಗಂಧ, ರಸ ಮತ್ತು ಸ್ಪರ್ಶಗಳ ಜ್ಞಾನವೂ ಇಲ್ಲದಂತಾಯಿತು. || ೨೭ || ಶ್ರೇಷ್ಠವಾದ ಗಂಧರ್ವದೇಹದಿಂದ ದಾರುಣಮಯವಾದ ಪಿಶಾಚದೇಹವನ್ನು ಹೊಂದಿದ ಅವರು ಬಹು ದುಃಖದಿಂದ ಪೀಡಿತರಾಗಿ ನಿದ್ರಾಸುಖವನ್ನು ಪಡೆಯದಂತಾದರು. ಮಾಡಿದ ಕರ್ಮದ ಫಲವನ್ನು ಭೋಗಿಸುತ್ತ || ೨೮ || ಪರಸ್ಪರ ವಾದಿಸುತ್ತ ಪರ್ವತದಲ್ಲಿ ಗಿರಿಗಹ್ವರಗಳಲ್ಲಿ ಸಂಚರಿಸತೊಡಗಿದರು. ಅಲ್ಲಿಯ ಹಿಮಪಾತದಿಂದುಂಟಾದ ಛಳಿಯಿಂದ ಅತಿಪೀಡಿತರಾಗಿ || ೨೯ || ರೋಮಾಂಚಿತರಾದ ಅವರು ಕಟಕಟ ನಡುಗುತ್ತ ಹಲ್ಲುಗಳನ್ನು ಕಡಿಯತೊಡಗಿದರು. ಛಳಿಯಿಂದ ಪೀಡಿತನಾದ ಪಿಶಾಚಿಯು ತನ್ನ ಪಿಶಾಚಿ ಪತ್ನಿಯನ್ನು ಕುರಿತು ಹೇಳಿದನು || ೩೦ || ಹಾ ಪ್ರಿಯೇ, ಇಷ್ಟು ಬಹು ದುಃಖಪ್ರದವಾದ ಈ ಪಿಶಾಚ ಜನ್ಮವನ್ನು ಹೊಂದಲು ನಾವಿಬ್ಬರೂ ಅದಾವ ಪಾಪ ಕರ್ಮವನ್ನು ಮಾಡಿದ್ದೆವು ? ನಮ್ಮ ದುಷ್ಕರ್ಮಕ್ಕೆ ಗರ್ಹಿತವಾದ ಈ ಪಿಶಾಚಜನ್ಮಕ್ಕಿಂತ ದಾರುಣವಾದ ನರಕವಾಗಿದ್ದರೂ ಯೋಗ್ಯವಾಗಿರುತ್ತಿತ್ತೆಂದು ಭಾವಿಸುತ್ತೇನೆ. ಸರ್ವಪ್ರಯತ್ನದಿಂದ ಪಾಪವನ್ನೆಂದಿಗೂ ಮಾಡಬಾರದು. ||೩೧|| ೩೨ || ಈ ರೀತಿ ಬಹು ಚಿಂತಾಕ್ರಾಂತರಾದ ಪಿಶಾಚಿ ದಂಪತಿಗಳು ದುಃಖದಿಂದ ಕಾಲ ಕಳೆಯುತ್ತಿರಲು, ದೈವಯೋಗದಿಂದ ಎಲ್ಲ ತಿಥಿಗಳಲ್ಲಿ ಉತ್ತಮವಾದ "ಜಯಾ" ಎಂಬ ಹೆಸರಿನಿಂದ ಪ್ರಸಿದ್ಧವಾದ ಮಾಘಶುದ್ಧ ಏಕಾದಶಿಯು ಪ್ರಾಪ್ತವಾಯಿತು.

ಜಯಾ ನಾಮ್ನೀತಿ ವಿಖ್ಯಾತಾ ತಿಥೀನಾಮುತ್ತಮಾ ತಿಥಿಃ |
ತಸ್ಮಿನ್ ದಿನೇ ತು ಸಂಪ್ರಾಪ್ತೇ ತಾವಾಹಾರವಿವರ್ಜಿತೌ || ೩೪ ||

ಆಸಾತೇ ತತ್ರ ನೃಪತೇ ಜಲಪಾನವಿವರ್ಜಿತೌ |
ನ ಕೃತೋ ಜೀವಘಾತಶ್ಚ ನ ಪತ್ರಫಲಭಕ್ಷಣಮ್ || ೩೫ ||

ಅಶ್ವತ್ಥಸ್ಯ ಸಮೀಪೇ ತು ಪತಿತೌ ದುಃಖಸಂಯುತೌ |
ರವಿರಸ್ತಂಗತೋ ರಾಜನ್ ತಥೈವ ಸ್ಥಿತಯೋಸ್ತಯೋಃ || ೩೬ ||

ಪ್ರಾಪ್ತಾ ಚೈವ ನಿಶಾ ಘೋರಾ ದಾರುಣಾ ಶೀತಕಾರಿಣೀ |
ಕಂಪಮಾನೌ ತು ತೌ ತತ್ರ ಹಿಮೇನ ಚ ಜಡೀಕೃತೌ || ೩೭ ||

ಪರಸ್ಪರೇಣ ಸಂಲ್ಲಗ್ನೌ ಗಾತ್ರಯೋರ್ಭುಜಯೋರಪಿ |
ನ ನಿದ್ರಾಂ ನ ರತಿಂ ತತ್ರ ನ ತೌ ಸೌಖ್ಯಮವಿಂದತಾಮ್ || ೩೮ ||

ಏವಂ ತೌ ರಾಜಶಾರ್ದೂಲ ಶಾಪೇನೇಂದ್ರಸ್ಯ ಪೀಡಿತೌ |
ಇತ್ಥಂ ತಯೋರ್ದುಃಖಿತಯೋರ್ನಿರ್ಜಗಾಮ ತದಾ ನಿಶಾ || ೩೯ ||

ಜಯಾಯಾಸ್ತು ವ್ರತೇ ಚೀರ್ಣೇ ರಾತ್ರೌ ಜಾಗರಣೇ ಕೃತೇ |
ತಯೋರ್ವ್ರತಪ್ರಭಾವೇಣ ಯಥಾ ಹ್ಯಾಸೀತ್ತಥಾ ಶೃಣು || ೪೦ ||

ಆ ದಿನ ಅವರು ಯಾವ ಆಹಾರವನ್ನೂ ಸ್ವೀಕರಿಸಲಿಲ್ಲ. || ೩೩ || ೩೪ || ಜಲಪಾನವನ್ನೂ ಮಾಡಲಿಲ್ಲ. ಈ ರೀತಿ ಹಸಿವೆ ನೀರಡಿಕೆಗಳಿಂದ ಪೀಡಿತರಾದರೂ ಆತ್ಮಹತ್ಯೆಯನ್ನು ಬಯಸಲಿಲ್ಲ. ಪತ್ರ ಹಾಗೂ ಫಲಗಳನ್ನು ಭಕ್ಷಿಸಲಿಲ್ಲ || ೩೫ || ಇದರಿಂದ ಇನ್ನಷ್ಟು ದುಃಖಾಕುಲರಾದ ಅವರು ಅಲ್ಲಿಯೇ ಇದ್ದ ಒಂದು ಅಶ್ವತ್ಥವೃಕ್ಷದ ಸನಿಹದಲ್ಲಿ ಮುಂದೆ ನಡೆಯಲು ಶಕ್ತರಾಗದೇ ಕೆಳಗೆ ಬಿದ್ದು ಬಿಟ್ಟರು. ಅಷ್ಟರಲ್ಲಿ ಸೂರ್ಯಾಸ್ತವಾಗಿ ರಾತ್ರಿಯಾಯಿತು. || ೩೬ || ಅತಿ ಛಳಿಯಿಂದ ಕೂಡಿದ ಆ ರಾತ್ರಿಯೆಲ್ಲ ನಡುಗುತ್ತ ಅವರು ಹಿಮದಿಂದ ಜಡದಂತೆ ನಿಶ್ಚಲರಾದರು || ೩೭ || ನಡುಗುತ್ತಿರುವ ಆ ಪಿಶಾಚಿಗಳಿಬ್ಬರೂ ಛಳಿಯಿಂದ ಪರಸ್ಪರ ದೇಹಗಳನ್ನು ಹಾಗೂ ಭುಜಗಳನ್ನು ಗಟ್ಟಿಯಾಗಿ ಅದುಮಿಕೊಂಡಿದ್ದರೂ ರಾತ್ರಿ ಇಡೀ ನಿದ್ರೆಯನ್ನಾಗಲೀ ರತಿಸುಖವನ್ನಾಗಲೀ ಹೊಂದದೇ ದುಃಖಪಟ್ಟರು. || ೩೮ || ಹೇ ಧರ್ಮರಾಜಾ, ಇಂದ್ರನ ಶಾಪದಿಂದ ಇಂತು ಅವರು ದುಃಖ ಬಡುತ್ತಿರಲು ರಾತ್ರಿ ಕಳೆಯಿತು. || ೩೯ || ಈ ರೀತಿ ಪಿಶಾಚಿಗಳು "ಜಯಾ" ವ್ರತವನ್ನೂ ರಾತ್ರಿ ಜಾಗರಣೆಯನ್ನೂ ಮಾಡಿದಂತಾಯಿತು. ಈ ರೀತಿ ವ್ರತಾನುಷ್ಠಾನದಿಂದ ಲಬ್ಧವಾದ ಫಲವನ್ನು ತಿಳಿಸುವೆನು ಕೇಳು || ೪೦ || ಮರುದಿನ ದ್ವಾದಶೀ ದಿವಸವು ಪ್ರಾಪ್ತವಾಗಲು ಜಯಾ ವ್ರತವು ಸಂಪೂರ್ಣವಾಗಿ ಆಚರಿಸಲ್ಪಟ್ಟಂತಾಗಿ ಶ್ರೀವಿಷ್ಣುವಿನ ಅನುಗ್ರಹದಿಂದ ಅವರಿಬ್ಬರ ಪಿಶಾಚ

ದ್ವಾದಶೀದಿವಸೇ ಪ್ರಾಪ್ತೇ ತಾಭ್ಯಾಂ ಚೀರ್ಣೇ ಜಯಾವ್ರತೇ |
ವಿಷ್ಣೋಃ ಪ್ರಭಾವಾನ್ನೃಪತೇ ಪಿಶಾಚತ್ವಂ ತಯೋರ್ಗತಮ್ || ೪೧ ||

ಪುಷ್ಪವತೀ ಮಾಲ್ಯವಾಂಶ್ಚ ಪೂರ್ವರೂಪೌ ಬಭೂವತುಃ |
ಪುರಾತನಸ್ನೇಹಯುಕ್ತೌ ಪುರ್ವಾಲಂಕಾರಸಂಯುತೌ || ೪೨ ||

ವಿಮಾನಮಧಿರೂಢೌ ತಾವಪ್ಸರೋಗಣಸೇವಿತೌ |
ಸ್ತೂಯಮಾನೌ ತು ಗಂಧರ್ವೈಸ್ತುಂಬುರುಪ್ರಮುಖೈಸ್ತಥಾ || ೪೩ ||

ಹಾವಭಾವ ಸಮಾಯುಕ್ತೌ ಗತೌ ನಾಕೇ ಮನೋರಮೇ |
ದೇವೇಂದ್ರಸ್ಯಾಗ್ರತೋ ಗತ್ವಾ ಪ್ರಣಾಮಂ ಚಕ್ರತುರ್ಮುದಾ || ೪೪ ||

ತಥಾವಿಧೌ ತು ತೌ ದೃಷ್ಟ್ವಾ ಮಘವಾ ವಿಸ್ಮಿತೋऽಬ್ರವೀತ್ |

ಇಂದ್ರ ಉವಾಚ -

ವದ ತೇ ಕೇನ ಪುಣ್ಯೇನ ಪಿಶಾಚತ್ವಂ ವಿನಿರ್ಗತಮ್ |
ಮಮ ಶಾಪವಶಂ ಪ್ರಾಪ್ತೌ ಕೇನ ದೇವೇನ ಮೋಚಿತೌ || ೪೫ ||

ಮಾಲ್ಯವಾನುವಾಚ -

ವಾಸುದೇವಪ್ರಸಾದೇನ ಜಯಾಯಾ ಸುವ್ರತೇನ ಚ || ೪೬ ||

ಜನ್ಮವು ಕಳೆದು ಹೋಯಿತು. || ೪೧ || ಅವರು ಮೊದಲಿನಂತೆಯೇ ಗಂಧರ್ವರಾದ ಪುಷ್ಪವತೀ ಮತ್ತು ಮಾಲ್ಯವಾನರಾದರು. ಆಭರಣಾಲಂಕಾರಗಳಿಂದ ಶೋಭಿಸುತ್ತಿರುವ ಅವರು ಮತ್ತೆ ಮೊದಲಿನಂತೆ ಪರಸ್ಪರರಲ್ಲಿ ಅನುರಾಗಭರಿತರಾದರು || ೪೨ || ವಿಮಾನಾರೂಢರಾಗಿ, ಅಪ್ಸರಗಣಗಳಿಂದ ಸೇವಿಸಲ್ಪಡುತ್ತ, ತುಂಬುರು ಪ್ರಮುಖರಾದ ಗಂಧರ್ವರಿಂದ ಸ್ತುತಿಸಲ್ಪಡುತ್ತ || ೪೩ || ಹಾವಭಾವಗಳಿಂದ ಯುಕ್ತರಾಗಿ ಪುನಃ ಮನೋಹಾರಿಯಾದ ಸ್ವರ್ಗಲೋಕವನ್ನು ಸೇರಿದರು. ದೇವೇಂದ್ರನ ಸಮ್ಮುಖದಲ್ಲಿ ನಿಂತು ಸಂತೋಷದಿಂದ ನಮಿಸಿದರು. || ೪೪ || ಪಿಶಾಚ ಜನ್ಮದಿಂದ ಮುಕ್ತರಾಗಿ ಬಂದಿರುವ ಅವರನ್ನು ಕಂಡು ಅತ್ಯಂತ ವಿಸ್ಮಿತನಾದ ಇಂದ್ರನು ಭೋ, ನನ್ನ ಶಾಪದಿಂದ ಪ್ರಾಪ್ತವಾಗಿದ್ದ ನಿಮ್ಮ ಪಿಶಾಚ ಜನ್ಮವು ಅದಾವ ಪುಣ್ಯದಿಂದ ನೀಗಿತು ? || ೪೫ || ಯಾವ ದೇವನಿಂದ ನೀವು ಶಾಪ ಮೋಚನಗೊಳಿಸಲ್ಪಟ್ಟಿರುವಿರಿ ? ಎಂದು ಕೇಳಲು ಮಾಲ್ಯವಾನನು ಹೇಳಿದನು. ಹೇ ಸ್ವಾಮಿನ್, ಶ್ರೀಹರಿವಾಸುದೇವನ ಅನುಗ್ರಹದಿಂದ ಮತ್ತು "ಜಯಾ" ವ್ರತಾನುಷ್ಠಾನದಿಂದ ನಮ್ಮ ಪಿಶಾಚ ಜನ್ಮವು ಕಳೆದಿದೆ. ಶ್ರೀವಾಸುದೇವನಲ್ಲಿ ನಾವು ಮಾಡಿದ ಭಕ್ತಿಯಿಂದ ಹಾಗೂ ವ್ರತಾನುಷ್ಠಾನದಲ್ಲಿದ್ದ ನಮ್ಮ ಶ್ರದ್ಧೆಯಿಂದಲೇ ನಾವು ಪಿಶಾಚಜನ್ಮದಿಂದ

ಪಿಶಾಚತ್ವಂ ಗತಂ ಸ್ವಸ್ಮಿನ್ ಸತ್ಯಂ ಭಕ್ತಿಪ್ರಭಾವತಃ |
ಇತಿ ಶ್ರುತ್ವಾ ವಚಸ್ತಸ್ಯ ಪ್ರತ್ಯುವಾಚ ಸುರೇಶ್ವರಃ || ೪೭ ||

ಇಂದ್ರ ಉವಾಚ -

ಪವಿತ್ರೌ ಪಾವನೌ ಜಾತೌ ವಂದನೀಯೌ ಮಮಾಪಿ ಚ |
ಹರಿವಾಸರಕರ್ತಾರೌ ವಿಷ್ಣುಭಕ್ತಿಪರಾಯಣೌ || ೪೮ ||

ಹರಿಭಕ್ತರತಾ ಯೇ ಚ ಶಿವಭಕ್ತಿರತಾಸ್ತಥಾ |
ಅಸ್ಮಾಕಮಪಿ ತೇ ಮರ್ತ್ಯಾಃ ಪೂಜ್ಯಾ ವಂದ್ಯಾ ನ ಸಂಶಯಃ || ೪೯ ||

ವಿಹರಸ್ವ ಯಥಾಸೌಖ್ಯಂ ಪುಷ್ಪವತ್ಯಾ ಸುರಾಲಯೇ |
ಏತಸ್ಮಾತ್ಕಾರಣಾದ್ರಾಜನ್ ಕರ್ತವ್ಯೋ ಹರಿವಾಸರಃ || ೫೦ ||

ಜಯಾವ್ರತಂ ತು ರಾಜೇಂದ್ರ ಬ್ರಹ್ಮಹತ್ಯಾಪಹಾರಕಮ್ |
ಸರ್ವದಾನಾನಿ ದತ್ತಾನಿ ಯಜ್ಞಾಸ್ತೇನ ಕೃತಾ ನೃಪ || ೫೧ ||

ಸರ್ವತೀರ್ಥೇಷು ಸುಸ್ನಾತಃ ಕೃತಂ ಯೇನ ಜಯಾವ್ರತಮ್ |
ಯಃ ಕರೋತಿ ನರೋ ಭಕ್ತ್ಯಾ ಶ್ರದ್ಧಾಯುಕ್ತೋ ಜಯಾವ್ರತಮ್ || ೫೨ ||

ಮುಕ್ತರಾಗಿರುವೆವೆಂದು ತಿಳಿಯುತ್ತೇನೆ. ಅವನ ಮಾತುಗಳನ್ನು ಕೇಳಿದ ಇಂದ್ರನು ಪುನಃ ಹೇಳಿದನು. || ೪೬ || ೪೭ || ಭೋ, ಹರಿವಾಸರವನ್ನು ಮಾಡಿದ, ವಿಷ್ಣು ಭಕ್ತಿಪರಾಯಣರಾದ ನೀವಿಬ್ಬರೂ ಪವಿತ್ರರಾಗಿರುವಿರಿ, ಪಾವನರಾಗಿರುವಿರಿ. ನನಗೂ ಕೂಡ ವಂದನೀಯರಾಗಿರುವಿರಿ || ೪೮ || ಯಾರು ಹರಿಭಕ್ತಿಯಲ್ಲಿ ರತರಾಗಿರುವರೋ, ಮತ್ತು ಶಿವಭಕ್ತಿಯಲ್ಲಿ ರತರಾಗಿರುವರೋ ಆ ಮನುಜರು ಪೂಜ್ಯರೂ, ವಂದ್ಯರೂ ಆಗುವರೆಂಬಲ್ಲಿ ಸಂದೇಹವಿಲ್ಲ. || ೪೯ || ಹೇ ಮಾಲ್ಯವಾನನೇ ಇನ್ನು ಮುಂದೆ ನೀನು ಈ ದೇವಲೋಕದಲ್ಲಿ ಪುಷ್ಪವತಿಯೊಂದಿಗೆ ಯಥೇಚ್ಛವಾಗಿ ಸುಖವಾಗಿ ವಿಹರಿಸು. ಹೇ ಧರ್ಮರಾಜಾ - ಈ ಕಾರಣದಿಂದ "ಜಯಾ" ತಿಥಿ ದಿನ ಉಪವಾಸವನ್ನು ಮಾಡಬೇಕು || ೫೦ || ಜಯಾವ್ರತವು ಬ್ರಹ್ಮ ಹತ್ಯಾದಿ ಪಾಪಗಳನ್ನು ಕಳೆಯುವಂಥದಾಗಿದೆ. ಈ ಉಪವಾಸವ್ರತಾನುಷ್ಠಾನದಿಂದ ಸರ್ವದಾನಗಳು ಕೊಡಲ್ಪಟ್ಟಂತೆಯೂ, ಸಕಲ ಯಜ್ಞಗಳನ್ನು ಆಚರಿಸಿದಂತೆಯೂ || ೫೧ || ಸರ್ವ ತೀರ್ಥಗಳಲ್ಲಿ ಸ್ನಾನ ಮಾಡಿದಂತೆಯೂ ಆಗುವದು. ಈ ಜಯಾವ್ರತವನ್ನು ಯಾವ ಮನುಜನು ಶ್ರದ್ಧಾ ಭಕ್ತಿಗಳಿಂದ ಆಚರಿಸುವನೋ || ೫೨ || ಅವನು ಒಂದು ನೂರು ಕೋಟಿ ಕಲ್ಪಗಳವರೆಗೆ ವೈಕುಂಠಲೋಕದಲ್ಲಿ ಮುದದಿಂದ ಇರುವನು. ಹೇ ಧರ್ಮರಾಜಾ ಈ ವ್ರತದ ಮಹಾತ್ಮೆಯನ್ನು ಪಠನಮಾಡುವದರಿಂದ ಅಥವಾ ಶ್ರವಣ ಮಾಡುವದರಿಂದ

**ಕಲ್ಪಕೋಟಿಶತಂ ಯಾವದ್ವೈಕುಂಠೇ ಮೋದತೇ ಧ್ರುವಮ್ |**
**ಪಠನಾಚ್ಛ್ರವಣಾದ್ರಾಜನ್ ಅಗ್ನಿಷ್ಟೋಮಫಲಂ ಲಭೇತ್ || ೫೩ ||**

**|| ಇತಿ ಶ್ರೀಭವಿಷ್ಯೋತ್ತರ ಪುರಾಣೇ ಮಾಘಶುಕ್ಲ ಜಯಾ ಏಕಾದಶೀ ವ್ರತಮಾಹಾತ್ಮ್ಯಂ ಸಂಪೂರ್ಣಮ್ || ೬ ||**

---

"ಅಗ್ನಿಷ್ಟೋಮ" ಯಾಗದ ಫಲವು ದೊರೆಯುವದು. || ೫೩ ||

**|| ಇಲ್ಲಿಗೆ ಶ್ರೀಭವಿಷ್ಯೋತ್ತರ ಪುರಾಣದಲ್ಲಿಯ ಮಾಘ ಶುಕ್ಲ "ಜಯಾ" ಎಂಬ ಏಕಾದಶಿಯ ಮಹಾತ್ಮೆಯು ಸಮಾಪ್ತವಾಯಿತು ||**

**|| ಶ್ರೀಕೃಷ್ಣಾರ್ಪಣಮಸ್ತು ||**

# ಫಾಲ್ಗುನ ಕೃಷ್ಣೈಕಾದಶೀ ವ್ರತ ಕಥಾ

ಯುಧಿಷ್ಠಿರ ಉವಾಚ -

ಫಾಲ್ಗುನಸ್ಯಾಸಿತೇ ಪಕ್ಷೇ ಕಿಂನಾಮ್ನೈಕಾದಶೀ ಭವೇತ್ |
ವಾಸುದೇವಪ್ರಸಾದೇನ ಕಥಯಸ್ವ ಮಮಾಗ್ರತಃ || ೧ ||

ಶ್ರೀಕೃಷ್ಣ ಉವಾಚ -

ಕಥಯಿಷ್ಯಾಮಿ ರಾಜೇಂದ್ರ ಕೃಷ್ಣಾಯಾ ಫಾಲ್ಗುನೀ ಭವೇತ್ |
ವಿಜಯೇತಿ ಚ ಸಾ ಪ್ರೋಕ್ತಾ ಕರ್ತೃಣಾಂ ಜಯದಾ ಸದಾ || ೨ ||

ತಸ್ಯಾಶ್ಚ ವ್ರತಮಾಹಾತ್ಮ್ಯಂ ಸರ್ವಪಾಪಹರಂ ಪರಮ್ |
ನಾರದಃ ಪರಿಪಪ್ರಚ್ಛ ಬ್ರಹ್ಮಾಣಂ ಕಮಲಾಸನಮ್ || ೩ ||

ಫಾಲ್ಗುನಸ್ಯಾಸಿತೇ ಪಕ್ಷೇ ವಿಜಯಾ ನಾಮ ಯಾ ತಿಥಿಃ |
ತಸ್ಯಾ ವ್ರತಂ ಸುರಶ್ರೇಷ್ಠ ಕಥಯಸ್ವ ಪ್ರಸಾದತಃ || ೪ ||

ಇತಿ ಪೃಷ್ಟೋ ನಾರದೇನ ಪ್ರತ್ಯುವಾಚ ಪಿತಾಮಹಃ |

ಬ್ರಹ್ಮೋವಾಚ -

ಶೃಣು ನಾರದ ವಕ್ಷ್ಯಾಮಿ ಕಥಾಂ ಪಾಪಹರಾಂ ಪರಾಮ್ || ೫ ||

---

ಶ್ರೀಕೃಷ್ಣಪರಮಾತ್ಮಾ ಫಾಲ್ಗುಣ ಮಾಸದ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು ? ಇದರ ಮಹಾತ್ಮೆಯನ್ನು ನನಗೆ ತಿಳಿಸಿ ಅನುಗ್ರಹಿಸಬೇಕು ಎಂದು ಯುಧಿಷ್ಠಿರನು ಪ್ರಾರ್ಥಿಸಲು || ೧ || ಶ್ರೀ ಕೃಷ್ಣನು ಹೇಳಿದನು - ಹೇ ರಾಜೇಂದ್ರ, ಫಾಲ್ಗುಣ ಕೃಷ್ಣಪಕ್ಷದ ಏಕಾದಶಿಯ ಕಥೆಯನ್ನು ತಿಳಿಸುವೆನು ಕೇಳು. ಆ ಏಕಾದಶಿಯು `ವಿಜಯಾ ' ಎಂಬ ಹೆಸರಿನಿಂದ ಖ್ಯಾತವಾಗಿದೆ. ಈ ಏಕಾದಶೀ ವ್ರತವನ್ನು ಯಾರು ಆಚರಿಸುವರೋ ಅವರಿಗೆ ಜಯಪ್ರದವಾಗಿದೆ ||೨|| ಸಕಲ ಪಾಪಗಳನ್ನು ನಾಶಮಾಡುವದು ಈ ಏಕಾದಶಿಯ ಮಹಿಮೆಯಾಗಿದೆ. ಹಿಂದಕ್ಕೆ ನಾರದನು ಚತುರ್ಮುಖ ಬ್ರಹ್ಮನನ್ನು ಕುರಿತು ||೩|| ಹೇ ಸುರಶ್ರೇಷ್ಠ, ಫಾಲ್ಗುಣ ಕೃಷ್ಣಪಕ್ಷನಲ್ಲಿ `ವಿಜಯಾ' ಎಂಬ ಹೆಸರಿನ ಏಕಾದಶೀ ತಿಥಿ ಏನಿರುವದೋ ಅಂದಿನ ವ್ರತಾನುಷ್ಠಾನದ ಬಗ್ಗೆ ನನಗೆ ತಿಳಿಸಿ ಅನುಗ್ರಹಿಸು ||೪|| ಎಂದು ವಿಜ್ಞಾಪಿಸಲು ಬ್ರಹ್ಮದೇವನು ಹೇಳಿದನು. ಹೇ ನಾರದಾ, ಪಾಪಗಳನ್ನು ಕಳೆಯುವ ಶ್ರೇಷ್ಠವಾದ ಆ ವ್ರತದ ಮಹಿಮೆಯನ್ನು ಹೇಳುವೆನು ಕೇಳು ||೫|| ಇದು ಪಾಪಪರಿಹಾರಕವಾದ ಪವಿತ್ರವಾದ ಪುರಾತನ ವ್ರತವಾಗಿದೆ. ಇಂಥ ವಿಜಯಾ ವ್ರತದ ಬಗ್ಗೆ

ಪುರಾತನಂ ವ್ರತಂ ಹ್ಯೇತತ್ ಪವಿತ್ರಂ ಪಾಪನಾಶನಮ್ |
ಯನ್ನ ಕಸ್ಯಚಿದಾಖ್ಯಾತಂ ಮಯ್ಯೈತದ್ವಿಜಯಾವ್ರತಮ್ || ೬ ||

ಜಯಂ ದದಾತಿ ವಿಜಯಾ ನೃಣಾಂ ಚೈವ ನ ಸಂಶಯಃ |
ರಾಮಸ್ತಪೋವನಂ ಯಾತೋ ವರ್ಷಾಣ್ಯೇವ ಚತುರ್ದಶ || ೭ ||

ನ್ಯವಸತ್ ಪಂಚವಟ್ಯಾಂ ತು ಸಸೀತಶ್ಚ ಸಲಕ್ಷ್ಮಣಃ |
ತತ್ರೈವ ವಸತಸ್ತಸ್ಯ ರಾಘವಸ್ಯ ಮಹಾತ್ಮನಃ || ೮ ||

ರಾವಣೇನ ಹೃತಾ ಭಾರ್ಯಾ ಸೀತಾ ನಾಮ್ನೀ ತಪಸ್ವಿನೀ |
ತೇನ ದುಃಖೇನ ರಾಮೋಽಸೌ ಮೋಹಮಭ್ಯಾಗತಸ್ತದಾ || ೯ ||

ಭ್ರಮನ್ ಜಟಾಯುಷಂ ತತ್ರ ದದರ್ಶ ವಿಗತಾಯುಷಮ್ |
ಕಬಂಧೋ ನಿಹತಃ ಪಶ್ಚಾತ್ ಭ್ರಮತಾರಣ್ಯಮಧ್ಯತಃ || ೧೦ ||

ರಾಜ್ಞೇ ವಿಜ್ಞಾಪ್ಯ ತತ್ಸರ್ವಂ ಸೋಽಪಿ ಮೃತ್ಯುವಶಂ ಗತಃ |
ಸುಗ್ರೀವೇಣ ಸಮಂ ಸಖ್ಯಂ ರಾಮಸ್ಯ ಸಮಜಾಯತ || ೧೧ ||

ವಾನರಾಣಾಮನೀಕಾನಿ ರಾಮಾರ್ಥಂ ಸಂಗತಾನಿ ವೈ |
ತತೋ ಹನುಮತಾ ದೃಷ್ಟಾ ಲಂಕೋದ್ಯಾನೇ ತು ಜಾನಕೀ || ೧೨ ||

---

ನಾನು ಇದುವರೆಗೂ ಯಾರಿಗೂ ತಿಳಿಸಿರುವದಿಲ್ಲ. ||೬|| ಈ ವಿಜಯಾ ವ್ರತವು, ವ್ರತವನ್ನು ಅನುಷ್ಠಾನ ಮಾಡುವವರಿಗೆ ಜಯಪ್ರದವಾಗಿದೆ. ಇದರಲ್ಲಿ ಸಂದೇಹವಿಲ್ಲ. ಹಿಂದಕ್ಕೆ ಶ್ರೀರಾಮನು ೧೪ ವರ್ಷ ವನವಾಸಕ್ಕೆ ಹೋದಾಗ ||೭|| ಸೀತಾ ಹಾಗೂ ಲಕ್ಷ್ಮಣರೊಂದಿಗೆ ಪಂಚವಟಿಯಲ್ಲಿ ವಾಸವಾಗಿದ್ದನು. ಆ ಸಮಯದಲ್ಲಿ ಮಹಾತ್ಮನಾದ ಶ್ರೀರಾಮನ ||೮|| ಪತ್ನಿಯಾದ ತಪಸ್ವಿನೀ ಸೀತೆಯು ರಾವಣನಿಂದ ಅಪಹರಿಸಲ್ಪಟ್ಟಳು. ಪತ್ನೀವಿಯೋಗ ರೂಪವಾದ ದುಃಖದಿಂದ ಶ್ರೀರಾಮನು ಬಹು ದುಃಖಿತನಾದನು (ನಟಿಸಿದನು ). ||೯|| ವನದಲ್ಲಿ ಸಂಚರಿಸುತ್ತಿರುವಾಗ ಅಲ್ಲಿ ಮರಣೋನ್ಮುಖವಾದ ಜಟಾಯು ಪಕ್ಷಿಯಿಂದ ಸೀತೆಯ ಬಗ್ಗೆ ಕೆಲವಿಷಯವನ್ನು ಕೇಳಿ ತಿಳಿದನು. ಅನಂತರ ಅರಣ್ಯಮಧ್ಯದಲ್ಲಿ ಕಬಂಧ ಎಂಬ ಹೆಸರಿನ ಅಸುರನನ್ನು ಸಂಹರಿಸಿದನು. ||೧೦|| ಜಟಾಯುವು ಸೀತಾಮಾತೆಯ ಬಗ್ಗೆ ಎಲ್ಲ ವೃತ್ತಾಂತವನ್ನು ತಿಳಿಸಿ ಪ್ರಾಣವನ್ನು ಬಿಟ್ಟಿತು. ಮುಂದೆ ಶ್ರೀರಾಮನು ಸುಗ್ರೀವನೊಂದಿಗೆ ಸಖ್ಯವನ್ನು ಬೆಳೆಸಿದನು. ||೧೧|| ಶ್ರೀರಾಮನಿಗೆ ಸಹಾಯಮಾಡುವದಕ್ಕಾಗಿ ಸುಗ್ರೀವನು ವಾನರರ ಸೈನ್ಯವನ್ನು ಕಟ್ಟಿದನು. ಕಪಿ ಶ್ರೇಷ್ಠನಾದ ಹನುಮಂತನು ಲಂಕಾ ಪಟ್ಟಣದ ಅಶೋಕವನದಲ್ಲಿ ಸೀತೆಯನ್ನು ಕಂಡು ||೧೨|| ಶ್ರೀರಾಮನಿಂದ ಕೊಡಲ್ಪಟ್ಟಿದ್ದ ಅಂಗುಲೀಯಕವನ್ನು ಸೀತೆಗೆ ಸಮರ್ಪಿಸಿ ಮಹಾಕಾರ್ಯವನ್ನು ಮಾಡಿದನು. ಅಲ್ಲಿಂದ ತಿರುಗಿ

ರಾಮಸಂಜ್ಞಾಪನಂ ತಸ್ಯೈ ದತ್ತಂ ಕರ್ಮ ಮಹತ್ ಕೃತಮ್ |
ಸಮೇತ್ಯ ರಾಮೇಣ ಪುನಃ ಸರ್ವಂ ತತ್ರ ನಿವೇದಿತಮ್ || ೧೩ ||

ಅಥ ಶ್ರುತ್ವಾ ರಾಮಚಂದ್ರೋ ವಾಕ್ಯಂ ಚೈವ ಹನೂಮತಃ |
ಸುಗ್ರೀವಾನುಮತೇನೈವ ಪ್ರಸ್ಥಾನಂ ಸಮರೋಚಯತ್ || ೧೪ ||

ಸ ಗತ್ವಾ ವಾನರೈಃ ಸಾರ್ಧಂ ತೀರಂ ನದನದೀಪತೇಃ |
ದೃಷ್ಟ್ವಾಬ್ಧಿಂ ದುಸ್ತರಂ ರಾಮೋ ವಿಸ್ಮಿತೋಽಭೂತ್ಕಪಿಪ್ರಿಯಃ || ೧೫ ||

ಪ್ರೋತ್ಫುಲ್ಲಲೋಚನೋ ಭೂತ್ವಾ ಲಕ್ಷ್ಮಣಂ ವಾಕ್ಯಮಬ್ರವೀತ್ |
ಸೌಮಿತ್ರೇ, ಕೇನ ಪುಣ್ಯೇನ ತೀರ್ಯತೇ ವರುಣಾಲಯಃ || ೧೬ ||

ಅಗಾಧಸಲಿಲೈಃ ಪೂರ್ಣೋ ನಕ್ರೈರ್ಮೀನೈಃ ಸಮಾಕುಲಃ ಜ |
ಉಪಾಯಂ ನೈವ ಪಶ್ಯಾಮಿ ಯೇನಾಯಂ ಸುತರೋ ಭವೇತ್ || ೧೭ ||

ಲಕ್ಷ್ಮಣ ಉವಾಚ -

ಆದಿದೇವಸ್ತ್ವಮೇವಾಸಿ ಪುರಾಣಪುರುಷೋತ್ತಮ |
ಬಕದಾಲ್ಭ್ಯೋ ಮುನಿಶ್ಚಾತ್ರ ವರ್ತತೇ ದ್ವೀಪಮಧ್ಯತಃ || ೧೮ ||

ಅಸ್ಮಾತ್ ಸ್ಥಾನಾದ್ಯೋಜನಾರ್ಧಮಾಶ್ರಮಸ್ತಸ್ಯ ರಾಘವ |
ಅನೇನ ದೃಷ್ಟಾ ಬ್ರಹ್ಮಾಣೋ ಬಹವೋ ರಘುನಂದನ || ೧೯ ||

ಬಂದು ಶ್ರೀರಾಮಚಂದ್ರ ಪ್ರಭುವಿಗೆ ಅಲ್ಲಿ ನಡೆದ ವೃತ್ತಾಂತವನ್ನೆಲ್ಲ ಅರುಹಿದನು. ||೧೩|| ಹನುಮಂತನ ಮಾತುಗಳನ್ನು ಕೇಳಿ ನಂತರ ಸುಗ್ರೀವನೊಂದಿಗೆ ಆಪ್ತಾಲೋಚನೆಯನ್ನು ಮಾಡಿದ ಶ್ರೀರಾಮನು ಯುದ್ಧಕ್ಕಾಗಿ ಕಪಿಸೈನ್ಯದೊಂದಿಗೆ ಲಂಕೆಗೆ ಹೊರಟನು. ||೧೪|| ಅಸಂಖ್ಯವಾನರರೊಂದಿಗೆ ಸಮುದ್ರತೀರಕ್ಕೆ ಬಂದು ಅಲ್ಲಿ ಸಮುದ್ರವನ್ನು ದಾಟಲು ಅಸಾಧ್ಯವಾಗಿರುವದನ್ನು ಕಂಡು ಆಶ್ಚರ್ಯಚಕಿತನಾದನು.||೧೫|| ಹಾಗೂ ಅಶ್ರುಪೂರ್ಣವಾದ ನೇತ್ರಗಳುಳ್ಳವನಾಗಿ ಲಕ್ಷ್ಮಣನನ್ನು ಕುರಿತು - ಹೇ ಸೌಮಿತ್ರೇ, ಯಾವ ಪುಣ್ಯದಿಂದ ಇಂಥ ದುಸ್ತರವಾದ ಸಮುದ್ರವನ್ನು ದಾಟಬಲ್ಲೆವು? ||೧೬|| ಅಗಾಧವಾದ ನೀರಿನಿಂದ ತುಂಬಿದ ಈ ಮಹಾಸಾಗರವು ಮೊಸಳೆ, ಮೀನು ಮೊದಲಾದ ಜಲಚರ ಪ್ರಾಣಿಗಳಿಂದ ಕೂಡಿದೆ. ಇಂಥ ಸಮುದ್ರವನ್ನು ದಾಟುವ ಉಪಾಯವು ನನಗೆ ತೋಚದಾಗಿದೆ ' ಎಂದು ಹೇಳಲು ||೧೭|| ಲಕ್ಷ್ಮಣನು ನುಡಿದನು - ಹೇ ಪುರಾಣ ಪುರುಷೋತ್ತಮಾ, ನೀನೇ ಆದಿದೇವನಾಗಿರುವಾಗ ಈ ರೀತಿ ಚಿಂತಿಸುವದೇ ? ಬಕದಾಲ್ಭ್ಯ ಎಂಬ ಮುನಿಯು ಈ ದ್ವೀಪದ ಮಧ್ಯಭಾಗದಲ್ಲಿ ವಾಸಿಸಿರುತ್ತಾನೆ ||೧೮|| ಹೇ ರಾಘವ, ಇಲ್ಲಿಂದ ಅರ್ಧಯೋಜನದೂರದಲ್ಲಿ ಆ ಮುನಿಯ ಆಶ್ರಮವಿದೆ. ಹೇ ರಘುನಂದನ, ಆ ಮುನಿಯು

ತಂ ಪೃಚ್ಛ ಗತ್ವಾ ರಾಜೇಂದ್ರ ಪುರಾಣಂ ಋಷಿಪುಂಗವಮ್ |
ಇತಿ ವಾಕ್ಯಂ ತತಃ ಶ್ರುತ್ವಾ ಲಕ್ಷ್ಮಣಸ್ಯಾತಿಶೋಭನಮ್ || ೨೦ ||

ಜಗಾಮ ರಾಘವೋ ದ್ರಷ್ಟುಂ ಬಕದಾಲ್ಭ್ಯಂ ಮಹಾಮುನಿಮ್ |
ಪ್ರಣನಾಮ ಮುನಿಂ ಮೂರ್ಧ್ನಾ ರಾಮೋ ವಿಷ್ಣುಮಿವಾಪರಃ || ೨೧ ||

ಮುನಿರ್ಜ್ಞಾತ್ವಾ ತತೋ ರಾಮಂ ಪುರಾಣಪುರುಷೋತ್ತಮಮ್ |
ಕೇನಾಪಿ ಕಾರಣೇನೈವ ಪ್ರವಿಷ್ಟಂ ಮಾನುಷೀಂ ತನುಮ್ || ೨೨ ||

ಉವಾಚ ಸ ಋಷಿಸ್ತತ್ರ ಕುತೋ ರಾಮ ತವಾಗಮಃ |

ರಾಮ ಉವಾಚ -

ತ್ವತ್ಪ್ರಸಾದಾದಹೋ ವಿಪ್ರ ವರುಣಾಲಯಸನ್ನಿಧಿಮ್ || ೨೩ ||

ಆಗತೋಽಸ್ಮಿ ಸಸೈನ್ಯೋಽತ್ರ ಲಂಕಾಂ ಜೇತುಂ ಸರಾಕ್ಷಸಾಮ್ |
ಭವತಶ್ಚಾನುಕೂಲ್ಯೇನ ತೀರ್ಯತೇಽಬ್ಧಿರ್ಯಥಾ ಮಯಾ || ೨೪ ||

ತಮುಪಾಯಂ ವದ ಮುನೇ ಪ್ರಸಾದಂ ಕುರು ಸುವ್ರತ |
ಏತಸ್ಮಾತ್ಕಾರಣಾದೇವ ದ್ರಷ್ಟುಂ ತ್ವಾಹಮುಪಾಗತಃ || ೨೫ ||

---

ಅನೇಕ ಬ್ರಹ್ಮರನ್ನು ಕಂಡವನಾಗಿದ್ದಾನೆ ||೧೯|| ಹೇ ರಾಜೇಂದ್ರಾ, ಅಲ್ಲಿಗೆ ಹೋಗಿ ಪುರಾತನ ಋಷಿಪುಂಗವನನ್ನು ಈ ಬಗ್ಗೆ ವಿಚಾರಿಸು. ಲಕ್ಷ್ಮಣನ ಸಮಯೋಚಿತವಾದ ಈ ಮಾತುಗಳನ್ನಾಲಿಸಿ ||೨೦|| ಶ್ರೀರಾಮನು ಬಕದಾಲ್ಭ್ಯ ಮಹಾಮುನಿಯನ್ನು ಕಾಣಲು ಅವನ ಆಶ್ರಮಕ್ಕೆ ಹೋದನು. ಹಾಗೂ ಅಲ್ಲಿ ಕುಳಿತಿರುವ ಇನ್ನೊಬ್ಬ ವಿಷ್ಣುವಿನಂತಿದ್ದ ಮುನಿಯನ್ನು ದಂಡಪ್ರಣಾಮಪೂರ್ವಕ ನಮಸ್ಕರಿಸಿದನು. ||೨೧|| ಈಗ ತನ್ನ ಆಶ್ರಮಕ್ಕೆ ಬಂದಿರುವವನು ಯಾವುದೋ ಒಂದು ನಿಮಿತ್ತದಿಂದ ಮನುಷ್ಯದೇಹವನ್ನು ಹೊಂದಿರುವ ಪುರಾಣಪುರುಷೋತ್ತಮನಾದ ಶ್ರೀರಾಮನೆಂಬುದನ್ನರಿತು ||೨೨|| ಆ ಮುನಿಯು - ಭೋ ರಾಮಚಂದ್ರ ಪ್ರಭೋ, ನನ್ನ ಆಶ್ರಮಕ್ಕೆ ಬಂದಿರುವ ಕಾರಣವೇನು ? ಎಂದು ಪ್ರಶ್ನಿಸಲು ಆಗ ಶ್ರೀರಾಮನು - ಭೋ ಮುನಿವರ, ನಿನ್ನ ಅನುಗ್ರಹದಿಂದಲೇ ನಾನಿಂದು ||೨೩|| ರಾಕ್ಷಸರ ಲಂಕೆಯನ್ನು ಗೆಲ್ಲಬೇಕೆಂದು ಸೈನ್ಯ ಸಮೇತನಾಗಿ ಈ ಮಹಾಸಾಗರದ ತೀರಕ್ಕೆ ಬಂದು ಸೇರಿದ್ದೇನೆ. ಆದರೆ ದುಸ್ತರವಾದ ಈ ಸಾಗರವನ್ನು ನಿನ್ನ ಸಹಾಯದಿಂದಲೇ ದಾಟಬಲ್ಲೆನು||೨೪|| ಹೇ ಮುನೇ, ಈ ಮಹಾಸಾಗರವನ್ನು ದಾಟುವ ಉಪಾಯವನ್ನು ಹೇಳಿ ನಮಗೆ ಸಂತೋಷವನ್ನುಂಟು ಮಾಡು. ಹೇ ಸುವ್ರತ, ಆ ಉಪಾಯವನ್ನು ತಿಳಿಯುವದಕ್ಕಾಗಿಯೇ ನಾನಿಂದು ನಿನ್ನನ್ನು ಕಾಣಲು ಬಂದಿದ್ದೇನೆ ಎಂದು ಮುಂತಾಗಿ ನುಡಿಯಲು||೨೫|| ಬಕದಾಲ್ಭ್ಯ ಮುನಿಯು ಹೇಳಿದನು - ಹೇ ಶ್ರೀರಾಮಚಂದ್ರ ಪ್ರಭೋ,

ಮುನಿರುವಾಚ -

ಕಥಯಿಷ್ಯಾಮ್ಯಹಂ ರಾಮ ವ್ರತಾನಾಂ ವ್ರತಮುತ್ತಮಮ್ |
ಕೃತೇನ ಯೇನ ಸಹಸಾ ವಿಜಯಸ್ತೇ ಭವಿಷ್ಯತಿ || ೨೬ ||

ಲಂಕಾಂ ಜಿತ್ವಾ ರಾಕ್ಷಸಾಂಶ್ಚ ದೀರ್ಘಾಂ ಕೀರ್ತಿಮವಾಪ್ಸ್ಯಸಿ |
ಏಕಾಗ್ರಮಾನಸೋ ಭೂತ್ವಾ ವ್ರತಮೇತತ್ಸಮಾಚರ || ೨೭ ||

ಫಾಲ್ಗುನಸ್ಯಾಸಿತೇ ಪಕ್ಷೇ ವಿಜಯೈಕಾದಶೀ ಭವೇತ್ |
ತಸ್ಯಾ ವ್ರತೇ ಕೃತೇ ರಾಮ ವಿಜಯಸ್ತೇ ಭವಿಷ್ಯತಿ || ೨೮ ||

ನಿಃಸಂಶಯಂ ಸಮುದ್ರಂ ಚ ತರಿಷ್ಯಸಿ ಸವಾನರಃ |
ವಿಧಿಶ್ಚ ಶ್ರೂಯತಾಂ ರಾಮ ವ್ರತಸ್ಯಾಸ್ಯ ಫಲಪ್ರದಃ || ೨೯ ||

ದಶಮೀ ದಿವಸೇ ಪ್ರಾಪ್ತೇ ಕುಂಭಮೇಕಂ ಚ ಕಾರಯೇತ್ |
ಹೇಮಂ ವಾ ರಾಜತಂ ವಾಪಿ ತಾಮ್ರಂ ವಾಽ ಪ್ಯಥ ಮೃಣ್ಮಯಮ್ || ೩೦ ||

ಸ್ಥಾಪಯೇತ್ ಸ್ಥಂಡಿಲೇ ಕುಂಭಂ ಜಲಪೂರ್ಣಂ ಸಪಲ್ಲವಮ್ |
ಸಪ್ತಧಾನ್ಯಾನ್ಯಧಸ್ತಸ್ಯ ಯವಾನುಪರಿ ವಿನ್ಯಸೇತ್ || ೩೧ ||

ತಸ್ಯೋಪರಿ ನ್ಯಸೇದೇವಂ ಹೈಮಂ ನಾರಾಯಣಂ ಪ್ರಭುಮ್ |
ಏಕಾದಶೀದಿನೇ ಪ್ರಾಪ್ತೇ ಪ್ರಾತಃ ಸ್ನಾನಂ ಸಮಾಚರೇತ್ || ೩೨ ||

---

ವ್ರತಗಳಲ್ಲಿ ಶ್ರೇಷ್ಠವಾದ ಒಂದು ವ್ರತವನ್ನು ನಿನಗೆ ತಿಳಿಸುವೆನು ಆ ವ್ರತವನ್ನು ಆಚರಿಸಿದರೆ ನಿನಗೆ ನಿಶ್ಚಯವಾಗಿ ವಿಜಯಪ್ರಾಪ್ತಿಯಾಗುವದು ||೨೬|| ಮತ್ತು ಲಂಕೆಯನ್ನು ಹಾಗೂ ಅಲ್ಲಿರುವ ರಾಕ್ಷಸರನ್ನೆಲ್ಲ ಗೆದ್ದು ಅತುಲವಾದ ಕೀರ್ತಿಯನ್ನು ಹೊಂದುವಿ. ಏಕಾಗ್ರಚಿತ್ತನಾಗಿ ನಾನು ಹೇಳುವ ವ್ರತವನ್ನು ಆಚರಿಸು ||೨೭|| ಫಾಲ್ಗುಣಮಾಸದ ಕೃಷ್ಣಪಕ್ಷದಲ್ಲಿ 'ವಿಜಯಾ' ಎಂಬ ಹೆಸರಿನ ಏಕಾದಶಿಯು ಬರುವದು. ಆ ಏಕಾದಶೀ ವ್ರತವನ್ನು ಆಚರಿಸಿದರೆ ಖಂಡಿತವಾಗಿ ನಿನಗೆ ವಿಜಯವಾಗುವದು ||೨೮|| ನಿಸ್ಸಂಶಯವಾಗಿ ನೀನು ಸಕಲವಾನರರೊಂದಿಗೆ ಈ ಸಮುದ್ರವನ್ನು ಅನಾಯಾಸವಾಗಿ ದಾಟುವಿ. ಹೇ ಶ್ರೀರಾಮ, ಆ ವ್ರತದ ಫಲಪ್ರದವಾದ ವಿಧಿಯನ್ನು ತಿಳಿಸುವೆನು ಕೇಳು ||೨೯|| ಫಾಲ್ಗುಣ ಕೃಷ್ಣಪಕ್ಷದ ದಶಮಿಯ ದಿನ ಒಂದು ಕುಂಭವನ್ನು ಸುವರ್ಣದ್ದಾಗಲೀ, ರಜತದ್ದಾಗಲೀ, ತಾಮ್ರದ್ದಾಗಲೀ ಅಥವಾ ಮಣ್ಣಿನದೇ ಆಗಲಿ ಸಿದ್ಧಪಡಿಸಿ ||೩೦|| ಅದನ್ನು ನೀರಿನಿಂದ ತುಂಬಿ ಮಾವಿನ ಚಿಗುರೆಲೆಗಳಿಂದ ಅಲಂಕರಿಸಿ ಕೆಳಗೆ ಸಪ್ತಧಾನ್ಯಗಳನ್ನು ಹಾಕಿದ ಸ್ಥಂಡಿಲದ ಮೇಲೆ ಸ್ಥಾಪಿಸಬೇಕು. ಕುಂಭದ ಸುತ್ತಲೂ ಜವೆಗೋದಿಗಳನ್ನು ಹಾಕಬೇಕು ||೩೧|| ಆ ಕುಂಭದ ಮೇಲೆ ಒಂದು ತಟ್ಟೆಯನ್ನಿಟ್ಟು ಅದರಲ್ಲಿ ಶ್ರೀ ನಾರಾಯಣನ ಸುವರ್ಣಪ್ರತಿಮೆಯನ್ನು

ನಿಶ್ಚಲೇ ಸ್ಥಾಪಿತೇ ಕುಂಭೇ ಗಂಧಮಾಲ್ಯಾನುಲೇಪಿತೇ |
ಗಂಧೈರ್ಧೂಪೈಸ್ತಥಾ ದೀಪೈರ್ನೈವೇದ್ಯೈರ್ವಿವಿಧೈರಪಿ || ೩೩ ||

ದಾಡಿಮೈರ್ನಾರಿಕೇಲೈಶ್ಚ ಪೂಜಯೇಚ್ಚ ವಿಶೇಷತಃ |
ಕುಂಭಾಗ್ರೇ ತದ್ದಿನಂ ರಾಮ ನೇತವ್ಯಂ ಭಕ್ತಿಭಾವತಃ || ೩೪ ||

ರಾತ್ರೌ ಜಾಗರಣಂ ಚೈವ ತಸ್ಯಾಗ್ರೇ ಕಾರಯೇದ್ಬುಧಃ |
ದ್ವಾದಶೀದಿವಸೇ ಪ್ರಾಪ್ತೇ ಮಾರ್ತಾಂಡಸ್ಯೋದಯೇ ಸತಿ || ೩೫ ||

ನೀತ್ವಾ ಕುಂಭಂ ಜಲೋದ್ದೇಶೇ ನದ್ಯಾಂ ಪ್ರಸ್ರವಣೇ ತಥಾ |
ತಡಾಗೇ ಸ್ಥಾಪಯಿತ್ವಾ ವಾ ಪೂಜಯಿತ್ವಾ ಯಥಾವಿಧಿ || ೩೬ ||

ದದ್ಯಾತ್ಸದೈವತಂ ಕುಂಭಂ ಬ್ರಾಹ್ಮಣೇ ವೇದಪಾರಗೇ |
ಕುಂಭೇನ ಸಹ ರಾಜೇಂದ್ರ ಮಹಾದಾನಾನಿ ದಾಪಯೇತ್ || ೩೭ ||

ಅನೇನ ವಿಧಿನಾ ರಾಮ ಯೂಥಪೈಃ ಸಹ ಸಂಗತಃ |
ಕುರು ವ್ರತಂ ಪ್ರಯತ್ನೇನ ವಿಜಯಸ್ತೇ ಭವಿಷ್ಯತಿ || ೩೮ ||

ಇತಿ ಶ್ರುತ್ವಾ ವಚೋ ರಾಮೋ ಯಥೋಕ್ತಮಕರೋದ್ವ್ರತಮ್ |
ಕೃತೇ ವ್ರತೇ ಸ ವಿಜಯೀ ಬಭೂವ ರಘುನಂದನಃ || ೩೯ ||

---

ಇಡಬೇಕು. ಮರುದಿನ ಏಕಾದಶೀ ಪ್ರಾತಃಕಾಲ ಪ್ರಾತರ್ವಿಧಿಗಳನ್ನು ಮುಗಿಸಿ ಸ್ನಾನಾಹ್ನಿಕಗಳನ್ನು ಮಾಡಬೇಕು. ಅನಂತರ ಗಂಧವನ್ನು ಹಚ್ಚಿ ಪುಷ್ಪಮಾಲೆಗಳಿಂದ ಅಲಂಕರಿಸಿ ಕುಂಭವನ್ನು ಅಲುಗಾಡದಂತೆ ಸ್ಥಾಪಿಸಿ ಧೂಪ ದೀಪಾರತಿಗಳಿಂದ ಪೂಜಿಸಬೇಕು. ವಿವಿಧ ಪದಾರ್ಥಗಳನ್ನು ನಿವೇದಿಸಬೇಕು. ||೩೩|| ವಿಶೇಷವಾಗಿ ದಾಳಿಂಬ ಮತ್ತು ತೆಂಗಿನಕಾಯಿ ಫಲಗಳನ್ನು ನಿವೇದಿಸಿ ಪೂಜಿಸಬೇಕು. ಹೇ ಶ್ರೀರಾಮಾ, ಕುಂಭದ ಎದುರಿನಲ್ಲಿ ಆ ದಿನದ ಹಗಲನ್ನು ಭಕ್ತಿಭಾವದಿಂದ ಕಳೆದು ||೩೪|| ರಾತ್ರಿ ಜಾಗರಣೆಯನ್ನು ಮಾಡಬೇಕು. ದ್ವಾದಶೀ ದಿನವು ಬರಲು ಸೂರ್ಯೋದಯಕ್ಕೆ ||೩೫|| ನದೀ, ಸರೋವರ ಅಥವಾ ಯಾವುದಾದರೊಂದು ಜಲಾಶಯವಿರುವಲ್ಲಿ ಆ ಕುಂಭವನ್ನು ಒಯ್ದು ಅಲ್ಲಿ ಸ್ಥಾಪಿಸಿ ಮತ್ತೆ ವಿಧಿಪೂರ್ವಕ ಪೂಜಿಸಬೇಕು ||೩೬|| ನಂತರ ಕುಂಭವನ್ನು ವಿಸರ್ಜಿಸಿ ಶ್ರೀನಾರಾಯಣನ ಪ್ರತಿ ಮಾಸಹಿತವಾದ ಕುಂಭವನ್ನು ವೇದ ಪಂಡಿತನಾದ ಯೋಗ್ಯ ಬ್ರಾಹ್ಮಣನಿಗೆ ದಾನಮಾಡಬೇಕು. ಈ ಕುಂಭದೊಂದಿಗೆ ಇತರ ಮಹಾದಾನಗಳನ್ನು ಕೊಡಬೇಕು ||೩೭|| ಭೋ ರಘುಕುಲತಿಲಕ ಶ್ರೀರಾಮಾ, ನಿನ್ನ ಸಂಗಡಿಗರಿಂದ ಕೂಡಿಕೊಂಡು ಇದುವರೆಗೆ ತಿಳಿಸಿದ ವಿಧಾನದಿಂದ ವಿಜಯಾವ್ರತವನ್ನು ಆಚರಿಸಿದಿಯಾದರೆ ನಿನಗೆ ನಿಶ್ಚಯವಾಗಿ ವಿಜಯವಾಗುವದು ||೩೮|| ಮುನಿಯ ಈ ವಚನಗಳನ್ನು ಕೇಳಿದ ಶ್ರೀರಾಮನು

ಅನೇನ ವಿಧಿನಾ ರಾಜನ್ ಯೇ ಕುರ್ವಂತಿ ನರಾ ವ್ರತಮ್ |
ಇಹ ಲೋಕೇ ಜಯಸ್ತೇಷಾಂ ಪರಲೋಕೇ ತಥಾಽಕ್ಷಯಃ || ೪೦ ||

ಏತಸ್ಮಾತ್ಕಾರಣಾತ್ಪುತ್ರ ಕರ್ತವ್ಯಂ ವಿಜಯಾವ್ರತಮ್ |
ವಿಜಯಾಯಾಶ್ಚ ಮಾಹಾತ್ಮ್ಯಂ ಸರ್ವಕಿಲ್ಬಿಷನಾಶನಮ್ |
ಪಠನಾಚ್ಛ್ರವಣಾತ್ತಸ್ಯ ವಾಜಪೇಯಫಲಂ ಲಭೇತ್ || ೪೧ ||

|| ಇತಿ ಶ್ರೀ ಸ್ಕಂದಪುರಾಣೇ ಫಾಲ್ಗುನ ಕೃಷ್ಣ ವಿಜಯೈಕಾದಶೀ ವ್ರತಮಾಹಾತ್ಮ್ಯಂ ಸಂಪೂರ್ಣಮ್ || ೭ ||

ಯಥೋಕ್ತವಾದ ವ್ರತವನ್ನು ವಿಧಿಪೂರ್ವಕ ಆಚರಿಸಿದನು. ವ್ರತಾಚರಣೆಯಿಂದ ರಘುನಂದನನು ಮುಂದೆ ಸರ್ವತ್ರ ವಿಜಯಿಯಾಗಿ ವಿರಾಜಿಸಿದನು. ||೩೯|| ಆದ್ದರಿಂದ ಹೇ ಯುಧಿಷ್ಠಿರಾ, ಈ ವಿಧಾನದಿಂದ ಯಾರು ವಿಜಯಾವ್ರತವನ್ನು ಆಚರಿಸುವರೋ ಇಹಲೋಕದಲ್ಲಿ ವಿಜಯವನ್ನೂ ಪರಲೋಕದಲ್ಲಿ ಅಕ್ಷಯವಾದ ಸ್ಥಾನವನ್ನೂ ಹೊಂದುವರು. ಈ ಕಾರಣದಿಂದ ವಿಜಯಾವ್ರತವನ್ನು ಆಚರಿಸಬೇಕು. ಈ ವಿಜಯಾವ್ರತದ ಮಹಾತ್ಮೆಯು ಸಕಲಪಾಪ ಪರಿಹಾರಕವಾಗಿದೆ. ಈ ಮಹಾತ್ಮೆಯ ಪಠಣ ಹಾಗೂ ಶ್ರವಣದಿಂದ ವಾಜಪೇಯ ಯಾಗದ ಫಲವು ಪ್ರಾಪ್ತವಾಗುವದು ||೪೧||

|| ಇಲ್ಲಿಗೆ ಶ್ರೀ ಸ್ಕಂದ ಪುರಾಣದಲ್ಲಿಯ ಫಾಲ್ಗುಣ ಕೃಷ್ಣಪಕ್ಷದ `ವಿಜಯಾ' ಎಂಬ ಏಕಾದಶೀ ವ್ರತದ ಮಹಾತ್ಮೆಯು ಸಮಾಪ್ತವಾಯಿತು ||

|| ಶ್ರೀ ಕೃಷ್ಣಾರ್ಪಣಮಸ್ತು ||

# ಫಾಲ್ಗುನ ಶುಕ್ಲೈಕಾದಶೀ ವ್ರತ ಕಥಾ

**ಮಾಂಧಾತೋವಾಚ -**

**ವದ ಬ್ರಹ್ಮನ್ ಮಹಾಭಾಗ ಯೇನ ಶ್ರೇಯೋ ಭವೇನ್ಮಮ |**
**ಈದೃಗ್ವ್ರತಂ ಬ್ರಹ್ಮಯೋನೇ ತೇಽನುಕಂಪಾಸ್ತಿ ಚೇನ್ಮಯಿ ||೧||**

**ವಸಿಷ್ಠ ಉವಾಚ -**

**ಸರಹಸ್ಯಂ ಸೇತಿಹಾಸಂ ವ್ರತಾನಾಮುತ್ತಮಂ ವ್ರತಮ್ |**
**ಕಥಯಾಮ್ಯಧುನಾ ತುಭ್ಯಂ ಸರ್ವಭೂತಫಲಪ್ರದಮ್ ||೨||**

**ಆಮಲಕ್ಯಾ ವ್ರತಂ ರಾಜನ್ ಮಹಾಪಾತಕನಾಶನಮ್ |**
**ಮೋಕ್ಷದಂ ಸರ್ವಲೋಕಾನಾಂ ಗೋಸಹಸ್ರಫಲಪ್ರದಮ್ ||೩||**

**ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ |**
**ಯಥಾ ಮುಕ್ತಿಮನುಪ್ರಾಪ್ತೋ ವ್ಯಾಧೋ ಹಿಂಸಾಸಮನ್ವಿತಃ ||೪||**

**ವೈದಿಶಂ ನಾಮ ನಗರಂ ಹೃಷ್ಟಪುಷ್ಟಜನಾಕುಲಮ್ |**
**ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈಶ್ಚ ಸಮಲಂಕೃತಮ್ ||೫||**

---

ವಸಿಷ್ಠ ಮಹರ್ಷಿಗಳನ್ನು ಕುರಿತು ಮಾಂಧಾತಾ ರಾಜನು - ``ಭೋ ಬ್ರಹ್ಮಜ್ಞಾನಿಗಳಾದ, ಬ್ರಹ್ಮದೇವರ ಮಾನಸಪುತ್ರರಾದ ವಸಿಷ್ಠ ಮಹಾಭಾಗರೇ, ತಾವು ನನ್ನಲ್ಲಿ ದಯತೋರುವುದಾದರೆ, ಯಾವುದರಿಂದ ನನಗೆ ಶ್ರೇಯಸ್ಸಾಗುವದೋ ಅಂಥ ಒಂದು ವ್ರತವನ್ನು ಕುರಿತು ತಿಳಿಸಿರಿ' ಎಂದು ಪ್ರಾರ್ಥಿಸಲು ||೧|| ವಸಿಷ್ಠರು ಹೇಳಿದರು - ಹೇ ಮಹಾರಾಜಾ ; ಅತಿರಹಸ್ಯವಾದ, ಸಕಲ ಪ್ರಾಣಿಗಳಿಗೆ ಸತ್ಫಲವನ್ನು ಕೊಡುವ, ವ್ರತಗಳಲ್ಲಿಯೇ ಶ್ರೇಷ್ಠವಾದ ಒಂದು ವ್ರತದ ಬಗ್ಗೆ ಇತಿಹಾಸ ಪೂರ್ವಕ ನಿನಗೆ ತಿಳಿಸುವೆನು ಕೇಳು ||೨|| ಆಮಲಕಿಯ ವ್ರತವಾದ ಇದು ಸರ್ವಪಾಪಗಳನ್ನು ನಾಶಮಾಡುವಂಥದೂ, ಮೋಕ್ಷಪ್ರದವೂ, ಸಕಲ ಜನರಿಗೆ ಸಾವಿರಗೋವುಗಳ ದಾನದಿಂದ ಬರುವಷ್ಟು ಫಲಪ್ರದವೂ ಆಗಿದೆ. ||೩|| ಈ ವ್ರತದ ಮಹಿಮೆಯನ್ನು ಹೇಳುವಾಗ ಹಿಂಸಾಪರಾಯಣನಾದ ಒಬ್ಬ ವ್ಯಾಧನು ಮೋಕ್ಷವನ್ನು ಹೊಂದಿದ ಒಂದು ಪುರಾತನ ಇತಿಹಾಸ ಕಥೆಯು ಉದಾಹರಿಸಲ್ಪಡುತ್ತದೆ ||೪|| ಹೃಷ್ಟ ಪುಷ್ಟರಾದ ಮನುಷ್ಯರಿಂದ ಕೂಡಿದ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗೂ ಶೂದ್ರವರ್ಣಗಳ ಜನರಿಂದ ಒಂದಾಗಿ ಶೋಭಿಸುತ್ತಿದ್ದ ವೈದಿಶ ಎಂಬ ಹೆಸರಿನ ಒಂದು ನಗರವಿದ್ದಿತು ||೫|| ಹೇ ಮಾಂಧಾತರಾಜಾ, ಸದಾ ವೇದಘೋಷಗಳಿಂದ ತುಂಬಿದ ಮನೋಹಾರಿಯಾದ ಆ ಶ್ರೇಷ್ಠ ನಗರದಲ್ಲಿ ನಾಸ್ತಿಕರಾಗಲೀ,

ರುಚಿರಂ ನೃಪಶಾರ್ದೂಲ ಬ್ರಹ್ಮಘೋಷನಿನಾದಿತಮ್ |
ನ ನಾಸ್ತಿಕಾ ನ ದುರ್ವೃತ್ತಾಸ್ತಸ್ಮಿನ್ ಪುರವರೇ ಸದಾ || ೬ ||

ತತ್ರ ಸೋಮಾನ್ವಯೇ ರಾಜಾ ವಿಖ್ಯಾತಃ ಪಾಶಬಿಂದುಕಃ |
ರಾಜಾ ಚೈತ್ರರಥೋ ನಾಮ ಧರ್ಮಾತ್ಮಾ ಸತ್ಯಸಂಗರಃ || ೭ ||

ನಾಗಾಯುತಬಲಃ ಶ್ರೀಮಾನ್ ಶಸ್ತ್ರಶಾಸ್ತ್ರಾರ್ಥಪಾರಗಃ |
ತಸ್ಮಿನ್ ಶಾಸತಿ ಧರ್ಮಜ್ಞೇ ಧರ್ಮಾತ್ಮನಿ ಧರಾಂ ಪ್ರಭೋ || ೮ ||

ಕೃಪಣೋ ನೈವ ಕುತ್ರಾಪಿ ದೃಶ್ಯತೇ ನೈವ ನಿರ್ಧನಃ |
ಸುಕಾಲಃ ಕ್ಷೇಮಮಾರೋಗ್ಯಂ ನ ದುರ್ಭಿಕ್ಷಂ ನ ಚೇತಯಃ || ೯ ||

ವಿಷ್ಣುಭಕ್ತಿರತಾ ಲೋಕಾಸ್ತಸ್ಮಿನ್ ಪುರವರೇ ಸದಾ |
ಹರಪೂಜಾರತಾಶ್ಚೈವ ರಾಜಾ ಚಾಪಿ ವಿಶೇಷತಃ || ೧೦ ||

ನ ಕೃಷ್ಣಾಯಾಂ ನ ಶುಕ್ಲಾಯಾಂ ದ್ವಾದಶ್ಯಾಂ ಭುಂಜತೇ ಜನಾಃ |
ಸರ್ವಧರ್ಮಾನ್ ಪರಿತ್ಯಜ್ಯ ಹರಿಭಕ್ತಿಪರಾಯಣಾಃ || ೧೧ ||

ಏವಂ ಸಂವತ್ಸರಾ ಜಗ್ಮುಃ ಬಹವೋ ರಾಜಸತ್ತಮ |
ಜನಸ್ಯ ಸೌಖ್ಯಯುಕ್ತಸ್ಯ ಹರಿಭಕ್ತಿರತಸ್ಯ ಚ || ೧೨ ||

---

ದುರಾಚಾರಿಗಳಾಗಲೀ ಯಾರೂ ಇರಲಿಲ್ಲ. ||೬|| ಇಂಥ ನಗರದಲ್ಲಿ ಚಂದ್ರವಂಶದ ಪಾಶಬಿಂದುಕ ರಾಜನ ವಂಶದವನಾದ ಚೈತ್ರರಥ ಎಂಬ ಹೆಸರಿನ ಧರ್ಮಾತ್ಮನೂ, ಸತ್ಯವ್ರತನೂ ಆದ ಒಬ್ಬ ರಾಜನಿದ್ದನು. ||೭|| ಹತ್ತು ಸಹಸ್ರ ಆನೆಗಳ ಬಲವುಳ್ಳವನೂ ಸಕಲಸಂಪತ್ತಿನಿಂದ ಯುಕ್ತನೂ, ಶಸ್ತ್ರ ಶಾಸ್ತ್ರಾರ್ಥಗಳಲ್ಲಿ ಪಾರಂಗತನೂ, ಧರ್ಮಜ್ಞನೂ, ಧರ್ಮಾತ್ಮನೂ ಆದ ಆ ರಾಜನು ರಾಜ್ಯಭಾರ ಮಾಡುತ್ತಿರುವಾಗ ||೮|| ಒಬ್ಬನಾದರೂ ನಿರ್ಧನನಾಗಲೀ , ಕೃಪಣನಾಗಲೀ ( ದೀನ, ದರಿದ್ರ ) ಎಲ್ಲಿಯೂ ಕಾಣಬರುತ್ತಿರಲಿಲ್ಲ. ಆ ರಾಜ್ಯದಲ್ಲೆಲ್ಲ ಸದಾ ಸುಕಾಲವೂ, ಕ್ಷೇಮವೂ, ಆರೋಗ್ಯವೂ ಇದ್ದು, ದುರ್ಭಿಕ್ಷವಾಗಲೀ, ಇತರ ಪೀಡೆಗಳಾಗಲೀ ಯಾವವೂ ಉಂಟಾಗಿರಲಿಲ್ಲ ||೯|| ಶ್ರೇಷ್ಠವಾದ ಆ ಪುರದಲ್ಲಿರುವವರೆಲ್ಲರೂ ಸದಾ ವಿಷ್ಣುಭಕ್ತಿರತರೂ ಹಾಗೂ ಈಶ್ವರ ಪೂಜಾರತರೂ ಆಗಿದ್ದರು. ವೈಷ್ಣವಾಗ್ರೇಸರನಾಗಿದ್ದ ರಾಜನೂ ಕೂಡ ಹರಿಹರರನ್ನು ತಾರತಮ್ಯದಿಂದ ವಿಶೇಷವಾಗಿ ಪೂಜಿಸುತ್ತಿದ್ದನು. ||೧೦|| ಪುರಜನರು ಕೃಷ್ಣ ಹಾಗೂ ಶುಕ್ಲಪಕ್ಷಗಳ ಏಕಾದಶೀ ದಿನ ಎಂದೂ ಭೋಜನ ಮಾಡುತ್ತಿರಲಿಲ್ಲ. ಇತರೆಲ್ಲ ಧರ್ಮಗಳನ್ನು ಪರಿತ್ಯಜಿಸಿದ ಜನರು ಸದಾ ಹರಿಭಕ್ತಿಪರಾಯಣರಾಗಿದ್ದರು ||೧೧|| ಹೇ ರಾಜಶ್ರೇಷ್ಠನೇ, ಹರಿಭಕ್ತರಾಗಿದ್ದ ಪುರಜನರು ಈ ರೀತಿ ಸುಖದಿಂದ ಅನೇಕ ಸಂವತ್ಸರಗಳನ್ನು ಕಳೆದರು. ||೧೨|| ಒಮ್ಮೆ

ಅಥ ಕಾಲೇನ ಸಂಪ್ರಾಪ್ತಾ ದ್ವಾದಶೀ ಪುಣ್ಯಸಂಯುತಾ |
ಫಾಲ್ಗುನಸ್ಯ ಸಿತೇ ಪಕ್ಷೇ ನಾಮ್ನಾ ಹ್ಯಾಮಲಕೀ ಸ್ಮೃತಾ || ೧೩ ||

ತಾಮವಾಪ್ಯ ಜನಾಃ ಸರ್ವೇ ಬಾಲಕಾಃ ಸ್ಥವಿರಾ ನೃಪ |
ನಿಯಮಂ ಚೋಪವಾಸಂ ಚ ಸರ್ವೇ ಚಕ್ರುರ್ನರಾ ವಿಭೋ || ೧೪ ||

ಮಹಾಫಲಂ ವ್ರತಂ ಜ್ಞಾತ್ವಾ ಸ್ನಾನಂ ಕೃತ್ವಾ ನದೀಜಲೇ |
ತತ್ರ ದೇವಾಲಯೇ ರಾಜಾ ಲೋಕಯುಕ್ತೋ ಮಹಾಪ್ರಭುಃ || ೧೫ ||

ಪೂರ್ಣಕುಂಭಮವಸ್ಥಾಪ್ಯ ಛತ್ರೋಪಾನಹಸಂಯುತಮ್ |
ಪಂಚರತ್ನಸಮಾಯುಕ್ತಂ ದಿವ್ಯಗಂಧಾದಿವಾಸಿತಮ್ || ೧೬ ||

ದೀಪಮಾಲಾನ್ವಿತಾ ಚೈವ ಜಾಮದಗ್ನ್ಯಸಮನ್ವಿತಮ್ |
ಪೂಜಯಾಮಾಸುರವ್ಯಗ್ರೋ ಧಾತ್ರೀಂ ಚ ಮುನಿಭಿರ್ಜನಾಃ || ೧೭ ||

ಜಾಮದಗ್ನ್ಯ ನಮಸ್ತೇऽಸ್ತು ರೇಣುಕಾನಂದವರ್ಧನ |
ಆಮಲಕೀಕೃತಚ್ಛಾಯ ಭುಕ್ತಿಮುಕ್ತಿವರಪ್ರದ || ೧೮ ||

ಧಾತ್ರಿ ಧಾತೃಸಮುದ್ಭೂತೇ ಸರ್ವಪಾತಕನಾಶಿನಿ |
ಆಮಲಕಿ ನಮಸ್ತುಭ್ಯಂ ಗೃಹಾಣಾರ್ಘ್ಯೋದಕಂ ಮಮ || ೧೯ ||

ಪ್ರತಿವರ್ಷದಂತೆ ಫಾಲ್ಗುಣಮಾಸದ ಶುಕ್ಲಪಕ್ಷದಲ್ಲಿ ಆಮಲಕೀ ಎಂದು ಪ್ರಸಿದ್ಧವಾದ ಪುಣ್ಯಫಲಪ್ರದವಾದ ಏಕಾದಶಿಯು ಪ್ರಾಪ್ತವಾಯಿತು. ||೧೩|| ಅಂದಿನ ದಿನ ಪುರದಲ್ಲಿರುವ ಆಬಾಲವೃದ್ಧ ಜನರೆಲ್ಲರೂ ನಿಯಮವನ್ನು ಹಾಗೂ ಉಪವಾಸ ವ್ರತವನ್ನು ಮಾಡಿದರು. ||೧೪|| ಆಮಲಕೀ ಎಂಬ ವ್ರತವು ಅತ್ಯಂತ ಶ್ರೇಷ್ಠವಾಗಿರುವದನ್ನು ಮತ್ತು ಶೀಘ್ರ ಮಹಾಫಲಪ್ರದವಾಗಿರುವವದನ್ನು ಅರಿತ ರಾಜನು ಅಂದಿನ ದಿನ ಪ್ರಾತಃ ಕಾಲದಲ್ಲಿ ಪುರಜನರಿಂದ ಸಹಿತನಾಗಿ ನದೀ ಜಲದಲ್ಲಿ ಸ್ನಾನಮಾಡಿ ನಂತರ ತೀರದಲ್ಲಿರುವ ವಿಷ್ಣು ಮಂದಿರಕ್ಕೆ ಹೋದನು. ||೧೫|| ದೇವಾಲಯದಲ್ಲಿ ಛತ್ರ ಉಪಾನಹಗಳಿಂದ ಕೂಡಿದ, ಪಂಚ ರತ್ನಗಳಿಂದ ಯುಕ್ತವಾದ ದಿವ್ಯವಾದ ಗಂಧಾದಿಗಳಿಂದ ಸುವಾಸಿತವಾದ, ||೧೬|| ದೀಪ, ಮಾಲೆಗಳಿಂದ ಅಲಂಕೃತವಾದ, ಜಾಮದಗ್ನಿ ಋಷಿಗಳಿಂದ (ಪರಶುರಾಮ ಪ್ರತಿಮೆ) ಯುಕ್ತವಾದ ಜಲಪೂರ್ಣಕುಂಭವನ್ನು ಸ್ಥಾಪಿಸಿ ಏಕಾಗ್ರಚಿತ್ತದಿಂದ ಪೂರ್ಣಕುಂಭವನ್ನು ಮತ್ತು ಧಾತ್ರಿಯನ್ನು ಪೂಜಿಸಿದನು. ಅನೇಕ ಮುನಿಗಳಿಂದ ಕೂಡಿದ ಪುರಜನರೂ ಪೂಜಿಸಿದರು .||೧೭|| ಮಾತೆ ರೇಣುಕಾದೇವಿಗೆ ಹೆಚ್ಚಿನ ಸಂತೋಷವನ್ನುಂಟುಮಾಡುವ, ಆಮಲಕೀ ವೃಕ್ಷದ ಛಾಯೆಯಲ್ಲಿ ಸುಖವಾಗಿ ಪ್ರತಿಷ್ಠಿತನಾಗಿರುವ, ಭುಕ್ತಿ ಮುಕ್ತಿ ವರಗಳನ್ನು ದಯಪಾಲಿಸುವ ಹೇ ಜಮದಗ್ನಿ ಮುನಿಶ್ರೇಷ್ಠರೇ ನಿಮಗೆ ನಮಸ್ಕರಿಸುತ್ತೇನೆ. ||೧೮|| ಚತುರ್ಮುಖ ಬ್ರಹ್ಮನಿಂದ ಉತ್ಪನ್ನಳಾದ, ಸಕಲಪಾಪಗಳನ್ನು ನಾಶಮಾಡುವ, ಹೇ ಆಮಲಕೀ

ಧಾತ್ರಿ ಬ್ರಹ್ಮಸ್ವರೂಪಾಸಿ ತ್ವಂ ತು ರಾಮೇಣ ಪೂಜಿತಾ |
ಪ್ರದಕ್ಷಿಣಾವಿಧಾನೇನ ಸರ್ವಪಾಪಹರಾ ಭವ || ೨೦ ||

ತತ್ರ ಜಾಗರಣಂ ಚಕ್ರುರ್ಜನಾಃ ಸರ್ವೇ ಸ್ವಭಕ್ತಿತಃ |
ಏತಸ್ಮಿನ್ನೇವ ಕಾಲೇ ತು ವ್ಯಾಧಸ್ತತ್ರ ಸಮಾಗತಃ || ೨೧ ||

ಕ್ಷುಧಾಶ್ರಮಪರಿವ್ಯಾಪ್ತೋ ಮಹಾಭಾರೇಣ ಪೀಡಿತಃ |
ಕುಟುಂಬಾರ್ಥೇ ಜೀವಘಾತೀ ಸರ್ವಧರ್ಮಬಹಿಷ್ಕೃತಃ || ೨೨ ||

ತತ್ರ ಜಾಗರಣಂ ದೃಷ್ಟ್ವಾಽಽಮಲಕ್ಯಾಂ ಹಿ ಕ್ಷುಧಾನ್ವಿತಃ |
ದೀಪಮಾಲಾಕುಲಂ ದೃಷ್ಟ್ವಾ ತತ್ರೈವ ನಿಷಸಾದ ಸಃ || ೨೩ ||

ಕಿಮೇತದಿತಿ ಸಂಚಿಂತ್ಯ ಪ್ರಾಪ್ತೋ ವಿಸ್ಮಯತಾಂ ಭೃಶಮ್ |
ದದರ್ಶ ಕುಂಭಂ ತತ್ರಸ್ಥಂ ದೇವಂ ದಾಮೋದರಂ ತಥಾ || ೨೪ ||

ದದರ್ಶಾಮಲಕೀವೃಕ್ಷಂ ತತ್ರಸ್ಥಾಂಶ್ಚೈವ ದೀಪಕಾನ್ |
ವೈಷ್ಣವಂ ಚ ತಥಾಽಽಖ್ಯಾನಂ ಶುಶ್ರಾವ ಪಠತಾಂ ನೃಣಾಮ್ || ೨೫ ||

---

ಧಾತ್ರಿ ದೇವಿಯೇ ನಿನಗೆ ನಮಸ್ಕಾರವು. ನಾನು ಸಲ್ಲಿಸುತ್ತಿರುವ ಈ ಅರ್ಘ್ಯವನ್ನು ಸ್ವೀಕರಿಸು ||೧೯|| ಹೇ ಧಾತ್ರಿ, ನೀನು ಜ್ಞಾನರೂಪಿಣಿಯಾಗಿರುವಿ, ಹಿಂದಕ್ಕೆ ನೀನು ಶ್ರೀರಾಮಚಂದ್ರನಿಂದ ಪೂಜಿಸಲ್ಪಟ್ಟಿರುವಿ, ನಿನಗೆ ನಾವು ಮಾಡುತ್ತಿರುವ ಈ ಪ್ರದಕ್ಷಿಣಾ ನಮಸ್ಕಾರಾದಿಗಳಿಂದ ಸಂತುಷ್ಟಳಾಗಿ ನಮ್ಮ ಪಾಪಗಳನ್ನೆಲ್ಲ ನಾಶಗೊಳಿಸು ||೨೦|| ಈ ರೀತಿ ಪ್ರಾರ್ಥಿಸಿ ಜನರೆಲ್ಲ ಆ ರಾತ್ರಿ ಭಕ್ತಿಯಿಂದ ಜಾಗರಣೆ ಮಾಡಿದರು. ಅಷ್ಟರಲ್ಲಿ ಕ್ರೂರನಾದ ಒಬ್ಬ ವ್ಯಾಧನು ಆ ಸ್ಥಳಕ್ಕೆ ಬಂದನು ||೨೧|| ಹಸಿವೆಯ ಬಾಧೆಯಿಂದ ಪೀಡಿತನಾದ ಹಾಗೂ ದೊಡ್ಡ ಕುಟುಂಬದ ಪೋಷಣೆ ಮಾಡುವ ಭಾರದಿಂದ ವ್ಯಾಕುಲನಾದ ಆ ವ್ಯಾಧನು ತನ್ನ ಕುಟುಂಬ ಪೋಷಣೆಗೋಸ್ಕರ ಸರ್ವಧರ್ಮಗಳನ್ನು ಅತಿಕ್ರಮಿಸಿ ಪ್ರಾಣಿಹಿಂಸೆಯನ್ನು ಸ್ವಚ್ಛಂದವಾಗಿ ನಡೆಸುತ್ತಿದ್ದನು ||೨೨|| ನದೀ ತೀರದ ದೇವಾಲಯದಲ್ಲಿ 'ಆಮಲಕಿ' ಯ ದಿನ ರಾತ್ರಿ ಪುರಜನರು ಹಾಗೂ ರಾಜನು ನಡೆಸಿದ್ದ ಜಾಗರಣೆಯನ್ನು ಹಾಗೂ ಅನೇಕ ದೀಪಗಳ ಮಾಲೆಗಳನ್ನು ನೋಡಿ ಆ ವ್ಯಾಧನು ಅಲ್ಲಿಯೇ ಕುಳಿತುಕೊಂಡನು ||೨೩|| ಎಲ್ಲವನ್ನು ನೋಡಿ ಇದೇನೆಂದು ವಿಚಾರಿಸುತ್ತ ಏನೊಂದೂ ತಿಳಿಯದೇ ಅತ್ಯಾಶ್ಚರ್ಯಭರಿತನಾದನು. ಅಷ್ಟರಲ್ಲಿ ಪೂಜಾರ್ಥವಾಗಿ ಅಲ್ಲಿ ಸ್ಥಾಪಿಸಿದ ಪೂರ್ಣಕುಂಭವನ್ನು, ಕುಂಭದ ಮೇಲ್ಭಾಗದಲ್ಲಿದ್ದ ದಾಮೋದರನನ್ನು ||೨೪|| ಆಮಲಕೀ ವೃಕ್ಷವನ್ನು ಹಾಗೂ ಅಲ್ಲಿ ಬೆಳಗುತ್ತಿದ್ದ ಅಸಂಖ್ಯದೀಪಗಳನ್ನು ನೋಡಿದನು. ಮತ್ತು ಪುರಜನರು ಭಕ್ತಿಯಿಂದ ಪಠಿಸುತ್ತಿದ್ದ ವಿಷ್ಣು ಮಹಿಮಾಖ್ಯಾನಗಳನ್ನು ಕೇಳಿದನು. ||೨೫||

ಏಕಾದಶಶ್ಯಾಶ್ಚ ಮಾಹಾತ್ಮ್ಯಂ ಶುಶ್ರಾವ ಕ್ಷುಧಿತೋऽಪಿ ಸನ್ |
ಜಾಗ್ರತಸ್ತಸ್ಯ ಸಾ ರಾತ್ರಿರ್ಗತಾ ವಿಸ್ಮಿತಚೇತಸಃ || ೨೬ ||

ತತಃ ಪ್ರಭಾತಸಮಯೇ ವಿವಿಶುರ್ನಗರಂ ಜನಾಃ |
ವ್ಯಾಧೋऽಪಿ ಗೃಹಮಾಗತ್ಯ ಬುಭುಜೇ ಪ್ರೀತಮಾನಸಃ || ೨೭ ||

ತತಃ ಕಾಲೇನ ಮಹತಾ ವ್ಯಾಧಃ ಪಂಚತ್ವಮಾಗತಃ |
ಏಕಾದಶ್ಯಾಃ ಪ್ರಭಾವೇಣ ರಾತ್ರೌ ಜಾಗರಣೇನ ಚ || ೨೮ ||

ರಾಜ್ಯಂ ಪ್ರಪೇದೇ ಸುಮಹಚ್ಚತುರಂಗಬಲಾನ್ವಿತಮ್ |
ಜಯಂತೀ ನಾಮ ನಗರೀ ತತ್ರ ರಾಜಾ ವಿದೂರಥಃ || ೨೯ ||

ತಸ್ಮಾತ್ ಸ ತನಯೋ ಜಜ್ಞೇ ನಾಮ್ನಾ ವಸುರಥೋ ಬಲೀ |
ಚತುರಂಗಬಲೋಪೇತೋ ಧನಧಾನ್ಯಸಮನ್ವಿತಃ || ೩೦ ||

ದಶಾಯುತಾನಿ ಗ್ರಾಮಾಣಾಂ ಬುಭುಜೇ ಭಯವರ್ಜಿತಃ |
ತೇಜಸಾऽऽದಿತ್ಯ ಸದೃಶಃ ಕಾಂತ್ಯಾ ಚಂದ್ರಸಮಪ್ರಭಃ || ೩೧ ||

ಪರಾಕ್ರಮೇ ವಿಷ್ಣುಸಮಃ ಕ್ಷಮಯಾ ಪೃಥಿವೀಸಮಃ |
ಧಾರ್ಮಿಕಃ ಸತ್ಯವಾದೀ ಚ ವಿಷ್ಣುಭಕ್ತಿಪರಾಯಣಃ || ೩೨ ||

---

ತಾನು ಹಸಿದಿದ್ದರೂ ಏಕಾದಶಿಯ ಮಹಾತ್ಮೆಯನ್ನು ಶ್ರದ್ಧೆಯಿಂದ ಕೇಳಿದನು. ಇದೆಲ್ಲವನ್ನು ಕಂಡು ವಿಸ್ಮಿತನಾಗಿದ್ದ ಅವನು ಆ ರಾತ್ರಿಯನ್ನು ಜಾಗರಣೆಯಿಂದಲೇ ಕಳೆದನು ||೨೬|| ಮರುದಿನ ಬೆಳಿಗ್ಗೆ ಪುರಜನರೆಲ್ಲ ತಮ್ಮ ನಗರಕ್ಕೆ ಹಿಂದಿರುಗಿದರು. ಇತ್ತ ವ್ಯಾಧನು ತನ್ನ ಮನೆಗೆ ಬಂದು ಸಂತುಷ್ಟಚಿತ್ತನಾಗಿ ಪಾರಣೆಯನ್ನು ಮಾಡಿದನು. ||೨೭|| ಮುಂದೆ ಕೆಲದಿನಗಳ ನಂತರ ವ್ಯಾಧನು ಮೃತನಾಗಲು, ಏಕಾದಶಿಯ ಪ್ರಭಾವದಿಂದ ಮತ್ತು ಆ ದಿನ ರಾತ್ರಿ ಮಾಡಿದ ಜಾಗರಣೆಯಿಂದ ||೨೮|| ಮುಂದಿನ ಜನ್ಮದಲ್ಲಿ ಚತುರಂಗಬಲಸಮೇತವಾದ ಸಾಮ್ರಾಜ್ಯವನ್ನು ಪಡೆದನು. ಜಯಂತೀ ಎಂಬ ರಾಜಧಾನಿಯಲ್ಲಿ ವಿದೂರಥ ಎಂಬ ಹೆಸರಿನಿಂದ ಪ್ರಸಿದ್ಧನಾದ ಒಬ್ಬ ರಾಜನಿದ್ದನು. ||೨೯|| ಈ ರಾಜನ ಮಗನಾಗಿ ಜನಿಸಿದ ವ್ಯಾಧನು ವಸುರಥ ಎಂದು ಖ್ಯಾತನಾದನು. ಅತಿ ಬಲಿಷ್ಠನಾದ ವಸುರಥನು ಚತುರಂಗಬಲದಿಂದ ಕೂಡಿದವನೂ, ಧನಧಾನ್ಯ ಸಂಪತ್ತಿನಿಂದ ಯುಕ್ತನೂ ಆಗಿ ||೩೦|| ಹತ್ತು ಸಹಸ್ರ ಗ್ರಾಮಗಳ ಆಧಿಪತ್ಯವನ್ನು ನಿರ್ಭಯನಾಗಿ ಭೋಗಿಸಿದನು. ತೇಜಸ್ಸಿನಿಂದ ಸೂರ್ಯನಿಗೆ ಸದೃಶನೂ, ಕಾಂತಿಯಿಂದ ಚಂದ್ರನಿಗೆ ಸಮನಾದ ಪ್ರಭೆಯುಳ್ಳವನೂ ||೩೧|| ಪರಾಕ್ರಮದಲ್ಲಿ ವಿಷ್ಣುಸಮನೂ, ಕ್ಷಮಾಗುಣದಲ್ಲಿ ಪೃಥಿವಿಗೆ ಸಮಾನನೂ ಆದ ವಸುರಥನು ಪರಮ ಧಾರ್ಮಿಕನೂ, ಸತ್ಯವಾದಿಯೂ ಮತ್ತು

ಬ್ರಹ್ಮಜ್ಞಃ ಕರ್ಮಶೀಲಶ್ಚ ಪ್ರಜಾಪಾಲಿನ ತತ್ಪರಃ |
ಯಜತೇ ವಿವಿಧಾನ್ ಯಜ್ಞಾನ್ ಸ ರಾಜಾ ಪರದರ್ಪಹಾ || ૨૨ ||

ದಾನಾನಿ ವಿವಿಧಾನ್ಯೇಷ ಪ್ರದದಾತಿ ಚ ಸರ್ವದಾ |
ಏಕದಾ ಮೃಗಯಾಂ ಯಾತೋ ದೈವಾನ್ಮಾರ್ಗಪರಿಚ್ಯುತಃ || ೨೪ ||

ನ ದಿಶೋ ನೈವ ವಿದಿಶೋ ವೇತ್ತಿ ತತ್ರ ಮಹೀಪತಿಃ |
ಉಪಧಾಯ ಚ ದೋರ್ಮೂಲಮೇಕಾಕೀ ಗಹನೇ ವನೇ || ೨೫ ||

ಶ್ರಾಂತಶ್ಚ ಕ್ಷುಧಿತೋಽತ್ಯಂತಂ ಸಂವಿವೇಶ ಮಹೀಪತಿಃ |
ಅತ್ರಾಂತರೇ ಮ್ಲೇಚ್ಛಗಣಃ ಪರ್ವತಾಂತರವಾಸಭಾಕ್ || ೨೬ ||

ಆಯಯೌ ತತ್ರ ಯತ್ರಾಽಽಸ್ತೇ ರಾಜಾ ಪರಬಲಾರ್ದನಃ |
ಕೃತವೈರಾಸ್ತು ತೇ ರಾಜ್ಞಾ ಸರ್ವದೈವೋಪತಾಪಿತಾಃ || ೨೭ ||

ಪರಿವಾರ್ಯ ತತಸ್ತಸ್ಥೂ ರಾಜಾನಂ ಭೂರಿ ದಕ್ಷಿಣಮ್ |
ಹನ್ಯತಾಂ ಹನ್ಯತಾಂ ಚಾಽಯಂ ಪೂರ್ವವೈರವಿರುದ್ಧಧೀಃ || ೨೮ ||

ಅನೇನ ನಿಹತಾಃಪೂರ್ವಂ ಪಿತರೋ ಮಾತರಃ ಸುತಾಃ |
ಪೌತ್ರಾಶ್ಚ ಭಾಗಿನೇಯಾಶ್ಚ ಮಾತುಲಾಶ್ಚ ನಿಪಾತಿತಾಃ || ೨೯ ||

ವಿಷ್ಣುಭಕ್ತಿಪರಾಯಣನೂ ಆಗಿದ್ದನು. ||೨೨|| ಬ್ರಹ್ಮಜ್ಞಾನಿಯೂ, ಕರ್ಮಠನೂ, ಪ್ರಜಾಪಾಲನೆಯಲ್ಲಿ ತತ್ಪರನೂ ಆದ ಅವನು ವಿವಿಧ ಯಜ್ಞಗಳನ್ನು ನಡೆಸಿದನು. ಶತ್ರುಗಳ ದರ್ಪಭಂಜಕವಾದ ರಾಜನು ||೨೩|| ಸದಾಕಾಲ ಸತ್ಪಾತ್ರರಿಗೆ ವಿವಿಧ ಧಾನಗಳನ್ನು ಕೊಡುತ್ತಲಿದ್ದನು. ಹೀಗಿರುತ್ತಿರಲು ಒಮ್ಮೆ ವಸುರಥನು ಬೇಟೆಗಾಗಿ ಅರಣ್ಯಕ್ಕೆ ಹೋದಾಗ ದೈವವಶಾತ್ ದಾರಿತಪ್ಪಿ ಘೋರವಾದ ಅರಣ್ಯದಲ್ಲಿ ಅಲೆಯತೊಡಗಿದನು ||೨೪|| ದಿಕ್ಕು ಉಪದಿಕ್ಕುಗಳನ್ನು ತಿಳಿಯದೇ ದಿಗ್ಭ್ರಾಂತನಾದ ರಾಜನು ಗಹನವಾದ ವನದಲ್ಲಿ ಏಕಾಕಿಯಾಗಿ ಒಂದು ಗಿಡದ ಕೆಳಗೆ ಕುಳಿತುಕೊಂಡನು ||೨೫|| ಬಹು ಬಳಲಿದ ಹಾಗೂ ಹಸಿದ ರಾಜನು ಅಲ್ಪಸಮಯದಲ್ಲಿ ಅಲ್ಲಿ ನಿದ್ದೆ ಹೋದನು. ಅಷ್ಟರಲ್ಲಿ ಹತ್ತಿರದ ಬೇರೊಂದು ಪರ್ವತದಲ್ಲಿ ವಾಸವಾಗಿದ್ದ ಮ್ಲೇಚ್ಛರ ಗುಂಪೊಂದು ||೨೬|| ರಾಜನು ಮಲಗಿಕೊಂಡಿದ್ದ ಸ್ಥಳಕ್ಕೆ ಬಂದಿತು. ರಾಜನಿಂದ ಈ ಮೊದಲು ಬಹು ಪೀಡಿತರಾಗಿದ್ದ ಮತ್ತು ಅವನಲ್ಲಿ ದ್ವೇಷವುಳ್ಳ ಆ ಮ್ಲೇಚ್ಛರು ||೨೭|| ಮಹಾದಾನಿಯಾದ ರಾಜನನ್ನು ಸುತ್ತುವರೆದು ನಿಂತುಕೊಂಡರು ಮತ್ತು `ನಮ್ಮನ್ನು ದ್ವೇಷಿಸುತ್ತಿದ್ದ ಇವನನ್ನು ಕೊಲ್ಲಿರಿ, ಕೊಲ್ಲಿರಿ, ||೨೮|| ಇವನಿಂದ ಪೂರ್ವದಲ್ಲಿ ನಮ್ಮ ತಂದೆ -ತಾಯಿ, ಮಕ್ಕಳು, ಮೊಮ್ಮಕ್ಕಳು, ಭಾವಂದಿರು ಮತ್ತು ಸೋದರ ಮಾವಂದಿರು ಕೊಲ್ಲಲ್ಪಟ್ಟಿದ್ದಾರೆ. ನಮ್ಮ ಅನೇಕ ಆಪ್ತರು ರಾಜ್ಯದಿಂದ ಹೊರಹಾಕಲ್ಪಟ್ಟಿದ್ದಾರೆ

ನಿಷ್ಕಾಸಿತಾಶ್ಚ ಸ್ವಸ್ಥಾನಾದ್ವಿಕ್ಷಿಪ್ತಾಶ್ಚ ದಿಶೋ ದಶ |
ಏತಾವದುಕ್ತ್ವಾ ತೇ ಸರ್ವೇ ತತ್ರೈನಂ ಹಂತುಮುದ್ಯತಾಃ || ೪೦ ||

ಪಾಶೈಶ್ಚ ಪಟ್ಟಿಶೈಃ ಖಡ್ಗೈ ರ್ಬಾಣೈರ್ಧನುಷಿ ಸಂಸ್ಥಿತೈಃ |
ಸರ್ವತೋಽಭ್ಯರಿಗಣಾಸ್ತೇ ಚ ರಾಜಾನಂ ಹಂತುಮುದ್ಯತಾಃ || ೪೧ ||

ಸರ್ವಾಣಿ ಶಸ್ತ್ರಾಣಿ ಸಮಾಪತಂತಿ ನ ವೈ ಶರೀರೇ ಪ್ರವಿಶಂತಿ ತಸ್ಯ |
ತೇ ಚಾಪಿ ಸರ್ವೇ ಹತಶಸ್ತ್ರಸಂಘಾ ಮ್ಲೇಂಛಾ ಬಭೂವುರ್ಗತಜೀವದೇಹಾಃ||೪೨||

ಯದಾಪಿ ಚಲಿತುಂ ತತ್ರ ನಶೇಕುಸ್ತೇಽರಯೋ ಭೃಶಮ್ |
ಶಸ್ತ್ರಾಣಿ ಕುಂಠಿತಾಂ ಜಗ್ಮುಃ ಸರ್ವೇಷಾಂ ಹತಚೇತಸಾಮ್ || ೪೩ ||

ದೀನಾ ಬಭೂವುಸ್ತೇ ಸರ್ವೇ ಯೇ ತಂ ಹಂತು ಸಮಾಗತಾಃ |
ಏತಸ್ಮಿನ್ನೇವ ಕಾಲೇ ತು ತಸ್ಯ ರಾಜ್ಞಃ ಶರೀರತಃ || ೪೪ ||

ನಿಃ ಸೃತಾ ಪ್ರಮದಾ ಹ್ಯೇಕಾ ಸರ್ವಾವಯವಶೋಭನಾ |
ದಿವ್ಯಗಂಧಸಮಾಯುಕ್ತಾ ದಿವ್ಯಾಭರಣಭೂಷಿತಾ || ೪೫ ||

ದಿವ್ಯಮಾಲಾಂಬರಧರಾ ಭ್ರುಕುಟೀಕುಟಿಲಾನನಾ |
ಸ್ಫುಲಿಂಗಾಭ್ಯಾಂ ಚ ನೇತ್ರಾಭ್ಯಾಂ ಮುಮುಂತೀ ಪಾವಕಂ ಬಹು || ೪೬ ||

---

ಸ್ಥಾನಭ್ರಷ್ಟಗೊಳಿಸಲ್ಪಟ್ಟಿದ್ದಾರೆ, ಎಲ್ಲೆಲ್ಲೋ ಓಡಿಸಲ್ಪಟ್ಟಿದ್ದಾರೆ ' ಎಂದು ಮುಂತಾಗಿ ಕೂಗುತ್ತ ರಾಜನನ್ನು ಕೊಲ್ಲಲು ಉದ್ಯುಕ್ತರಾದರು ||೪೦|| ಪಾಶ, ಪಟ್ಟಿ, ಖಡ್ಗ, ಬಿಲ್ಲು - ಬಾಣಗಳಿಂದ ಸುಸಜ್ಜಿತರಾದ ಆ ದುಷ್ಟರು ರಾಜನನ್ನು ಕೊಲ್ಲುವದಕ್ಕಾಗಿ ||೪೧||ತಮ್ಮಲ್ಲಿರುವ ಶಸ್ತ್ರಗಳನ್ನು ಅವನ ಮೇಲೆ ಪ್ರಯೋಗಿಸಿದರು. ಆದರೆ ಏನಾಶ್ಚರ್ಯ! ಅವರ ಶಸ್ತ್ರಗಳೆಲ್ಲ ರಾಜನ ಶರೀರದ ಸುತ್ತಲೂ ಹೂವಿನಂತೆ ಬೀಳುತ್ತಿದ್ದವೇ ಹೊರತು ಶರೀರವನ್ನು ಪ್ರವೇಶಿಸಿ ಹಿಂಸಿಸಲಿಲ್ಲ. ಇದನ್ನು ನೋಡಿದ ಮ್ಲೇಚ್ಛರು ತಮ್ಮಲ್ಲಿರುವ ಶಸ್ತ್ರಗಳನ್ನೆಲ್ಲ ಕಳೆದುಕೊಂಡು ಭಯದಿಂದ ಗತಪ್ರಾಣರಂತೆ ನಿಂತುಕೊಂಡರು ||೪೨|| ಶಸ್ತ್ರಗಳೆಲ್ಲ ನಿಷ್ಪ್ರಯೋಜಕವಾಗಿ ಆ ಮ್ಲೇಚ್ಛರು ಒಂದು ಹೆಜ್ಜೆಕೂಡ ಮುಂದೆ ಸರಿಯಲು ಅಸಮರ್ಥರಾಗಿ ನಿರ್ಜೀವಿಗಳಂತಾದರು ||೪೩|| ರಾಜನನ್ನು ಕೊಲ್ಲುವದಕ್ಕಾಗಿ ಧಾವಿಸಿ ಬಂದಿದ್ದ ಅವರೆಲ್ಲರೂ ಹೇಡಿಗಳಂತೆ ದೀನರಾಗಿ ನಿಂತಕೊಂಡಿರಲು ರಾಜನ ದೇಹದೊಳಗಿಂದ ||೪೪|| ಅಲಂಕೃತಳಾದ, ಸರ್ವಲಕ್ಷಣಸಂಪನ್ನೆಯಾದ ಒಬ್ಬ ಸುಂದರ ತರುಣ ಸ್ತ್ರೀಯು ಹೊರಬಂದಳು. ದಿವ್ಯವಾದ ಸುಗಂಧದಿಂದ ಘಮಘಮಿಸುವ, ಆಭರಣಗಳಿಂದ ಅಲಂಕೃತಳಾದ ||೪೫|| ದಿವ್ಯ ಮಾಲೆಗಳನ್ನು ಧರಿಸಿದ, ಚಂಚಲವಾದ ಭ್ರೂಭಂಗವುಳ್ಳ, ತನ್ನ ಕಣ್ಣುಗಳಿಂದ ಕ್ರೋಧಜ್ವಾಲೆಗಳನ್ನು ಹೊರಹಾಕುತ್ತ ||೪೬|| ಮೇಲೆತ್ತಿದ ಕೈಯಲ್ಲಿ

ಚಕ್ರೋದ್ಯತಕರಾ ಚೈವ ಕಾಲರಾತ್ರಿರಿವಾಪರಾ |
ಅಭ್ಯಧಾವತಾ ಸಂಕ್ರುದ್ಧಾ ಮ್ಲೇಚ್ಛಾನತ್ಯಂತದುಃಖಿತಾನ್ || ೪೭ ||

ನಿಹತಾಶ್ಚ ಯದಾ ಮ್ಲೇಚ್ಛಾಸ್ತೇ ವಿಕರ್ಮರತಾಸ್ತಥಾ |
ತತೋ ರಾಜಾ ವಿಬುದ್ಧಃ ಸನ್ ದದರ್ಶ ಮಹದದ್ಭುತಮ್ || ೪೮ ||

ಹತಾನ್ ಮ್ಲೇಚ್ಛಗಣಾನ್ ದೃಷ್ಟ್ವಾ ರಾಜಾ ಹರ್ಷಮವಾಪ ಸಃ |
ಇಹ ಕೇನ ಹತಾ ಮ್ಲೇಚ್ಛಾ ಅತ್ಯಂತಂ ವೈರಿಣೋ ಮಮ || ೪೯ ||

ಕೇನ ಚೇದಂ ಮಹತ್ಕರ್ಮ ಕೃತಮಸ್ಮದ್ಧಿತಾರ್ಥಿನಾ |
ಏತಸ್ಮಿನ್ನೇವ ಕಾಲೇ ತು ವಾಗುವಾಚಾಶರೀರಿಣೀ || ೫೦ ||

ತಂ ಸ್ಥಿತಂ ನೃಪತಿಂ ದೃಷ್ಟ್ವಾ ನಿಷ್ಕಾಮಂ ವಿಸ್ಮಯಾನ್ವಿತಮ್ |
ಶರಣಂ ಕೇಶವಾದನ್ಯೋ ನಾಸ್ತಿ ಕೋಽಪಿ ದ್ವಿತೀಯಕಃ || ೫೧ ||

ಇತಿ ರುಚ್ಛಾಽಽಕಾಶವಾಣೀಂ ವಿಸ್ಮಯೋತ್ಫುಲ್ಲಲೋಚನಃ |
ವನಾತ್ತಸ್ಮಾತ್ಸ ಕುಶಲೀ ಸಮಾಯಾತಃ ಸ ಭೂಮಿಭುಕ್ || ೫೨ ||

ರಾಜ್ಯಂ ಚಕಾರ ಧರ್ಮಾತ್ಮಾ ಧರಾಯಾಂ ದೇವತೇಶವತ್ |

---

ಚಕ್ರವನ್ನು ಹಿಡಿದುಕೊಂಡು, ಇನ್ನೊಬ್ಬ ಪ್ರಳಯಕಾಲದ ರಾತ್ರಿಯೋ ಎಂಬಂತಿರುವ ಆ ಸ್ತ್ರೀಯು ಸಂಕ್ರುದ್ಧಳಾಗಿ ಅತ್ಯಂತ ದುಃಖಿತರಾಗಿದ್ದ ಮ್ಲೇಚ್ಛರನ್ನು ಕೊಲ್ಲಲು ಬೆನ್ನಟ್ಟಿದಳು. ||೪೭|| ದುಷ್ಟಕಾರ್ಯದಲ್ಲಿ ಆಸಕ್ತರಾಗಿದ್ದ ಮ್ಲೇಚ್ಛರನ್ನೆಲ್ಲ ಆ ಸ್ತ್ರೀಯು ಸಂಹರಿಸಿದಳು. ಅಷ್ಟರಲ್ಲಿ ಗಾಢನಿದ್ರೆಯಿಂದ ಎಚ್ಚತ್ತ ರಾಜನು ತನ್ನೆದುರು ನಡೆದಿರುವ ಮಹದಾಶ್ಚರ್ಯವನ್ನು ಕಂಡನು. ||೪೮|| ಮ್ಲೇಚ್ಛರೆಲ್ಲ ಹತರಾಗಿರುವದನ್ನು ಕಂಡು ಹರ್ಷಾಶ್ಚರ್ಯಭರಿತನಾದನು. ನನ್ನ ಕಡುವೈರಿಗಳಾದ ಈ ಮ್ಲೇಚ್ಛರನ್ನು ಆದಾರು ಕೊಂದಿರುವರು ?ನಮಗೆ ಹಿತವನ್ನು ಬಯಸುವ, ಇಂಥ ಮಹತ್ಕಾರ್ಯವನ್ನು ಮಾಡಿದವರು ಯಾರಾಗಿರಬಹುದು ? ಎಂದು ರಾಜನು ಆಲೋಚಿಸುತ್ತಿರುವಷ್ಟರಲ್ಲಿ ಅಲ್ಲೊಂದು ಅಶರೀರ ವಾಣಿಯು ಕೇಳಿಸಿತು ||೫೦|| ನಿಷ್ಕಾಮಿಯಾದ ಮತ್ತು ಆಶ್ಚರ್ಯಭರಿತನಾದ ಆ ರಾಜನನ್ನು ಕುರಿತು ಆಕಾಶವಾಣಿಯು ಹೇಳಿತು - ` ಹೇ ರಾಜಾ, ಶ್ರೀಹರಿ ಕೇಶವನನ್ನು ಬಿಟ್ಟು ಶರಣಾಗತ ರಕ್ಷಕನೆಂಬುವನು ಬೇರಿನ್ನಾರೂ ಇರುವದಿಲ್ಲ ' || ೫೧|| ಈ ಆಕಾಶವಾಣಿಯನ್ನು ಕೇಳಿ ವಿಸ್ಮಿತನಾದ ರಾಜನು ಆ ಗಹನವಾದ ಅರಣ್ಯದೊಳಗಿಂದ ಯಾವ ಶ್ರಮವಿಲ್ಲದೇ ಕ್ಷೇಮದಿಂದ ಹೊರಬಂದನು ||೫೨|| ತನ್ನ ರಾಜ್ಯವನ್ನು ಸೇರಿದ ಧರ್ಮಾತ್ಮನಾದ ರಾಜನು ದೇವೇಂದ್ರನಂತೆ ರಾಜ್ಯಭಾರಮಾಡಿದನು. ವಸಿಷ್ಠರು ಮಾಂಧಾತೃ ರಾಜನನ್ನು ಕುರಿತು - ರಾಜಾ, ಫಾಲ್ಗುಣ

**ವಸಿಷ್ಠ ಉವಾಚ -**

**ತಸ್ಮಾದಾಮಲಕೀಂ ರಾಜನ್ ಯೇ ಕುರ್ವಂತಿ ನರೋತ್ತಮಾಃ |**
**ತೇ ಯಾಂತಿ ವೈಷ್ಣವಂ ಲೋಕಂ ನಾತ್ರ ಕಾರ್ಯಾ ವಿಚಾರಣಾ || ೫೩ ||**

**|| ಇತಿ ಶ್ರೀ ಬ್ರಹ್ಮಾಂಡ ಪುರಾಣೇ ಫಾಲ್ಗುನ ಶುಕ್ಲಾSSಮಲಕೀ ಏಕಾದಶೀ ವ್ರತ ಮಾಹಾತ್ಮ್ಯಂ ಸಂಪೂರ್ಣಮ್ || ೮ ||**

---

ಶುದ್ಧ ಏಕಾದಶಿಯು ಇಂಥ ಮಹಿಮೋಪೇತವಾಗಿರುವುದರಿಂದಲೇ, ಯಾರು ಆಮಲಕೀ ಎಂಬ ಪ್ರಸಿದ್ಧವಾದ ಈ ಏಕಾದಶೀ ವ್ರತವನ್ನು ಆಚರಿಸುವರೋ ||೫೩|| ಅವರು ನಿಶ್ಚಯವಾಗಿ ವಿಷ್ಣುಲೋಕವನ್ನು ಸೇರುವರು ||೫೪||

|| ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದಲ್ಲಿಯ ಫಾಲ್ಗುಣ ಶುಕ್ಲಪಕ್ಷದ ' ಆಮಲಕೀ ಏಕಾದಶೀ ' ವ್ರತದ ಮಹಾತ್ಮೆಯು ಸಮಾಪ್ತವಾಯಿತು ||

|| ಶ್ರೀ ಕೃಷ್ಣಾರ್ಪಣಮಸ್ತು ||

# ಚೈತ್ರ ಕೃಷ್ಣೈಕಾದಶೀ ವ್ರತ ಕಥಾ

**ಯುಧಿಷ್ಠಿರ ಉವಾಚ -**

**ಫಾಲ್ಗುನಸ್ಯ ಸಿತೇ ಪಕ್ಷೇ ಶ್ರುತ್ವಾ ಸಾಮಲಕೀ ಮಯಾ |**
**ಚೈತ್ರಸ್ಯ ಕೃಷ್ಣಪಕ್ಷೇ ತು ಕಿಂ ನಾಮ್ನೈಕಾದಶೀ ಭವೇತ್ || ೧ ||**

**ಕೋ ವಿಧಿಃ ಕಿಂ ಫಲಂ ತಸ್ಯಾಃ ಬ್ರೂಹಿ ಕೃಷ್ಣ ಮಮಾಗ್ರತಃ ||**

**ಕೃಷ್ಣ ಉವಾಚ**

**ಶ್ರುಣು ರಾಜೇಂದ್ರ ವಕ್ಷ್ಯಾಮಿ ಪಾಪಮೋಚನಿಕಾವ್ರತಮ್ || ೨ ||**

**ಯಲ್ಲೋಮಶೋಽಬ್ರವೀತ್ ಪೃಷ್ಟೋ ಮಾಂಧಾತ್ರಾ ಚಕ್ರವರ್ತಿನಾ |**

**ಮಾಂಧಾತೋವಾಚ -**

**ಭಗವನ್ ಶ್ರೋತುಮಿಚ್ಛಾಮಿ ಲೋಕಾನಾಂ ಹಿತಕಾಮ್ಯಯಾ || ೩ ||**

**ಚೈತ್ರಮಾಸ್ಯಸಿತೇ ಪಕ್ಷೇ ಕಿನ್ನಾಮ್ನೈಕಾದಶೀ ಭವೇತ್**
**ಕೋ ವಿಧಿಃ ಕಿಂ ಫಲಂ ತಸ್ಯಾಃ ಕಥಯಸ್ವ ಪ್ರಸಾದತಃ || ೪ ||**

---

ಹೇ ಶ್ರೀಕೃಷ್ಣ ಪರಮಾತ್ಮಾ ಫಾಲ್ಗುಣಶುಕ್ಲಪಕ್ಷದ ಆಮಲಕೀ ಏಕಾದಶೀ ವ್ರತದ ಮಹಾತ್ಮೆಯನ್ನು ಕೇಳಿದೆನು. ಇನ್ನು ಚೈತ್ರಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯು ಯಾವ ಹೆಸರಿನಿಂದ ಪ್ರಸಿದ್ಧವಾಗಿದೆ ? || ೧ || ಅಂದಿನ ದಿನ ಮಾಡಬೇಕಾದ ಆಚಾರ ವಿಧಿಗಳಾವವು ಮತ್ತು ವ್ರತದ ಫಲವೇನು ? ಇದೆಲ್ಲವನ್ನು ನನಗೆ ತಿಳಿಸಿ ಅನುಗ್ರಹಿಸಬೇಕು. ಎಂದು ಯುಧಿಷ್ಠಿರನು ಪ್ರಾರ್ಥಿಸಲು ಶ್ರೀಕೃಷ್ಣನು ಹೇಳುತ್ತಾನೆ - ಹೇ ರಾಜಾ, ಪಾಪಮೋಚನಿಕಾ ವ್ರತ ಎಂದು ಪ್ರಸಿದ್ಧವಾಗಿರುವ ಈ ಏಕಾದಶೀ ವ್ರತದ ಮಹಾತ್ಮೆಯನ್ನು ತಿಳಿಸುವೆನು ಕೇಳು || ೨ || ಹಿಂದಕ್ಕೆ ಮಾಂಧಾತಾ ಚಕ್ರವರ್ತಿ ರಾಜನಿಂದ ಪ್ರಾರ್ಥಿತನಾಗಿ ಲೋಮಶ ಮುನಿಯು ತಿಳಿಸಿದ ಈ ಏಕಾದಶೀ ಮಹಾತ್ಮೆಯನ್ನೇ ನಿನಗೀಗ ತಿಳಿಸುವೆನು. ಒಮ್ಮೆ ಮಾಂಧಾತಾ ರಾಜನು ಲೋಮಶರನ್ನು ಕುರಿತು - ಭಗವನ್, ಲೋಕಕ್ಕೆ ಕಲ್ಯಾಣವಾಗಲಿ ಎಂಬ ಉದ್ದೇಶದಿಂದ ||೩|| ಚೈತ್ರ ಮಾಸದ ಕೃಷ್ಣಪಕ್ಷದಲ್ಲಿ ಬರುವ ಏಕಾದಶೀ ವ್ರತದ ಮಹಾತ್ಮೆಯನ್ನು ಕೇಳಬಯಸಿದ್ದೇನೆ. ಆ ಏಕಾದಶಿಯ ಹೆಸರೇನು ? ಅಂದಿನ ದಿನದ ವಿಧಿಗಳಾವವು ಮತ್ತು ಆ ವ್ರತದ ಫಲವಾವುದು ? ಇದೆಲ್ಲವನ್ನು ಅನುಗ್ರಹಮಾಡಿ ತಿಳಿಸಬೇಕು ಎಂದು ಪ್ರಾರ್ಥಿಸಲು ||೪|| ಲೋಮಶಮುನಿಗಳು ಹೇಳಿದರು - ಹೇ ರಾಜಾ, ಚೈತ್ರ ಮಾಸದ

**ಲೋಮಶ ಉವಾಚ**

ಚೈತ್ರಮಾಸ್ಯಸಿತೇ ಪಕ್ಷೇ ನಾಮ್ನಾ ವೈ ಪಾಪಮೋಚನೀ |
ಏಕಾದಶೀ ಸಮಾಖ್ಯಾತಾ ಪಿಶಾಚತ್ವವಿನಾಶಿನೀ || ೫ ||

ಶ್ರೂಯತಾಂ ರಾಜಶಾರ್ದೂಲ ಕಾಮದಾಂ ಸಿದ್ಧಿದಾಂ ತಥಾ |
ಕಥಾಂ ವಿಚಿತ್ರಾಂ ಶುಭದಾಂ ಪಾಪಘ್ನೀಂ ಧರ್ಮದಾಯಿನೀಮ್ || ೬ ||

ಪುರಾ ಚೈತ್ರರಥೋದ್ದೇಶೇ ಹ್ಯಪ್ಸರೋಗಣಸೇವಿತೇ |
ವಸಂತಸಮಯೇ ಪ್ರಾಪ್ತೇ ಪುಷ್ಪೈರಾಕುಲಿತೇ ವನೇ || ೭ ||

ಗಂಧರ್ವಕನ್ಯಾಸ್ತತ್ರೈವ ರಮಂತಿ ಸಹ ಕಿನ್ನರೈಃ |
ಪಾಕಶಾಸನಮುಖ್ಯಾಶ್ಚ ಕ್ರೀಡಂತೇ ಚ ದಿವೌಕಸಃ || ೮ ||

ನಾಪರಂ ಸುಂದರಂ ಕಿಂಚಿದ್ವನಾಚ್ಚೈತ್ರರಥಾದ್ವನಮ್ |
ತಸ್ಮಿನ್ವನೇ ತು ಮುನಯಸ್ತಪಂತಿ ಬಹುಲಂ ತಪಃ || ೯ ||

ಸಹ ದೇವೈಸ್ತು ಮಘವಾ ರಮತೇ ಮಧುಮಾಧವೌ |
ಏಕೋ ಮುನಿವರಸ್ತತ್ರ ಮೇಧಾವೀ ನಾಮ ನಾಮತಃ || ೧೦ ||

ಅಪ್ಸರಾಸ್ತಂ ಮುನಿವರಂ ಮೋಹನಾಯೋಪಚಕ್ರಮೇ |
ಮಂಜುಘೋಷೇತಿ ವಿಖ್ಯಾತಾ ಭಾವಂ ತಸ್ಯ ವಿಚಿನ್ವತೀ || ೧೧ ||

ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯು ಪಾಪಮೋಚನೀ ಎಂದು ಖ್ಯಾತವಾಗಿದ್ದು ಇದು ಪಿಶಾಚತ್ವವನ್ನು ಕಳೆಯಬಲ್ಲದಾಗಿದೆ || ೫ || ಹೇ ರಾಜಶ್ರೇಷ್ಠನೇ, ಇಷ್ಟಪ್ರದವಾದ, ಸಿದ್ಧಿಪ್ರದವಾದ, ವಿಚಿತ್ರವಾದ, ಶುಭಪ್ರದವಾದ, ಪಾಪನಾಶಕವಾದ, ಹಾಗೂ ಧರ್ಮಪ್ರದವಾದ ಈ ಏಕಾದಶಿಯ ಮಹಾತ್ಮೆಯನ್ನು ತಿಳಿಸುವೆನು ಕೇಳುವವನಾಗು || ೬ || ಒಮ್ಮೆ ವಸಂತಋತುವು ಪ್ರಾಪ್ತವಾಗಲು ಅನೇಕ ಫಲಪುಷ್ಪಗಳಿಂದ ಮನೋಹರವಾದ ಕುಬೇರನ ಚೈತ್ರರಥವೆಂಬ ವನದಲ್ಲಿ ಅಸಂಖ್ಯ ಅಪ್ಸರ ಸ್ತ್ರೀಯರು ವಿಹರಿಸತೊಡಗಿದರು || ೭ || ಆ ವನದಲ್ಲಿಯೇ ಗಂಧರ್ವ ಕನ್ಯೆಯರು ಕಿನ್ನರರೊಂದಿಗೆ ಕ್ರೀಡಿಸತೊಡಗಿದರು. ಅಗ್ನಿಯೇ ಮೊದಲಾದ ದೇವತೆಗಳು ಸ್ವಚ್ಛಂದವಾಗಿ ವಿಹಾರ ಮಾಡತೊಡಗಿದರು || ೮ || ಚೈತ್ರರಥವನಕ್ಕಿಂತ ಅಧಿಕಸುಂದರವಾದ ಬೇರೊಂದು ವನವಿರಲಿಲ್ಲ. ಆ ವನದಲ್ಲಿ ಅನೇಕ ಮುನಿಗಳು ತಪೋನಿರತರಾಗಿದ್ದರು || ೯ || ಇದೇ ವನದಲ್ಲಿ ಸ್ವತಃ ಇಂದ್ರನು ದೇವತೆಗಳೊಂದಿಗೆ ಪ್ರತಿವರ್ಷ ಚೈತ್ರ ಹಾಗೂ ವೈಶಾಖ ಮಾಸಗಳಲ್ಲಿ ಕ್ರೀಡಿಸುತ್ತಿದ್ದನು. ಇಂಥ ಶ್ರೇಷ್ಠವನದಲ್ಲಿ ಮೇಧಾವೀ ಎಂಬ ಹೆಸರಿನ ಒಬ್ಬ ಮುನಿಯು ವಾಸವಾಗಿದ್ದನು ||೧೦|| ಜಿತೇಂದ್ರಿಯನಾಗಿದ್ದ ಆ ಮುನಿಯನ್ನು ಹೇಗಾದರೂ ಮಾಡಿ ಮೋಹಿಸಬೇಕೆಂದು

ಕ್ರೋಶಮಾತ್ರಂ ಸ್ಥಿತಾ ತಸ್ಯ ಭಯಾದಾಶ್ರಮಸನ್ನಿಧೌ |
ಗಾಯಂತೀ ಮಧುರಂ ಸಾಧು ಪೀಡಯಂತೀ ವಿಪಂಚಿಕಾಮ್ || ೧೨ ||

ಗಾಯಂತೀಂ ತಾಮಥಾಲೋಕ್ಯ ಪುಷ್ಪಚಂದನವೇಷ್ಟಿತಾಮ್ |
ಕಾಮೋಽಪಿ ವಿಜಯಾಕಾಂಕ್ಷೀ ಶಿವಭಕ್ತಂ ಮುನೀಶ್ವರಮ್ || ೧೩ ||

ತಸ್ಯಾಃ ಶರೀರಸಂಸರ್ಗಂ ಶಿವವೈರಮನುಸ್ಮರನ್ |
ಕೃತ್ವಾ ಭ್ರುವೌ ಧನುಃಕೋಟಿಗುಣಂ ಕೃತ್ವಾ ಕಟಾಕ್ಷಕಮ್ || ೧೪ ||

ಮಾರ್ಗಣೌ ನಯನೇ ಕೃತ್ವಾ ಪಕ್ಷಯುಕ್ತೌ ಯಥಾಕ್ರಮಮ್ |
ಕುಚೌ ಕೃತ್ವಾ ಪಟಕುಟೀಂ ವಿಜಯಾಯೋಪಸಂಸ್ಥಿತಃ || ೧೫ ||

ಮಂಜುಘೋಷಾಽಭವತ್ತತ್ರ ಕಾಮಸ್ಯೇವ ವರೂಥಿನೀ |
ಮೇಧಾವಿನಂ ಮುನಿಂ ದೃಷ್ಟ್ವಾ ಸಾಪಿ ಕಾಮೇನ ಪೀಡಿತಾ || ೧೬ ||

ಯೌವನೋದ್ಭಿನ್ನದೇಹೋಽಸೌ ಮೇಧಾವ್ಯತಿ ವಿರಾಜತೇ |
ಸಿತೋಪವೀತಸಹಿತೋ ದಂಡೀ ಸ್ಮರ ಇವಾಪರಃ || ೧೭ ||

ಮೇಧಾವೀ ವಸತಿ ಸ್ಮಾಸೌ ಚ್ಯವನಸ್ಯಾಶ್ರಮೇ ಶುಭೇ |
ಮಂಜುಘೋಷಾ ಸ್ಥಿತಾ ತತ್ರ ದೃಷ್ಟ್ವಾ ತಂ ಮುನಿಪುಂಗವಮ್ || ೧೮ ||

---

ಆ ವನದಲ್ಲಿದ್ದ ಅಪ್ಸರ ಸ್ತ್ರೀಯರು ಉದ್ಯುಕ್ತರಾದರು. ಅವರಲ್ಲಿ ಮಂಜುಘೋಷಾ ಎಂಬ ಹೆಸರಿನ ಒಬ್ಬ ಅಪ್ಸರೆಯು ಆ ಮುನಿವರನನ್ನು ಮೋಹಿಸುವ ಉಪಾಯವನ್ನು ಯೋಚಿಸತೊಡಗಿದಳು || ೧೧ || ಮುನಿಯ ಪ್ರಭಾವದಿಂದ ಭೀತಳಾದ ಅವಳು ಅವನ ಆಶ್ರಮದಿಂದ ಒಂದು ಹರದಾರಿ ದೂರದಲ್ಲಿ ನಿಂತು ಮಧುರವಾಗಿ ಗಾಯನ ಮಾಡುತ್ತ ವೀಣೆಯನ್ನು ಬಾರಿಸತೊಡಗಿದಳು || ೧೨ || ಪುಷ್ಪ ಮಾಲೆಗಳಿಂದ ಅಲಂಕೃತಳಾಗಿ ಸುಗಂಧದ್ರವ್ಯಗಳಿಂದ ಘಮ ಘಮಿಸುತ್ತ ಮಧುರವಾಗಿ ಹಾಡುತ್ತಿರುವ ಆ ಅಪ್ಸರೆಯನ್ನು ಕಂಡು ಕಾಮನೂ ಕೂಡ ಶಿವಭಕ್ತನಾದ ಮುನೀಶ್ವರನನ್ನು ಗೆಲ್ಲಲು ಬಯಸಿದನು ಮತ್ತು ||೧೩|| ಶಿವನೊಂದಿಗಿದ್ದ ತನ್ನ ವೈರವನ್ನು ಸ್ಮರಿಸುತ್ತ ಅಪ್ಸರೆಯ ಶರೀರವನ್ನು ಪ್ರವೇಶಿಸಿ ಅವಳ ಹುಬ್ಬುಗಳನ್ನು ಬಿಲ್ಲನ್ನಾಗಿ ಮಾಡಿಕೊಂಡು || ೧೪ || ಕಣ್ಣುಗಳ ಕುಡಿನೋಟಗಳನ್ನು ಬಾಣಗಳನ್ನಾಗಿ ಮಾಡಿ ಮತ್ತು ಅವಳ ಎರಡೂ ಸ್ತನಗಳನ್ನು ತನ್ನ ಡೇರೆಯನ್ನಾಗಿಸಿಕೊಂಡು ಮೇಧಾವೀ ಮುನಿಯನ್ನು ಗೆಲ್ಲಲು ಸಿದ್ಧನಾಗಿ ನಿಂತನು || ೧೫ || ಕಾಮದೇವನ ಸೈನಿಕನಂತಿದ್ದ ಮಂಜುಘೋಷಾ ಅಪ್ಸರೆಯು ಮೇಧಾವೀ ಮುನಿಯನ್ನು ಕಂಡು ಕಾಮಪೀಡಿತಳಾದಳು. ||೧೬|| ತಾರುಣ್ಯ ಕಾಂತಿಯಿಂದ ಅತಿಶೋಭಿಸುತ್ತಿರುವ ಮೇಧಾವಿಯು ಶುಭ್ರವಾದ ಯಜ್ಞೋಪವೀತವನ್ನು ಧರಿಸಿದ ಅಪರ ಮನ್ಮಥನಂತೆ ಕಾಣುತ್ತಿದ್ದನು || ೧೭ || ಇಂಥ

ಮದನಸ್ಯ ವಶಂ ಪ್ರಾಪ್ತಾ ಮಂದಂ ಮಂದಮಗಾಯತ |
ರಣದ್ವಲಯಸಂಯುಕ್ತಾಂ ಸಿಂಜನ್ನೂಪುರಮೇಖಲಾಮ್ || ೧೯ ||

ಗಾಯಂತೀಂ ಭಾವಸಂಯುಕ್ತಾಂ ವಿಲೋಕ್ಯ ಮುನಿಪುಂಗವಃ |
ಮದನೇನ ಸಸೈನ್ಯೇನ ನೀತೋ ಮೋಹವಶಂ ಬಲಾತ್ || ೨೦ ||

ಮಂಜುಘೋಷಾ ಸಮಾಗಮ್ಯ ಮುನಿಂ ದೃಷ್ಟ್ವಾ ತಥಾವಿಧಮ್ |
ಹಾವಭಾವಕಟಾಕ್ಷೈಸ್ತು ಮೋಹಯಾಮಾಸ ಚಾಂಗನಾ || ೨೧ ||

ಅಧಃ ಸಂಸ್ಥಾಪ್ಯ ವೀಣಾಂ ಸಾ ಸಸ್ವಜೇ ತಂ ಮುನೀಶ್ವರಮ್ |
ವಲ್ಲೀವಾಕುಲಿತಾ ವೃಕ್ಷಂ ವಾತವೇಗೇನ ವೇಪಿತಾ || ೨೨ ||

ಸೋऽಪಿ ರೇಮೇ ತಯಾ ಸಾರ್ಧಂ ಮೇಧಾವೀ ಮುನಿಪುಂಗವಃ |
ತಸ್ಮಿನ್ನೇವ ವನೋದ್ದೇಶೇ ದೃಷ್ಟ್ವಾ ತದ್ದೇಹಮುತ್ತಮಮ್ || ೨೩ ||

ಶಿವತತ್ತ್ವಂ ಸ ವಿಸ್ಮೃತ್ಯ ಕಾಮತತ್ತ್ವವಶಂ ಗತಃ |
ನ ದಿಶಾಂ ನ ದಿನಂ ಸೋऽಪಿ ರಮನ್ ಜಾನಾತಿ ಕಾಮುಕಃ || ೨೪ ||

---

ಮೇಧಾವಿಯು ಚ್ಯವನ ಋಷಿಗಳ ಶ್ರೇಷ್ಠವಾದ ಆಶ್ರಮದಲ್ಲಿ ವಾಸವಾಗಿದ್ದನು. ಆಶ್ರಮದಲ್ಲಿ ಆ ಮುನಿಶ್ರೇಷ್ಠನನ್ನು ನೋಡಿದಂತೆಲ್ಲ || ೧೮ || ಮದನ ಪೀಡಿತಳಾದ ಅಪ್ಸರೆಯು ಮಂದವಾಗಿ ಗಾಯನ ಮಾಡತೊಡಗಿದಳು. ಅವಳ ಗೆಜ್ಜೆಗಳ ಮತ್ತು ನಡುಪಟ್ಟಿಯ ಝಣ್ ಝಣ್ ಸಪ್ಪಳದಿಂದ ಆಶ್ರಮವೆಲ್ಲ ಪ್ರತಿಧ್ವನಿಸತೊಡಗಿತು || ೧೯ || ಭಾವಪರವಶಳಾಗಿ ಹಾಡುತ್ತಿರುವ ಅಪ್ಸರೆಯನ್ನು ನೋಡಿದಾಕ್ಷಣವೇ ಮೇಧಾವೀ ಮುನಿಯು ಸೈನ್ಯಸಮೇತನಾಗಿದ್ದ ಕಾಮನಿಂದ ಮೋಹವಶಗೊಳಿಸಲ್ಪಟ್ಟನು || ೨೦ || ಸುಮಧುರ ಧ್ವನಿಯಿಂದ ಮಂದವಾಗಿ ಗಾಯನ ಮಾಡುತ್ತಲಿದ್ದ ಅಪ್ಸರೆಯು ಮೋಹವಶನಾದ ಮುನಿಯನ್ನು ಕಂಡು ತನ್ನ ಹಾವ ಭಾವ ಕಟಾಕ್ಷಗಳಿಂದ ಅವನನ್ನು ಇನ್ನಷ್ಟು ಮೋಹಗೊಳಿಸಿದಳು || ೨೧ || ಅವಳು ತನ್ನ ಕೈಯಲ್ಲಿರುವ ವೀಣೆಯನ್ನು ಕೆಳಗಿಟ್ಟು ಮೋಹಿತನಾದ ಮುನೀಶ್ವರನನ್ನು, ಗಾಳಿಯ ರಭಸದಿಂದ ಆಕುಲಿತವಾದ ಬಳ್ಳಿಯು ವೃಕ್ಷವನ್ನು ಸುತ್ತಿ ನಿಲ್ಲುವಂತೆ, ಬಿಗಿದಪ್ಪಿ ಹಿಡಿದಳು || ೨೨ || ಅವಳ ಅಪ್ಪುಗೆಯಲ್ಲಿ ಮುನಿಪುಂಗವ ಮೇಧಾವಿಯೂ ಕೂಡ ಅವಳೊಂದಿಗೆ ರಮಿಸಿದನು. ವನದಲ್ಲಿ ಬಂದಿರುವ ಅಪ್ಸರೆಯ ಸುಂದರವಾದ ದೇಹದಿಂದ ಆಕರ್ಷಿತನಾದ ಮುನಿಯು || ೨೩ || ಶಿವತತ್ತ್ವವನ್ನು ಮರೆತು ಕಾಮತತ್ತ್ವದ ವಶನಾದನು. ಈ ರೀತಿ ಸ್ತ್ರೀಲೋಲುಪನಾದ ಅವನು ಅಪ್ಸರೆಯೊಂದಿಗೆ ಕ್ರೀಡಿಸುತ್ತ ದಿಕ್ಕು, ದಿನ ಯಾವುದನ್ನೂ ಅರಿಯದಂತಾದನು || ೨೪ || ಹೀಗೆ ವರ್ಣಾಶ್ರಮೋಚಿತವಾದ ಆಚಾರಗಳಿಲ್ಲದೇ ಮುನಿಯ ಬಹು ಕಾಲವು ಗತಿಸಲು

ಬಹುಲಶ್ಚ ಗತಃ ಕಾಲೋ ಮುನೇರಾಚಾರಲೋಪಕಃ (ತಃ) |
ಮಂಜುಘೋಷಾ ದೇವಲೋಕಗಮನಾಯೋಪಚಕ್ರಮೇ || ೨೫ ||

ಗಚ್ಛಂತೀ ಪ್ರತ್ಯುವಾಚಾಥ ರಮಂತಂ ಮುನಿಪುಂಗವಮ್ |
ಆದೇಶೋ ದೀಯತಾಂ ಬ್ರಹ್ಮನ್ ಸ್ವಧಾಮಗಮನಾಯ ಮೇ || ೨೬ ||

ಮೇಧಾವ್ಯುವಾಚ

ಅದ್ಯೈವ ತ್ವಂ ಸಮಾಯಾತಾ ಪ್ರದೋಷಾದೌ ವರಾನನೇ |
ಯಾವತ್ ಪ್ರಭಾತಸಂಧ್ಯಾ ಸ್ಯಾತ್ತಾವತ್ತಿಷ್ಠ ಮಮಾಂತಿಕೇ || ೨೭ ||

ಇತಿ ಶ್ರುತ್ವಾ ಮುನೇರ್ವಾಕ್ಯಂ ಭಯಭೀತಾ ಬಭೂವ ಸಾ |
ಪುನರ್ವೈ ರಮಯಾಮಾಸ ತಂ ಮುನಿಮೃಷಿಸತ್ತಮಮ್ || ೨೮ ||

ಮುನೇಃ ಶಾಪಭಯಾದ್ಭೀತಾ ಬಹುಲಾನ್ ಪರಿವತ್ಸರಾನ್ |
ವರ್ಷಾಣಾಂ ಸಪ್ತಪಂಚಾಶನ್ನವಮಾಸಾನ್ ದಿನತ್ರಯಮ್ || ೨೯ ||

ಸಾ ರೇಮೇ ಮುನಿನಾ ತೇನ ನಿಶಾರ್ಧಮಿವ ಚಾಭವತ್ |
ಸಾ ಚ ತಂ ಪ್ರತ್ಯುವಾಚಾಥ ತಸ್ಮಿನ್ ಕಾಲೇ ಗತೇ ಮುನಿಮ್ || ೩೦ ||

ಆದೇಶೋ ದೀಯತಾಂ ಬ್ರಹ್ಮನ್ ಗಂತವ್ಯಂ ಸ್ವಗೃಹಂ ಮಯಾ |
ಮೇಧಾವ್ಯುವಾಚ
ಪ್ರಾತಃ ಕಾಲೋಧುನೈವಾಸ್ತೇ ಶ್ರೂಯತಾಂ ವಚನಂ ಮಮ || ೩೧ ||

ಒಮ್ಮೆ ಮಂಜುಘೋಷೆಯು ತನ್ನ ದೇವಲೋಕವನ್ನು ಕುರಿತು ಹೊರಡಲು ಉದ್ಯುಕ್ತಳಾದಳು. ||೨೫|| ಆ ಸಮಯಕ್ಕೆ ತನ್ನೊಂದಿಗೆ ಕ್ರೀಡಿಸುತ್ತಿದ್ದ ಮುನಿಶ್ರೇಷ್ಠನನ್ನು ಕುರಿತು - ಹೇ ಪೂಜ್ಯನೇ, ನನ್ನ ಲೋಕಕ್ಕೆ ಹೋಗಲು ಇನ್ನು ಅನುಜ್ಞೆಯನ್ನು ಕೊಡಬೇಕು ಎಂದು ಪ್ರಾರ್ಥಿಸಿದಳು || ೨೬ || ಆಗ ಮೇಧಾವಿಯು - ಹೇ ವರಾನನೇ, ನೀನು ಇವತ್ತೇ ಪ್ರದೋಷದ ಮೊದಲು ಬಂದಿರುವಿ. ಬೆಳಗಾಗುವ ವರೆಗಾದರೂ ನನ್ನೊಡನೆ ಇರು ಎಂದೆನಲು || ೨೭ || ಮುನಿಯ ಈ ಮಾತನ್ನು ಕೇಳಿದ ಅಪ್ಸರೆಯು ಭಯಭೀತಳಾದಳು ಮತ್ತು ಆ ಮುನಿವರನೊಂದಿಗೆ ಮತ್ತೆ ರಮಿಸಿದಳು || ೨೮ || ಮುನಿಯ ಶಾಪಭಯದಿಂದ ಭೀತಳಾದ ಮಂಜುಘೋಷೆಯು ಮುಂದೆ ೫೭ ವರ್ಷ ೯ ತಿಂಗಳು, ೩ ದಿನಗಳವರೆಗೆ || ೨೯ || ಅವನೊಂದಿಗೆ ಕ್ರೀಡಿಸುತ್ತ ಇದ್ದಳು. ಇಷ್ಟು ದೀರ್ಘಕಾಲವು ಅರ್ಧ ರಾತ್ರಿ ಕಳೆದಂತೆ ಕಳೆದು ಹೋಯಿತು. ಅಷ್ಟು ವರ್ಷಗಳ ನಂತರ ಮಂಜುಘೋಷೆಯು ಪುನಃ ಮುನಿಯನ್ನು ಕುರಿತು ||೩೦|| ಹೇ ಬ್ರಹ್ಮನ್, ನನ್ನ ಲೋಕವನ್ನು ಕುರಿತು ಹೊರಡಲು ಇನ್ನು ದಯಮಾಡಿ ಅನುಜ್ಞೆಯನ್ನು ಕೊಡಿ ಎಂದು ಪ್ರಾರ್ಥಿಸಿದಳು ಆಗ ಮೇಧಾವಿಯು - ಹೇ ದೇವಿ,ಇದೀಗ

ಕುರ್ವೇ ಸಂಧ್ಯಾಮಹಂ ಯಾವತ್ತಾವತ್ತ್ವಂ ವೈ ಸ್ಥಿರಾ ಭವ |
ಇತಿ ವಾಕ್ಯಂ ಮುನೇಃ ಶ್ರುತ್ವಾ ಭಯೇನ ಚ ಸಮಾಕುಲಾ || ೩೨ ||

ಸ್ಮಿತಂ ಕೃತ್ವಾ ತು ಸಾ ಕಿಂಚಿತ್ ಪ್ರತ್ಯುವಾಚ ಸುವಿಸ್ಮಿತಾ |

ಅಪ್ಸರಾ ಉವಾಚ

ಕಿಯತ್ಪ್ರಮಾಣಾ ವಿಪ್ರೇಂದ್ರ ತವ ಸಂಧ್ಯಾ ಗತಾ ನ ವಾ || ೩೩ ||

ಮಯಿ ಪ್ರಸಾದಂ ಕೃತ್ವಾ ತು ಗತಃ ಕಾಲೋ ವಿಚಾರ್ಯತಾಮ್ |
ಇತಿ ತಸ್ಯಾ ವಚಃಶ್ರುತ್ವಾ ವಿಸ್ಮಯೋತ್ಫುಲ್ಲಲೋಚನಃ || ೩೪ ||

ಸ ಧ್ಯಾತ್ವಾ ಹೃದಿ ವಿಪ್ರೇಂದ್ರಃ ಪ್ರಮಾಣಮಕರೋತ್ತದಾ |
ಸಮಾಶ್ಚ ಸಪ್ತಪಂಚಾಶದ್ಗತಾ ಮಮ ತ್ವಯಾ ಸಹ || ೩೫ ||

ನೇತ್ರಾಭ್ಯಾಂ ವಿಸ್ಫುಲಿಂಗಾನ್ ಸ ಮುಂಚಮಾನೋಽತಿಕೋಪನಃ |
ಕಾಲರೂಪಾಂ ಚ ತಾಂ ದೃಷ್ಟ್ವಾ ತಪಸಃ ಕ್ಷಯಕಾರಿಣೀಮ್ || ೩೬ ||

ದುಃಖಾರ್ಜಿತಂ ಮಮ ತಪೋ ನೀತಂ ತದನಯಾ ಕ್ಷಯಮ್ |
ಸಕಂಪೋಷ್ಠೋ ಮುನಿಸ್ತತ್ರ ಪ್ರತ್ಯುವಾಚಾಕುಲೇಂದ್ರಿಯಃ || ೩೭ ||

---

ಪ್ರಾತಃಕಾಲವಾಗುತ್ತಿದೆ ನನ್ನ ಮಾತನ್ನು ಕೇಳು || ೩೧ || ನಾನು ಪ್ರಾತಃ ಸಂಧ್ಯಾವಂದನೆಯನ್ನು ಮಾಡಿ ಮುಗಿಸುವವರೆಗೆ ಇಲ್ಲಿಯೇ ನಿಲ್ಲು ಎಂದು ಹೇಳಲು, ಭೀತಳಾಗಿದ್ದ ಅಪ್ಸರೆಯು ||೩೨|| ತುಸು ನುಸುನಕ್ಕು ಆಶ್ಚರ್ಯದಿಂದ ಹೇಳಿದಳು - ಹೇ ವಿಪ್ರೇಂದ್ರ, ನಿಮ್ಮ ಸಂಧ್ಯಾಕ್ಕೆ ಎಷ್ಟು ಸಮಯವು ಬೇಕು? ಅದೇನು ಮುಗಿಯುತ್ತದೆಯೋ ಇಲ್ಲವೋ ? || ೩೩ || ದಯಮಾಡಿ ಅನುಗ್ರಹಮಾಡಿ ಇದುವರೆಗೆ ಗತಿಸಿ ಹೋಗಿರುವ ಸಮಯವನ್ನು ಲೆಖ್ಖದಿಂದ ತಿಳಿಯಿರಿ. ಅಪ್ಸರೆಯು ಇಂತು ನುಡಿಯಲು ಆಶ್ಚರ್ಯದಿಂದ ಅರಳಿದ ಕಣ್ಣುಗಳುಳ್ಳ ಮುನಿಯು || ೩೪ || ಅಂತರ್ಮುಖನಾಗಿ ಗತಿಸಿದ ಕಾಲವನ್ನು ಗಣನೆಯಿಂದ ತಿಳಿದು ಅಯ್ಯೋ ನಿನ್ನೊಂದಿಗೆ ೫೭ ವರ್ಷಗಳು ಗತಿಸಿವೆ ಎಂದು ಆ ಸ್ತ್ರೀಯನ್ನು ಕುರಿತು ಹೇಳಿದನು ||೩೫|| ಆಗ ಅತಿ ಕುಪಿತನಾದ ಮುನಿಯು ತನ್ನ ಕಣ್ಣುಗಳಿಂದ ಕೋಪಾಗ್ನಿಯ ಜ್ವಾಲೆಗಳನ್ನು ಹೊರಗೆಡಹುತ್ತ ತನ್ನ ತಪಸ್ಸಿನ ಕ್ಷಯಕ್ಕೆ ಕಾರಣಳಾದ ಕಾಲರೂಪಿಣಿಯಂತಿರುವ ಅವಳನ್ನು ನೋಡುತ್ತ || ೩೬ || ಬಹು ಕಷ್ಟದಿಂದ ಸಂಪಾದಿಸಿದ್ದ ತನ್ನ ತಪೋಬಲವು ಇವಳಿಂದ ನಾಶವಾಗಿ ಹೋಯಿತೆಂದು ಪರಿತಪಿಸಿದನು. ಕ್ರೋಧದಿಂದ ತುಟಿಗಳು ನಡಗುತ್ತಿರಲು ವ್ಯಾಕುಲೇಂದ್ರಿಯನಾಗಿದ್ದ ಮೇಧಾವಿ ಮುನಿಯು || ೩೭ || ಅವಳನ್ನು - ಹೇ ಪಾಪಿಷ್ಠಳೇ, ದುರಾಚಾರಿಣಿಯೇ, ಮೋಸಗಾರ್ತಿಯೇ, ಪಾತಕಪ್ರಿಯಳೇ, ನೀನು ಕೂಡಲೇ ಪಿಶಾಚಿಯಾಗು

ಸ ತಾಂ ಶಶಾಪ ಮೇಧಾವೀ ತ್ವಂ ಪಿಶಾಚೀ ಭವೇತಿ ಚ |
ಧಿಕ್ ತ್ವಾಂ ಪಾಪೇ ದುರಾಚಾರೇ ಕುಲಟೇ ಪಾತಕಪ್ರಿಯೇ || ೩೮ ||

ತಸ್ಯ ಶಾಪೇನ ಸಾ ದಗ್ಧಾ ವಿನಯಾವನತಾ ಸ್ಥಿತಾ |
ಉವಾಚ ವಚನಂ ಸುಭ್ರೂಃ ಪ್ರಸಾದಂ ವಾಂಛತೀ ಮುನಿಮ್ || ೩೯ ||

ಕೃತ್ವಾ ಪ್ರಸಾದಂ ವಿಪ್ರೇಂದ್ರ ಶಾಪಸ್ಯೋಪಶಮಂ ಕುರು |
ಸತಾಂ ಸಂಗೋ ಹಿ ಫಲತಿ ವಚೋಭಿಃ ಸಪ್ತಮೇ ಪದೇ || ೪೦ ||

ತ್ವಯಾ ಸಹ ಮಮ ಬ್ರಹ್ಮನ್ ಗತಾ ಸುಬಹವಃ ಸಮಾಃ |
ಏತಸ್ಮಾತ್ಕಾರಣಾತ್ ಸ್ವಾಮಿನ್ ಪ್ರಸಾದಂ ಕುರು ಸುವ್ರತ || ೪೧ ||

ಮುನಿರುವಾಚ

ಶೃಣು ಮದ್ವಚನಂ ಭದ್ರೇ ಶಾಪಾನುಗ್ರಹಕಾರಕಮ್ |
ಕಿಂ ಕರೋಮಿ ತ್ವಯಾ ಪಾಪೇ ಕ್ಷಯಂ ನೀತಂ ಮಹತ್ತಪಃ || ೪೨ ||

ಚೈತ್ರಸ್ಯ ಕೃಷ್ಣಪಕ್ಷೇ ಯಾ ಭವತ್ಯೇಕಾದಶೀ ಶುಭಾ |
ಪಾಪಮೋಚನಿಕಾ ನಾಮ್ನಾ ಸರ್ವಪಾಪಕ್ಷಯಂಕರೀ || ೪೩ ||

ತಸ್ಯಾ ವ್ರತೇ ಕೃತೇ ಸುಭ್ರು ಪಿಶಾಚತ್ವಂ ಪ್ರಯಾಸ್ಯತಿ |
ಇತ್ಯುಕ್ತ್ವಾ ತಾಂ ಸ ಮೇಧಾವೀ ಜಗಾಮ ಪಿತುರಾಶ್ರಮಮ್ || ೪೪ ||

ಎಂದು ಶಪಿಸಿದನು || ೩೮ || ಮುನಿಯ ಈ ಶಾಪದಿಂದ ಸುಟ್ಟಂತಾದ ಅಪ್ಸರೆಯು ವಿನಯದಿಂದ ಬಾಗಿ ಅವನ ಅನುಗ್ರಹವನ್ನು ಬಯಸುತ್ತ ನುಡಿದಳು || ೩೯ || ಹೇ ವಿಪ್ರೇಂದ್ರ, ನನ್ನಲ್ಲಿ ಪ್ರಸನ್ನರಾಗಿ ದಯಮಾಡಿ ಶಾಪದ ಉಪಶಮನವನ್ನು ಮಾಡಿರಿ. ಸಜ್ಜನರೊಂದಿಗೆ ಏಳು ಹೆಜ್ಜೆ ನಡೆದಾಗ ಅವರು ಹೇಳುವ ಮಾತು ಸತ್ಯವಾಗಿ ಪರಿಣಮಿಸುತ್ತದೆ ||೪೦|| ಹೇ ಬ್ರಹ್ಮನ್ - ನಿಮ್ಮೊಂದಿಗೆ ನಾನು ಅನೇಕ ವರ್ಷ ಕಳೆದಿದ್ದೇನೆ. ಈ ಕಾರಣದಿಂದಲಾದರೂ ನನ್ನ ಮೇಲೆ ಅನುಗ್ರಹ ಮಾಡಿರಿ || ೪೧ || ಆಗ ಮೇಧಾವಿಯು ಹೇಳಿದನು. ಹೇ ಭದ್ರೇ ಶಾಪವಿಮೋಚನೆಯ ಉಪಾಯವನ್ನು ತಿಳಿಸುವೆನು ಕೇಳು. ಏನು ಮಾಡಲಿ? ನಿನ್ನೊಂದಿಗಿದ್ದು ನನ್ನ ಮಹಾತಪಸ್ಸೆಲ್ಲ ನಾಶವಾಗಿ ಹೋಯಿತು || ೪೨ || ಚೈತ್ರ ಮಾಸದ ಕೃಷ್ಣಪಕ್ಷದಲ್ಲಿ ಯಾವ ಏಕಾದಶಿಯು ಬರುವದೋ ಅದು ಪಾಪಮೋಚನೀ ಎಂದು ಪ್ರಸಿದ್ಧವಾಗಿದ್ದು ಸಕಲ ಪಾಪಗಳನ್ನು ಕಳೆಯಲು ಸಮರ್ಥವಾಗಿದೆ || ೪೩ || ಆ ಏಕಾದಶೀ ವ್ರತವನ್ನು ಆಚರಿಸಿದೆಯಾದರೆ ನಿನ್ನ ಪಿಶಾಚ ಜನ್ಮವು ನೀಗುವುದು. ಅಪ್ಸರೆಗೆ ಈ ಉಪಾಯವನ್ನು ತಿಳಿಸಿ ಆ ಮೇಧಾವಿಯು ತನ್ನ ತಂದೆಯ ಆಶ್ರಮಕ್ಕೆ ಹೊರಟು ಹೋದನು || ೪೪ || ಆಶ್ರಮಕ್ಕೆ ಬಂದಿರುವ ಮಗನನ್ನು ಕಂಡು ಚ್ಯವನ ಋಷಿಗಳು - ಹೇ

ತಮಾಗತಂ ಸಮಾಲೋಕ್ಯ ಚ್ಯವನಃ ಪ್ರತ್ಯುವಾಚ ಹ |
ಕಿಮೇತದ್ವಿಹಿತಂ ಪುತ್ರ ತ್ವಯಾ ಪುಣ್ಯಕ್ಷಯಃ ಕೃತಃ || ೪೫ ||

ಮೇಧಾವ್ಯುವಾಚ

ಪಾಪಂ ಕೃತಂ ಮಹತ್ತಾತ ರಮಿತಾ ಚಾಪ್ಸರಾ ಮಯಾ |
ಪ್ರಾಯಶ್ಚಿತ್ತಂ ಬ್ರೂಹಿ ತಾತ ಯೇನ ಪಾಪಕ್ಷಯೋ ಭವೇತ್ || ೪೬ ||

ಚ್ಯವನ ಉವಾಚ

ಚೈತ್ರಸ್ಯ ಚಾಸಿತೇ ಪಕ್ಷೇ ನಾಮ್ನಾ ವೈ ಪಾಪಮೋಚನೀ |
ಅಸ್ಯಾ ವ್ರತೇ ಕೃತೇ ಪುತ್ರ ಪಾಪರಾಶಿಃ ಕ್ಷಯಂ ವ್ರಜೇತ್ || ೪೭ ||

ಇತಿ ಶ್ರುತ್ವಾ ಪಿತುರ್ವಾಕ್ಯಂ ಕೃತಂ ತೇನ ವ್ರತೋತ್ತಮಮ್ |
ಗತಂ ಪಾಪಂ ಕ್ಷಯಂ ತಸ್ಯ ಪುಣ್ಯಯುಕ್ತೋ ಬಭೂವ ಸಃ || ೪೮ ||

ಸಾಽಪ್ಯಥೋ ಮಂಜುಘೋಷಾ ಚ ಕೃತ್ವಾ ತದ್ವ್ರತಮುತ್ತಮಮ್ |
ಪಿಶಾಚತ್ವವಿನಿರ್ಮುಕ್ತಾ ಪಾಪಮೋಚನಿಕಾವ್ರತಾತ್ || ೪೯ ||

ದಿವ್ಯರೂಪಧರಾ ಸಾಪಿ ಗತಾ ನಾಕಂ ವರಾಪ್ಸರಾ |

ಲೋಮಶ ಉವಾಚ

ಇತ್ಥಂಭೂತಪ್ರಭಾವಂ ಹಿ ಪಾಪಮೋಚನಿಕಾವ್ರತಮ್ || ೫೦ ||

ಪುತ್ರನೇ, ಅದೇನು ಪುಣ್ಯಕ್ಷಯವಾದಂತಿದೆ ? ಏನು ಮಾಡಿದಿ ? ಎಂದು ಪ್ರಶ್ನಿಸಲು ||೪೫|| ಮೇಧಾವಿಯು ಹೇಳಿದನು - ಪೂಜ್ಯ ತಾತಪಾದರೇ, ಒಬ್ಬ ಅಪ್ಸರೆಯೊಂದಿಗೆ ಇಷ್ಟು ದಿನ ಕ್ರೀಡಿಸಿ ಮಹಾ ಪಾಪಕರ್ಮವನ್ನು ಮಾಡಿದ್ದೇನೆ. ಪೂಜ್ಯರೇ, ನನ್ನ ಪಾಪವು ನಾಶವಾಗುವುದಕ್ಕಾಗಿ ಪ್ರಾಯಶ್ಚಿತ್ತವನ್ನು ತಿಳಿಸಿ ಅನುಗ್ರಹಿಸಿರಿ || ೪೬ || ಇದನ್ನು ಕೇಳಿ ಚ್ಯವನ ಮುನಿಗಳು ಹೇಳಿದರು. ಅಯ್ಯಾ ಮಗನೇ, ಚೈತ್ರ ಕೃಷ್ಣ ಪಕ್ಷದಲ್ಲಿ ಬರುವ ಪಾಪಮೋಚನೀ ಎಂಬ ಏಕಾದಶೀ ವ್ರತವನ್ನು ಆಚರಿಸಿದೆಯಾದರೆ ನಿನ್ನ ಪಾಪರಾಶಿಯೆಲ್ಲವೂ ನಾಶವಾಗುವುದು || ೪೭ || ತಂದೆಯ ಮಾತಿನಂತೆ ಮೇಧಾವಿಯು ಪಾಪಮೋಚನೀ ಏಕಾದಶೀ ವ್ರತವನ್ನು ಆಚರಿಸಿದನು. ಇದರಿಂದ ಅವನ ಪಾಪಗಳೆಲ್ಲವೂ ನಾಶವಾಗಿ ಮತ್ತೆ ಮೊದಲಿನಂತೆ ತೇಜಸ್ವಿಯೂ ಪುಣ್ಯಸಂಪನ್ನನೂ ಆದನು || ೪೮ || ಇತ್ತ ಮಂಜುಘೋಷಾ ಅಪ್ಸರೆಯೂ ಕೂಡ ಶ್ರೇಷ್ಠವಾದ ಏಕಾದಶೀ ವ್ರತವನ್ನು ಆಚರಿಸಿ ಆ ವ್ರತ ಪ್ರಭಾವದಿಂದ ಪಿಶಾಚ ಜನ್ಮವನ್ನು ನೀಗಿ || ೪೯ || ಮೊದಲಿನಂತೆಯೇ ದಿವ್ಯವಾದ ರೂಪವನ್ನು ಧರಿಸಿ ಅಪ್ಸರೆಯು ಸ್ವರ್ಗಲೋಕಕ್ಕೆ ಹೊರಟು ಹೋದಳು. ಲೋಮಶ ಮುನಿಗಳು ಮಾಂಧಾತಾ ರಾಜನಿಗೆ

ಪಾಪಮೋಚನಿಕಾಂ ರಾಜನ್ ಯೇ ಕುರ್ವಂತಿ ಚ ಮಾನವಾಃ |
ತೇಷಾಂ ಪಾಪಂ ಚ ಯತ್ಕಿಂಚಿತ್ತತ್ಸರ್ವಂ ಕ್ಷಯತಾಂ ವ್ರಜೇತ್ || ೫೧ ||

ಪಠನಾಚ್ಛ್ರವಣಾದ್ರಾಜನ್ ಗೋಸಹಸ್ರಫಲಂ ಲಭೇತ್ |
ಬ್ರಹ್ಮಹಾ ಭ್ರೂಣಹಾ ಚೈವ ಸುರಾಪೋ ಗುರುತಲ್ಪಗಃ || ೫೨ ||

ವ್ರತಸ್ಯ ಚಾಸ್ಯ ಕರಣಾತ್ ಪಾಪಮುಕ್ತಾ ಭವಂತಿ ತೇ |
ಬಹುಪುರುಷಪ್ರದಂ ಹ್ಯೇತತ್ಕರಣಾದ್ವ್ರತಮುತ್ತಮಮ್ || ೫೩ ||

|| ಇತಿ ಶ್ರೀ ಭವಿಷೋತ್ತರಪುರಾಣೇ ಚೈತ್ರಕೃಷ್ಣಪಾಪಮೋಚನೀಏಕಾದಶೀ ವ್ರತ ಮಾಹಾತ್ಮ್ಯಂ ಸಂಪೂರ್ಣಂ ||

---

ಹೇಳುತ್ತಾರೆ ಹೇ ರಾಜಾ, ಈ ಪ್ರಕಾರವಾಗಿ ಪಾಪವೋಚನೀ ವ್ರತವು ಮಹಾಮಹಿಮೋಪೇತವಾಗಿದೆ || ೫೦ || ಹೇ ರಾಜಾ, ಈ ಪಾಪಮೋಚನಿಕಾ ವ್ರತವನ್ನು ಯಾರು ಆಚರಿಸುವರೋ ಅವರ ಯತ್ಕಿಂಚಿತ್ ಪಾಪವೆಲ್ಲಾ ನಾಶವಾಗಿ ಹೋಗುವುದು ||೫೧|| ಈ ವ್ರತದ ಮಹಾತ್ಮೆಯನ್ನು ಹೇಳುವುದರಿಂದಲೂ, ಕೇಳುವುದರಿಂದಲೂ ಒಂದು ಸಹಸ್ರ ಗೋದಾನದ ಫಲವು ಲಭಿಸುವುದು. ಬ್ರಹ್ಮಘಾತಿಯೂ, ಭ್ರೂಣಘಾತಿಯೂ, ಸುರಾಪಾನಿಯೂ ಹಾಗೂ ಗುರುಪತ್ನೀಗಾಮಿಯೂ ಇವರೆಲ್ಲರೂ || ೫೨ || ಈ ಪಾಪಮೋಚನೀ ವ್ರತಾಚರಣೆಯಿಂದ ತಾವು ಮಾಡಿದ ಸಕಲ ಪಾಪಗಳಿಂದ ಮುಕ್ತರಾಗುತ್ತಾರೆ. ಬಹು ಪುಣ್ಯವನ್ನು ಕೊಡುವುದರಿಂದ ಇದು ಅತ್ಯಂತ ಶ್ರೇಷ್ಠವಾದ ವ್ರತವಾಗಿದೆ. || ೫೩ ||

|| ಇಲ್ಲಿಗೆ ಶ್ರೀ ಭವಿಷ್ಯೋತ್ತರ ಪುರಾಣದಲ್ಲಿಯ ಚೈತ್ರಕೃಷ್ಣಪಕ್ಷದ ಪಾಪಮೋಚನೀ ಏಕಾದಶೀ ವ್ರತದ ಮಹಾತ್ಮೆಯು ಸಮಾಪ್ತವಾಯಿತು ||

|| ಶ್ರೀ ಕೃಷ್ಣಾರ್ಪಣಮಸ್ತು ||

# ಚೈತ್ರ ಶುಕ್ಲೈಕಾದಶೀ ವ್ರತ ಕಥಾ

**ಸೂತ ಉವಾಚ -**

**ದೇವಕೀನಂದನಂ ಕೃಷ್ಣಂ ವಸುದೇವಾತ್ಮಜಂ ಹರಿಮ್ |**
**ನಮಸ್ಕೃತ್ಯ ಪ್ರವಕ್ಷ್ಯಾಮಿ ಮಹಾಪಾತಕನಾಶನಮ್ || ೧ ||**

**ಯುಧಿಷ್ಠಿರಾಯ ಕೃಷ್ಣೇನ ಕಥಿತಾನಿ ಮಹಾತ್ಮನಾ |**
**ಏಕಾದಶೀಮಾಹಾತ್ಮ್ಯಾನಿ ನಾನಾಪಾಪಹರಾಣಿ ಚ || ೨ ||**

**ಅಷ್ಟಾದಶ ಪುರಾಣೇಭ್ಯೋ ವಿವಿಚ್ಯ ಸುಮಹಾತ್ಮನಾ |**
**ಚತುರ್ವಿಂಶತಿ ಸಂಖ್ಯಾನಿ ನಾನಾಖ್ಯಾನ್ಯೈರ್ಯುತಾನಿ ಚ || ೩ ||**

**ತಾನಿ ವಕ್ಷ್ಯಾಮಿ ಭೋ ವಿಪ್ರಾಃ ಶೃಣುಧ್ವಂ ಸುಸಮಾಹಿತಾಃ |**

**ಯುಧಿಷ್ಠಿರ ಉವಾಚ**

**ವಾಸುದೇವ ನಮಸ್ತುಭ್ಯಂ ಕಥಯಸ್ವ ಮಮಾಗ್ರತಃ || ೪ ||**

**ಚೈತ್ರಸ್ಯ ಶುಕ್ಲಪಕ್ಷೇ ತು ಕಿಂನಾಮ್ನೈಕಾದಶೀ ಭವೇತ್ |**

**ಶ್ರೀಕೃಷ್ಣ ಉವಾಚ**

**ಶೃಣುಷ್ವೈಕಮನಾ ರಾಜನ್ ಕಥಾಮೇತಾಂ ಪುರಾತನೀಮ್ || ೫ ||**

---

ಸೂತರು ಶೌನಕರನ್ನು ಕುರಿತು ಹೇಳುತ್ತಾರೆ - ಹೇ ಶೌನಕಾದಿ ಋಷಿಗಳೇ, ವಸುದೇವ ಸುತನಾದ, ದೇವಕೀನಂದನನಾದ ಹರಿ ಶ್ರೀಕೃಷ್ಣನನ್ನು ಭಕ್ತಿಯಿಂದ ನಮಸ್ಕರಿಸಿ ಮಹಾಪಾತಕಗಳನ್ನೂ ನಾಶ ಮಾಡುವ ಒಂದು ವ್ರತವನ್ನು ನಿಮಗೆ ತಿಳಿಸುತ್ತೇನೆ || ೧ || ಮಹಾತ್ಮನಾದ ಶ್ರೀಕೃಷ್ಣನು ನಾನಾಪಾಪಗಳನ್ನು ಕಳೆಯುವ ವಿವಿಧ ಏಕಾದಶೀ ವ್ರತಗಳ ಮಹಾತ್ಮೆಗಳನ್ನು ಯುಧಿಷ್ಠಿರನಿಗೆ ತಿಳಿಸಿರುವನು || ೨ || ಹದಿನೆಂಟು ಪುರಾಣಗಳಿಂದ ೨೪ ಏಕಾದಶೀ ವ್ರತಗಳ ಮಹಾತ್ಮೆಗಳನ್ನು ಆರಿಸಿ ವಿವಿಧ ಕಥಾಖ್ಯಾನಗಳೊಂದಿಗೆ ಹೇಳಿರುವನು ||೩|| ಭೋ ಶೌನಕಾದಿ ಋಷಿಗಳೇ, ಆ ಕಥೆಗಳನ್ನೇ ನಿಮಗೀಗ ತಿಳಿಸುವೆನು. ಏಕಾಗ್ರಚಿತ್ತರಾಗಿ ಶ್ರವಣ ಮಾಡಿರಿ. ಒಮ್ಮೆ ಶ್ರೀಕೃಷ್ಣನನ್ನು ಕುರಿತು - ಹೇ ಶ್ರೀ ಹರೇ, ವಾಸುದೇವ, ನಿನಗೆ ನಮಿಸುವೆನು || ೪ || ಚೈತ್ರ ಮಾಸದ ಶುಕ್ಲ ಪಕ್ಷದಲ್ಲಿ ಬರುವ ಏಕಾದಶಿಯು ಯಾವ ಹೆಸರಿನಿಂದ ಪ್ರಸಿದ್ಧವಾಗಿದೆ ಎಂಬುದನ್ನು ನನಗೆ ತಿಳಿಸಿ ಅನುಗ್ರಹಿಸು ಎಂದು ಯುಧಿಷ್ಠಿರನು ಪ್ರಾರ್ಥಿಸಲು ಶ್ರೀಕೃಷ್ಣನು ಹೇಳುತ್ತಾನೆ - ಹೇ ರಾಜಾ ಈ ವಿಷಯದಲ್ಲಿ || ೫ || ಹಿಂದಕ್ಕೆ

ವಸಿಷ್ಠೋ ಯಾಮಕಥಯತ್ ಪ್ರಾಕ್ ದಿಲೀಪಾಯ ಪೃಚ್ಛತೇ |

ದಿಲೀಪ ಉವಾಚ

ಭಗವನ್ ಶ್ರೋತುಮಿಚ್ಛಾಮಿ ಕಥಯಸ್ವ ಪ್ರಸಾದತಃ || ೬ ||

ಚೈತ್ರೇ ಮಾಸಿ ಸಿತೇ ಪಕ್ಷೇ ಕಿನ್ನಾಮ್ನೈಕಾದಶೀ ಭವೇತ್ |

ವಸಿಷ್ಠ ಉವಾಚ

ಸಾಧು ಪೃಷ್ಟಂ ನೃಪಶ್ರೇಷ್ಠ ಕಥಯಾಮಿ ತವಾಗ್ರತಃ || ೭ ||

ಚೈತ್ರಸ್ಯ ಶುಕ್ಲಪಕ್ಷೇ ತು ಕಾಮದಾ ನಾಮ ನಾಮತಃ |
ಏಕಾದಶೀ ಪುಣ್ಯತಮಾ ಪಾಪೇಂಧನದವಾನಲಃ || ೮ ||

ಶೃಣು ರಾಜನ್ ಕಥಾಮೇತಾಂ ಪಾಪಘ್ನೀಂ ಪುತ್ರದಾಯಿನೀಮ್ |
ಪುರಾ ರತ್ನಪುರೇ ರಮ್ಯೇ ಹೇಮರತ್ನವಿಭೂಷಿತೇ || ೯ ||

ಪುಂಡರೀಕಮುಖಾ ನಾಗಾ ನಿವಸಂತಿ ಮದೋತ್ಕಟಾಃ |
ತಸ್ಮಿನ್ ಪುರೇ ಪುಂಡರೀಕೋ ರಾಜಾ ರಾಜ್ಯಂ ಕರೋತಿ ಚ || ೧೦ ||

ಗಂಧರ್ವೈಃ ಕಿನ್ನರೈಶ್ಚೈವ ಹ್ಯಪ್ಸರೋಭಿಃ ಸುಸೇವ್ಯತೇ |
ವರಾಪ್ಸರಾ ತು ಲಲಿತಾ ಗಂಧರ್ವೋ ಲಲಿತಸ್ತಥಾ || ೧೧ ||

---

ದಿಲೀಪ ರಾಜನಿಗೆ ವಸಿಷ್ಠ ಮಹರ್ಷಿಯು ಹೇಳಿದ ಒಂದು ಪುರಾತನ ಕಥೆಯನ್ನು ತಿಳಿಸುವೆನು ಏಕಾಗ್ರಚಿತ್ತನಾಗಿ ಕೇಳು. ಹೇ ಪೂಜ್ಯರಾದ ವಸಿಷ್ಠರೇ, ಚೈತ್ರ ಮಾಸದ ಶುಕ್ಲ ಪಕ್ಷದಲ್ಲಿ ಬರುವ ಏಕಾದಶಿಯು ಯಾವ ಹೆಸರಿನಿಂದ ಪ್ರಸಿದ್ಧವಾಗಿದೆ ಎಂಬುದನ್ನು ದಯಮಾಡಿ ತಿಳಿಸಿರಿ ಎಂದು ದಿಲೀಪ ರಾಜನು ಪ್ರಾರ್ಥಿಸಲು ವಸಿಷ್ಠರು ಹೇಳಿದರು - ನೃಪಶ್ರೇಷ್ಠನೇ, ಯೋಗ್ಯವಾದ ಪ್ರಶ್ನೆಯನ್ನು ಮಾಡಿರುವಿ ನಿನಗೆ ಎಲ್ಲವನ್ನೂ ತಿಳಿಸುವೆನು ಕೇಳು ||೬||೭|| ಚೈತ್ರಮಾಸದ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಯು ಕಾಮದಾ ಎಂದು ಕರೆಸಿಕೊಳ್ಳಲ್ಪಡುತ್ತದೆ. ಈ ಏಕಾದಶಿಯು ಅತಿ ಪುಣ್ಯಪ್ರದವಾಗಿದೆ ಮತ್ತು ಪಾಪಗಳೆಂಬ ಉರುವಲಕ್ಕೆ ಬೆಂಕಿಯಂತಿದೆ || ೮ || ಹೇ ರಾಜಾ, ಪಾಪಗಳನ್ನೆಲ್ಲ ಕಳೆದು ಪುತ್ರಪ್ರದವಾದ ಈ ಏಕಾದಶಿಯ ಮಹಿಮಾ ಕಥೆಯನ್ನು ತಿಳಿಸುವೆನು ಕೇಳು. ಹಿಂದಕ್ಕೆ ಬಂಗಾರ ರತ್ನಗಳ ರಾಶಿಯಿಂದ ಶೋಭಿಸುವ ಮನೋಹರವಾದ ರತ್ನಪುರಿಯೆಂಬ ಪುರದಲ್ಲಿ || ೯ || ಪುಂಡರೀಕನೇ ಮೊದಲಾದ ಮದೋನ್ಮತ್ತರಾದ ಜನರು ವಾಸಿಸುತ್ತಲಿದ್ದರು. ಅವರಲ್ಲಿ ಪುಂಡರೀಕನೆಂಬುವನು ರಾಜನಾಗಿ ರಾಜ್ಯಭಾರವನ್ನು ನಡೆಸುತ್ತಲಿದ್ದನು. || ೧೦ || ಗಂಧರ್ವರು, ಕಿನ್ನರರು, ಅಪ್ಸರಗಣಗಳಿಂದ ಸೇವಿತವಾದ ಆ ಪುರದಲ್ಲಿ ಲಲಿತಾ ಎಂಬ

ಉಭೌ ರಾಗೇಣ ಸಂಯುಕ್ತೌ ದಂಪತೀ ಕಾಮಪೀಡಿತೌ |
ರೇಮಾತೇ ಸ್ವಗೃಹೇ ರಮ್ಯೇ ಧನಧಾನ್ಯಯುತೇ ಸದಾ || ೧೨ ||

ಲಲಿತಾಯಾಸ್ತು ಹೃದಯೇ ಪತಿರ್ವಸತಿ ಸರ್ವದಾ |
ಹೃದಯೇ ತಸ್ಯ ಲಲಿತಾ ನಿತ್ಯಂ ವಸತಿ ಭಾಮಿನೀ || ೧೩ ||

ಏಕದಾ ಪುಂಡರೀಕಾದ್ಯಾಃ ಕ್ರೀಡಂತಃ ಸದಸಿ ಸ್ಥಿತಾಃ |
ಗೀತಗಾನಂ ಪ್ರಕುರುತೇ ಲಲಿತೋ ದಯಿತಾಂ ವಿನಾ || ೧೪ ||

ಪದಬಂಧೇ ಸ್ಖಲಜ್ಜಿಹ್ವೋ ಬಭೂವ ಲಲಿತಾಂ ಸ್ಮರನ್ |
ಮನೋಭಾವಂ ವಿದಿತ್ವಾಸ್ಯ ಕರ್ಕಟೋ ನಾಗಸತ್ತಮಃ || ೧೫ ||

ಪದಬಂಧಚ್ಯುತಿಸ್ತಸ್ಯ ಪುಂಡರೀಕೇ ನ್ಯವೇದಯತ್ |
ಕ್ರೋಧಸಂರಕ್ತನಯನಃ ಪುಂಡರೀಕೋಽಭವತ್ತದಾ || ೧೬ ||

ಶಶಾಪ ಲಲಿತಂ ತತ್ರ ಮದನಾತುರಚೇತಸಮ್ |
ರಾಕ್ಷಸೋ ಭವ ದುರ್ಬುದ್ಧೇ ಕ್ರವ್ಯಾದಃ ಪುರುಷಾದಕಃ || ೧೭ ||

ಯತಃ ಪತ್ನೀವಶೋ ಜಾತೋ ಗಾಯಮಾನೋ ಮಮಾಗ್ರತಃ |
ವಚನಾತ್ತಸ್ಯ ರಾಜೇಂದ್ರ ರಕ್ಷೋರೂಪೋ ಬಭೂವ ಹ || ೧೮ ||

ಹೆಸರಿನ ಒಬ್ಬ ಅಪ್ಸರೆಯು ಮತ್ತು ಲಲಿತ ಎಂಬ ಹೆಸರಿನ ಒಬ್ಬ ಗಂಧರ್ವನು || ೧೧ || ಗಾಯನ ಮಾಡುತ್ತ ಇಬ್ಬರೂ ಪ್ರೇಮಾಸಕ್ತರಾಗಿ ಕಾಮಪೀಡಿತರಾದರು. ಆ ದಂಪತಿಗಳು ಧನ ಧಾನ್ಯಗಳಿಂದ ಸಮೃದ್ಧವಾದ ತಮ್ಮ ಮನೆಯಲ್ಲಿ ಸದಾ ಕ್ರೀಡಿಸುತ್ತ ಸಂತೋಷದಿಂದ ಇದ್ದರು || ೧೨ || ಲಲಿತಳ ಹೃದಯದಲ್ಲಿ ಸದಾ ಅವಳ ಗಂಡನದೇ ಧ್ಯಾನ, ಅದರಂತೆ ಲಲಿತನ ಹೃದಯದಲ್ಲಿ ನಿತ್ಯವೂ ಹೆಂಡತಿ ಲಲಿತೆಯದೇ ಧ್ಯಾನ || ೧೩ || ಒಮ್ಮೆ ಪುಂಡರೀಕಾದಿಗಳು ಸಭಾ ಗೃಹದಲ್ಲಿ ವಿನೋದದಿಂದ ಕಾಲ ಕಳೆಯುತ್ತಿರುವಾಗ ಲಲಿತ ಗಂಧರ್ವನು ತನ್ನ ಪತ್ನಿಯ ಅನುಪಸ್ಥಿತಿಯಲ್ಲೇ ಸಭೆಯಲ್ಲಿ ಗಾಯನ ಮಾಡತೊಡಗಿದನು || ೧೪ || ಆಗ ಒಮ್ಮೆಲೇ ಮಧ್ಯದಲ್ಲಿ ಪ್ರಿಯೆಯಾದ ಲಲಿತೆಯ ಸ್ಮರಣೆ ಬಂದು ಪದಬಂಧದಲ್ಲಿ ಭಂಗ ಉಂಟಾಯಿತು. ಆ ಕೂಡಲೇ ಲಲಿತ ಗಂಧರ್ವನ ಮನೋಗತವನ್ನರಿತ ಕರ್ಕೋಟ ಎಂಬ ನಾಗಶ್ರೇಷ್ಠನು || ೧೫ || ಗಾಯನದಲ್ಲಿ ಪದಬಂಧ ಭಂಗ ಉಂಟಾಗುತ್ತಿರುವುದನ್ನು ಪುಂಡರೀಕನಿಗೆ ನಿವೇದಿಸಿದನು. ಇದರಿಂದ ಕ್ರೋಧತಪ್ತನಾಗಿ ಕಣ್ಣುಗಳನ್ನು ಕೆಂಪಗೆ ಮಾಡಿದ ಪುಂಡರೀಕನು || ೧೬ || ಮದನ ಪೀಡಿತನಾದ ಲಲಿತನನ್ನು ಕುರಿತು - ಎಲೈ ದುರ್ಬುದ್ಧಿಯೇ ನನ್ನೆದುರು ಸಭೆಯಲ್ಲಿ ಗಾಯನ ಮಾಡುತ್ತಲಿದ್ದರೂ ಪತ್ನೀವಶನಾಗಿರುವುದರಿಂದ ನೀನೀಗಲೇ ಮಾಂಸ ಭಕ್ಷಕನೂ, ನರಭಕ್ಷಕನೂ, ಆದ

ರೌದ್ರಾನನೋ ವಿರೂಪಾಕ್ಷೋ ದೃಷ್ಟಮಾತ್ರೋ ಭಯಂಕರಃ |
ಬಾಹೂ ಯೋಜನವಿಸ್ತೀರ್ಣೌ ಮುಖಂ ಕಂಜರಸನ್ನಿಭಮ್ || ೧೯ ||

ಚಂದ್ರಸೂರ್ಯನಿಭೇ ನೇತ್ರೇ ಗ್ರೀವಾ ಪರ್ವತಸನ್ನಿಭಾ |
ನಾಸಾರಂಧ್ರೇ ತು ವಿವರೇ ಚಾಧರೌ ಯೋಜನಾರ್ಧಕೌ || ೨೦ ||

ಶರೀರಂ ತಸ್ಯ ರಾಜೇಂದ್ರ ಉಚ್ಛ್ರಿತಂ ಯೋಜನಾಷ್ಟಕಮ್ |
ಈದೃಶೋ ರಾಕ್ಷಸಃ ಸೋಽಭೂತ್ ಭುಂಜಾನಃ ಕರ್ಮಣಃ ಫಲಮ್ || ೨೧ ||

ಲಲಿತಾ ತಮಥಾಲೋಕ್ಯ ಸ್ವಪತಿಂ ವಿಕೃತಾಕೃತಿಮ್ |
ಚಿಂತಯಾಮಾಸ ಮನಸಾ ದುಃಖೇನ ಮಹತಾರ್ದಿತಾ || ೨೨ ||

ಕಿಂ ಕರೋಮಿ ಕ್ವ ಗಚ್ಛಾಮಿ ಪತಿಃ ಶಾಪೇನ ಪೀಡಿತಃ |
ಇತಿ ಸಂಸ್ಮೃತ್ಯ ಮನಸಾ ನ ಶರ್ಮ ಲಭತೇ ತು ಸಾ || ೨೩ ||

ಚಚಾರ ಪತಿನಾ ಸಾರ್ಧಂ ಲಲಿತಾ ಗಹನೇ ವನೇ |
ಬಭ್ರಾಮ ವಿಪಿನೇ ದುರ್ಗೇ ಕಾಮರೂಪಃ ಸಃ ರಾಕ್ಷಸಃ || ೨೪ ||

ರಾಕ್ಷಸನಾಗು ಎಂದು ಶಪಿಸಿದನು. ಹೇ ರಾಜೇಂದ್ರ ಪುಂಡರೀಕನ ಶಾಪದಂತೆ ಗಂಧರ್ವನು ಆ ಕ್ಷಣದಲ್ಲಿಯೇ ರಾಕ್ಷಸನಾದನು ||೧೭||೧೮|| ಭಯಂಕರವಾದ ಮುಖವುಳ್ಳವನೂ, ವಿರೂಪವಾದ ಕಣ್ಣುಗಳುಳ್ಳವನೂ, ನೋಡಲು ಭಯಾನಕನೂ ಆದ ಆ ರಾಕ್ಷಸನ ಬಾಹುಗಳು ಒಂದು ಯೋಜನ ದೀರ್ಘವಾಗಿದ್ದವು ಬಾಯಿಯು ಒಂದು ಆಳವಾದ ಕಂದರದಂತಿತ್ತು || ೧೯ || ಕಣ್ಣುಗಳು ಸೂರ್ಯ ಚಂದ್ರರಂತೆ ಪ್ರಕಾಶಮಾನವಾಗಿದ್ದವು. ಕುತ್ತಿಗೆಯು ಒಂದು ಉನ್ನತವಾದ ಪರ್ವತದಂತಿತ್ತು. ಮೂಗಿನ ಹೊರಳೆಗಳು ಗುಹೆಗಳಂತಿದ್ದವು. ತುಟಿಗಳು ಅರ್ಧ ಯೋಜನ ವಿಸ್ತೀರ್ಣವಾಗಿದ್ದವು ||೨೦|| ಹೇ ರಾಜೇಂದ್ರ, ಅವನ ದೇಹವಂತೂ ಎಂಟು ಯೋಜನ ಪ್ರದೇಶದಲ್ಲಿ ವ್ಯಾಪಿಸಿದ್ದಿತು. ಇಂಥ ಭಯಾನಕ ಕರಾಳ ರೂಪವನ್ನು ಧಾರಣ ಮಾಡಿ ರಾಕ್ಷಸ ರೂಪದಲ್ಲಿದ್ದು ಗಂಧರ್ವನು ತನ್ನ ಕರ್ಮದ ಫಲವನ್ನು ಭೋಗಿಸತೊಡಗಿದನು || ೨೧ || ತನ್ನ ಪತಿಯು ಇಂಥ ವಿಕೃತ ರೂಪಿಯಾಗಿರುವುದನ್ನು ಕಂಡು ಲಲಿತೆಯು ಬಹು ದುಃಖಿತಳಾಗಿ ಶೋಕಿಸತೊಡಗಿದಳು ||೨೨|| ಹಾ ! ಏನು ಮಾಡಲಿ, ಎಲ್ಲಿಗೆ ಹೋಗಲಿ, ನನ್ನ ಪತಿಯು ಹೀಗೆ ಶಾಪದಿಂದ ಪೀಡಿತನಾಗಿರುವನಲ್ಲ. ಹೀಗೆ ಮನಸ್ಸಿನಲ್ಲಿ ಒಂದೇ ಸಮನೇ ಚಿಂತಿಸುತ್ತಾ ದುಃಖಿಸುತ್ತಾ ಅವಳು ಒಂದು ಕ್ಷಣವೂ ಮನಸ್ಸಮಾಧಾನವನ್ನು ಹೊಂದಲಿಲ್ಲ || ೨೩ || ಪತಿವ್ರತೆಯಾದ ಅವಳು ತನ್ನ ರಾಕ್ಷಸ ಪತಿಯೊಂದಿಗೆ ಕೂಡಿಕೊಂಡೇ ಗಹನವಾದ ಆ ವನದಲ್ಲಿ, ಗಿರಿಕಂದರದಲ್ಲಿ ಸಂಚರಿಸತೊಡಗಿದಳು. ಮನ್ಮಥನಂತೆ ಸುಂದರನಾಗಿದ್ದ ಗಂಧರ್ವನು ಇಂತು ರಾಕ್ಷಸನಾಗಿ

ನಿರ್ಘೃಣಃ ಪಾಪನಿರತೋ ವಿರೂಪಃ ಪುರುಷಾದಕಃ |
ನ ಸುಖಂ ಲಭತೇ ರಾತ್ರೌ ದಿವಾ ತಾಪಪ್ರಪೀಡಿತಃ || ೨೫ ||

ಲಲಿತಾ ದುಃಖಿತಾತೀವ ಪತಿಂ ದೃಷ್ಟ್ವಾ ತಥಾವಿಧಮ್ |
ಭ್ರಮಂತೀ ತೇನ ಸಾರ್ಧಂ ಸಾ ರುದತೀ ಗಹನೇ ವನೇ || ೨೬ ||

ಕದಾಚಿದಗಮದ್ವಿಂಧ್ಯಶಿಖರೇ ಬಹುಕೌತುಕೇ |
ಋಷ್ಯಶೃಂಗಮುನೇಸ್ತತ್ರ ದೃಷ್ಟ್ವಾಶ್ರಮಪದಂ ಶುಭಮ್ || ೨೭ ||

ಶೀಘ್ರಂ ಜಗಾಮ ಲಲಿತಾ ವಿನಯಾವನತಾ ಸ್ಥಿತಾ |
ಪ್ರತ್ಯುವಾಚ ಮುನಿರ್ದೃಷ್ಟ್ವಾ ಕಾ ತ್ವಂ ಕಸ್ಯ ಸುತಾ ಶುಭೇ || ೨೮ ||

ಕಿಮರ್ಥಂ ಹಿ ಸಮಾಯಾತಾ ಸತ್ಯಂ ವದ ಮಮಾಗ್ರತಃ |

ಲಲಿತೋವಾಚ

ವೀರಧನ್ವೇತಿ ಗಂಧರ್ವಃ ಸುತಾ ತಸ್ಯ ಮಹಾತ್ಮನಃ || ೨೯ ||

ಲಲಿತಾಂ ನಾಮ ಮಾಂ ವಿದ್ಧಿ ಪತ್ಯರ್ಥಮಿಹ ಚಾಗತಾಮ್ |
ಭರ್ತಾ ಮೇ ಶಾಪದೋಷೇಣ ರಾಕ್ಷಸೋಽಭೂನ್ಮಹಾಮುನೇ || ೩೦ ||

---

|| ೨೪ || ಅತ್ಯಂತ ಕ್ರೂರನೂ, ಪಾಪ ಕರ್ಮಗಳಲ್ಲಿ ಆಸಕ್ತನೂ, ವಿರೂಪಿಯೂ, ನರಭಕ್ಷಕನೂ ಆಗಿ ರಾತ್ರಿಯಲ್ಲಿ ಯಾವ ಸುಖವನ್ನೂ ಹೊಂದದೇ ಹಗಲಿನಲ್ಲಿ ತಾಪದಿಂದ ಪೀಡಿತನಾಗಿ ಇರುತ್ತಿದ್ದನು. || ೨೫ || ಲಲಿತೆಯೂ ಕೂಡ ಅಂಥ ಅವಸ್ಥೆಯಲ್ಲಿದ್ದ ತನ್ನ ಪತಿಯನ್ನು ಕಂಡು ಅತ್ಯಂತ ದುಃಖಿತಳಾಗಿ ಅವನೊಂದಿಗೆ ಗಹನವಾದ ವನದಲ್ಲಿ ಶೋಕಿಸುತ್ತ ಸಂಚರಿಸತೊಡಗಿದಳು. || ೨೬ || ಹೀಗೆ ಅಲೆಯುತ್ತಿರುವಾಗ ಒಮ್ಮೆ ಅವಳು ವಿಂಧ್ಯ ಪರ್ವತದ ಅತ್ಯಾಶ್ಚರ್ಯಕರವಾದ ಒಂದು ಶಿಖರದ ಮೇಲೆ ಋಷ್ಯಶೃಂಗ ಮುನಿಯ ಶೋಭಾಯಮಾನವಾದ ಒಂದು ಆಶ್ರಮವನ್ನು ಕಂಡು || ೨೭ || ಕೂಡಲೇ ಅಲ್ಲಿಗೆ ಹೋದಳು ಮತ್ತು ಆಶ್ರಮದಲ್ಲಿದ್ದ ಮುನಿಗೆ ವಿನಯದಿಂದ ಬಾಗಿ ನಮಿಸಿ ನಿಂತಳು ಅವಳನ್ನು ಕಂಡ ಮುನಿಯು - ಹೇ ವರಾನನೇ ನೀನಾರು ? ನೀನಾರ ಮಗಳು ? || ೨೮ || ಏತಕ್ಕಾಗಿ ಇಲ್ಲಿಗೆ ಬಂದಿರುವಿ ? ಎಲ್ಲವನ್ನೂ ನನ್ನೆದುರು ಸತ್ಯವಾಗಿ ಹೇಳು ಎಂದೆನಲು ಲಲಿತಾಪ್ಸರೆಯು ಹೇಳಿದಳು - ಭೋ ಮಹಾತ್ಮರೇ, ನಾನು ವೀರಧನ್ವ ಎಂಬ ಗಂಧರ್ವನ ಮಗಳಾಗಿದ್ದೇನೆ. || ೨೯ || ನನ್ನ ಹೆಸರು ಲಲಿತಾ. ನನ್ನ ಪತಿಯ ಉದ್ಧಾರಕ್ಕಾಗಿ ಇಲ್ಲಿಗೆ ಬಂದಿರುವೆನು. ಹೇ ಮಹಾಮುನೇ, ಶಾಪದಿಂದ ನನ್ನ ಪತಿಯು ರಾಕ್ಷಸನಾಗಿದ್ದಾನೆ ||೩೦|| ಭಯಾನಕವಾದ ದೇಹವನ್ನು ಹೊಂದಿದ್ದಾನೆ. ದುರಾಚಾರಿಯಾಗಿದ್ದಾನೆ. ಅವನನ್ನು ನೋಡುವ

ರೌದ್ರರೂಪೋ ದುರಾಚಾರಸ್ತಂ ದೃಷ್ಟ್ವಾ ನಾಸ್ತಿ ಮೇ ಸುಖಮ್ |
ಸಾಂಪ್ರತಂ ಶಾಧಿ ಮಾಂ ಬ್ರಹ್ಮನ್ ಪ್ರಾಯಶ್ಚಿತ್ತಂ ವದ ಪ್ರಭೋ || ೩೧ ||

ಯೇನ ಪುಣ್ಯೇನ ವಿಪ್ರೇಂದ್ರ ರಾಕ್ಷಸತ್ವಾದ್ವಿಮುಚ್ಯತೇ |

ಋಷಿರುವಾಚ

ಚೈತ್ರಮಾಸಸ್ಯ ರಂಭೋರು ಶುಕ್ಲಪಕ್ಷಸ್ಯ ಸಾಂಪ್ರತಮ್ || ೩೨ ||

ಕಾಮದ್ಯೆಕಾದಶೀ ನಾಮ್ನಾ ಯಾ ಕೃತಾ ಕಾಮದಾ ನೃಣಾಮ್ |
ಕುರುಷ್ವ ತದ್ವ್ರತಂ ಭದ್ರೇ ವಿಧಿಪೂರ್ವಂ ಮಯೋದಿತಮ್ || ೩೩ ||

ತಸ್ಯ ವ್ರತಸ್ಯ ಯತ್ಪುಣ್ಯಂ ತತ್ಸ್ವಭರ್ತ್ರೇ ಪ್ರದೀಯತಾಮ್ |
ದತ್ತೇ ಪುಣ್ಯೇ ಕ್ಷಣಾತ್ತಸ್ಯ ಶಾಪದೋಷಃ ಪ್ರಶಾಮ್ಯತಿ || ೩೪ ||

ಇತಿ ಶ್ರುತ್ವಾ ಮುನೇರ್ವಾಕ್ಯಂ ಲಲಿತಾ ಹರ್ಷಿತಾಽಭವತ್ |
ಉಪೋಷ್ಯೈಕಾದಶೀ ರಾಜನ್ ದ್ವಾದಶೀದಿವಸೇ ತದಾ || ೩೫ ||

ವಿಪ್ರಸ್ಯೈವ ಸಮೀಪೇ ತು ವಾಸುದೇವಾಗ್ರತಃ ಸ್ಥಿತಾ |
ವಾಕ್ಯಮೂಚೇ ತು ಲಲಿತಾ ಸ್ವಪತ್ಯುಸ್ತ್ರಾರಣಾಯ ವೈ || ೩೬ ||

ನನಗೆ ಸುಖವೆಂಬುದಿಲ್ಲ. ಸಮಾಧಾನವಿಲ್ಲ. ಹೇ ಬ್ರಹ್ಮಜ್ಞಾನಿಗಳೇ, ಈಗ ದಯಮಾಡಿ ನನಗೆ ಪ್ರಾಯಶ್ಚಿತ್ತವನ್ನು ಉಪದೇಶಿಸಿರಿ || ೩೧ || ಯಾವ ಪುಣ್ಯ ಪ್ರಭಾವದಿಂಡ ನನ್ನ ಪತಿಯು ರಾಕ್ಷಸ ರೂಪದಿಂದ ಮುಕ್ತನಾಗುವನೋ ಅಂಥ ಉಪಾಯವನ್ನು ತಿಳಿಸಿರಿ. ಇದೆಲ್ಲವನ್ನು ಕೇಳಿದ ಋಷ್ಯಶೃಂಗರು ಹೇಳಿದರು - ಹೇ ರಂಭೋರು (ಬಾಳೆಯ ಕಂಬದಂತೆ ತೊಡೆಗಳುಳ್ಳ ಸುಂದರ ಸ್ತ್ರೀಯೇ), ಈಗ ಚೈತ್ರಮಾಸದ ಶುಕ್ಲಪಕ್ಷದ ಏಕಾದಶಿಯು ಬರುತ್ತಿದೆ. ||೩೨|| ಕಾಮದಾ ಎಂದು ಪ್ರಸಿದ್ಧವಾಗಿರುವ ಈ ಏಕಾದಶೀ ವ್ರತವನ್ನು ಆಚರಿಸುವ ಮನುಜರಿಗೆ ಕಾಮಪ್ರದವಾಗಿದೆ. ಹೇ ಭದ್ರೇ, ನಾನು ಹೇಳಿದ ವಿಧಾನದಂತೆ ಈ ಏಕಾದಶೀ ವ್ರತವನ್ನು ಆಚರಿಸಿ || ೩೩ || ಅದರಿಂದ ಬರುವ ಪುಣ್ಯವನ್ನೆಲ್ಲ ನಿನ್ನ ಗಂಡನಿಗೆ ಸಮರ್ಪಿಸು. ಮುಂದೆ ಕ್ಷಣಾರ್ಧದಲ್ಲಿ ನಿನ್ನ ಪತಿಯ ಶಾಪದೋಷದ ನಿವಾರಣೆಯಾಗುವುದು || ೩೪ || ಮುನಿವಾಕ್ಯವನ್ನು ಕೇಳಿ ಲಲಿತೆಯು ಹರ್ಷ ಭರಿತಳಾದಳು ಮತ್ತು ಕಾಮದಾ ಏಕಾದಶಿಯ ದಿನ ಉಪವಾಸದಿಂದ ಇದ್ದು ಮರುದಿನ ದ್ವಾದಶಿಯಂದು || ೩೫ || ಬ್ರಾಹ್ಮಣನ ಸನ್ನಿಧಿಯಲ್ಲಿ ಶ್ರೀಹರಿ ವಾಸುದೇವನ ಎದುರಿನಲ್ಲಿ ನಿಂತುಕೊಂಡು ತನ್ನ ಪತಿಯ ಉದ್ಧಾರಕ್ಕಾಗಿ ಹೀಗೆ ಹೇಳಿದಳು || ೩೬ || ಕಾಮದಾ ಏಕಾದಶೀ ವ್ರತವನ್ನು ನಾನೇನು ಆಚರಿಸಿರುವೆನೋ ಅದರ ಪುಣ್ಯ ಪ್ರಭಾವದಿಂದ ಈ ನನ್ನ ಪತಿಯ ರಾಕ್ಷಸ ದೇಹವು ದೂರವಾಗಲಿ. || ೩೭ || ಈ ರೀತಿ ಲಲಿತೆಯು ಹೇಳಿದಾಕ್ಷಣವೇ ರಾಕ್ಷಸ ದೇಹದಲ್ಲಿದ್ದ ಲಲಿತನು ತನ್ನ ಪಾಪಗಳನ್ನೆಲ್ಲ ಕಳೆದುಕೊಂಡು ಕೂಡಲೇ ಮೊದಲಿನಂತೆ

ಮಯಾ ತು ಯದ್ವ್ರತಂ ಚೀರ್ಣಂ ಕಾಮದಾಯಾ ಉಪೋಷಣಮ್ |
ತಸ್ಯ ಪುಣ್ಯಪ್ರಭಾವೇಣ ಗಚ್ಛತ್ವಸ್ಯ ಪಿಶಾಚತಾ || ३८ ||

ಲಲಿತಾ ವಚನಾದೇವಂ ವರ್ತಮಾನೋಽಪಿ ತತ್ಕ್ಷಣೇ |
ಗತಪಾಪಃ ಸ ಲಲಿತೋ ದಿವ್ಯದೇಹೋ ಬಭೂವ ಹ || ३८ ||

ರಾಕ್ಷಸತ್ವಂ ಗತಂ ತಸ್ಯ ಪ್ರಾಪ್ತೋ ಗಂಧರ್ವತಾಂ ಪುನಃ |
ಹೇಮರತ್ನಸಮಾಕೀರ್ಣೋ ರೇಮೇ ಲಲಿತಯಾ ಸಹ || ३೯ ||

ತೌ ವಿಮಾನಸಮಾರೂಢೌ ಪೂರ್ವರೂಪಾಧಿಕಾವುಭೌ |
ದಂಪತೀ ಚಾಪಿ ಶೋಭೇತಾಂ ಕಾಮದಾಯಾಃ ಪ್ರಭಾವತಃ || ४೦ ||

ಇತಿ ಜ್ಞಾತ್ವಾ ನೃಪಶ್ರೇಷ್ಠ ಕರ್ತವ್ಯೈಷಾ ಪ್ರಯತ್ನತಃ |
ಲೋಕಾನಾಂ ಚ ಹಿತಾರ್ಥಾಯ ತವಾಗ್ರೇ ಕಥಿತಾ ಮಯಾ || ४೧ ||

ಬ್ರಹ್ಮಹತ್ಯಾದಿಪಾಪಘ್ನಾ ಪಿಶಾಚತ್ವವಿನಾಶಿನೀ |
ನಾತಃ ಪರತರಾ ಕಾಚಿತ್ ತ್ರೈಲೋಕ್ಯೇ ಸಚರಾಚರೇ || ४२ ||

|| ಇತಿ ಶ್ರೀ ವಾರಾಹ ಪುರಾಣೇ
ಚೈತ್ರಶುಕ್ಲಕಾಮದೈಕಾದಶೀ ಮಾಹಾತ್ಮ್ಯಂ ಸಂಪೂರ್ಣಂ || ೧೦ ||

ದಿವ್ಯವಾದ ದೇಹವುಳ್ಳವನಾದನು || ೩೮ || ಸುವರ್ಣ ರತ್ನಾಭರಣಗಳಿಂದ ಅಲಂಕೃತನಾದ ಆ ಗಂಧರ್ವನು ಮತ್ತೆ ಲಲಿತಾಪ್ಸರೆಯನ್ನು ಹೊಂದಿ ಮೊದಲಿನಂತೆ ಅವಳೊಂದಿಗೆ ಕ್ರೀಡಿಸುತ್ತ ಸುಖವಾಗಿದ್ದನು || ೩೯ || ಅವರಿಬ್ಬರೂ ದಿವ್ಯವಾದ ವಿಮಾನದಲ್ಲಿ ಸಂಚರಿಸುತ್ತ ವಿಹರಿಸಿದರು. ಇಂತು ಕಾಮದಾ ವ್ರತದ ಪ್ರಭಾವದಿಂದ ಆ ದಂಪತಿಗಳಿಬ್ಬರೂ ಮೊದಲಿಗಿಂತ ಹೆಚ್ಚು ಕಾಂತಿಯುತರಾಗಿ ಶೋಭಿಸಿದರು || ೪೦ || ಹೇ ಧರ್ಮರಾಜಾ, ಕಾಮದಾ ವ್ರತದ ಈ ಪರಿಯಾಗಿರುವ ಮಹಿಮೆಯನ್ನರಿತು ತಪ್ಪದೇ ಈ ವ್ರತವನ್ನಾಚರಿಸಬೇಕು. ಸಕಲ ಜನರಿಗೂ, ಲೋಕಗಳಿಗೂ ಹಿತವಾಗಲೆಂಬ ಉದ್ದೇಶದಿಂದ ಈ ವ್ರತದ ಮಹಿಮೆಯನ್ನು ನಿನಗೆ ತಿಳಿಸಿರುವೆನು. || ೪೧ || ಈ ವ್ರತವು ಬ್ರಹ್ಮಹತ್ಯಾದಿಗಳಿಂದ ಬರುವ ಪಾಪವನ್ನು ಕಳೆಯುವದು. ಪಿಶಾಚಾದಿ ಜನ್ಮಗಳನ್ನು ದೂರ ಮಾಡುವದು. ತ್ರಿಲೋಕಗಳಲ್ಲಿ ಚರಾಚರ ಪ್ರಪಂಚದಲ್ಲಿ ಈ ವ್ರತಕ್ಕಿಂತ ಶ್ರೇಷ್ಠವಾದ ಬೇರೊಂದು ವ್ರತವಿಲ್ಲವೆಂದು ತಿಳಿ. || ೪೨ ||

|| ಇಲ್ಲಿಗೆ ಶ್ರೀ ವಾರಾಹಪುರಾಣದಲ್ಲಿಯ ಚೈತ್ರಶುಕ್ಲಪಕ್ಷದ ಕಾಮದಾಏಕಾದಶೀ
ವ್ರತ ಮಹಿಮೆಯು ಸಮಾಪ್ತವಾಯಿತು ||

|| ಶ್ರೀ ಕೃಷ್ಣಾರ್ಪಣಮಸ್ತು ||

# ವೈಶಾಖ ಕೃಷ್ಣೈಕಾದಶೀ ವ್ರತ ಕಥಾ

ಯುಧಿಷ್ಠಿರ ಉವಾಚ -

ವೈಶಾಖಸ್ಯಾಸಿತೇ ಪಕ್ಷೇ ಕಿಂ ನಾಮ್ನೈಕಾದಶೀ ಭವೇತ್ |
ಮಹಿಮಾನಂ ಕಥಯ ಮೇ ವಾಸುದೇವ ನಮೋಽಸ್ತು ತೇ || ೧ ||

ಶ್ರೀಕೃಷ್ಣ ಉವಾಚ

ಸೌಭಾಗ್ಯದಾಯಿನೀ ರಾಜನ್ ಇಹ ಲೋಕೇ ಪರತ್ರ ಚ |
ವೈಶಾಖಕೃಷ್ಣಪಕ್ಷೇ ತು ನಾಮ್ನಾ ಚೈವ ವರೂಥಿನೀ || ೨ ||

ವರೂಥಿನ್ಯಾ ವ್ರತೇನೈವ ಸೌಖ್ಯಂ ಭವತಿ ಸರ್ವದಾ |
ಪಾಪಹಾನಿಶ್ಚ ಭವತಿ ಸೌಭಾಗ್ಯಪ್ರಾಪ್ತಿರೇವ ಚ || ೩ ||

ದುರ್ಭಗಾಪಿ ಕರೋತ್ಯೇನಾಂ ಸ್ತ್ರೀ ಸೌಭಾಗ್ಯಮವಾಪ್ನುಯಾತ್ |
ಲೋಕಾನಾಂ ಚೈವ ಸರ್ವೇಷಾಂ ಭುಕ್ತಿಮುಕ್ತಿಪ್ರದಾಯಿನೀ || ೪ ||

ಸರ್ವಪಾಪಹರಾ ನೃಣಾಂ ಗರ್ಭವಾಸನಿಕೃಂತನೀ |
ವರೂಥಿನ್ಯಾ ವ್ರತೇನೈವ ಮಾಂಧಾತಾ ಸ್ವರ್ಗತಿಂ ಗತಃ || ೫ ||

---

ಹೇ ವಾಸುದೇವ ಶ್ರೀಹರೇ, ನಿನಗೆ ನಮಿಸುತ್ತೇನೆ. ವೈಶಾಖಕೃಷ್ಣಪಕ್ಷದ ಏಕಾದಶಿಯ ಹೆಸರೇನು ? ಮತ್ತು ಅದರ ಮಹಿಮೆಯೇನು ? ಎಂಬುದನ್ನು ದಯಮಾಡಿ ತಿಳಿಸಿ ಅನುಗ್ರಹಿಸು ಎಂದು ಯುಧಿಷ್ಠಿರನು ಪ್ರಾರ್ಥಿಸಲು || ೧ || ಶ್ರೀಕೃಷ್ಣನು ಹೇಳುತ್ತಾನೆ ಹೇ ರಾಜನ್, ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಕಲ್ಯಾಣವನ್ನುಂಟು ಮಾಡುವ ಸೌಭಾಗ್ಯಪ್ರದವಾದ ವೈಶಾಖಕೃಷ್ಣೈಕಾದಶಿಯು ವರೂಥಿನೀ ಎಂಬ ಹೆಸರಿನಿಂದ ಖ್ಯಾತವಾಗಿದೆ. || ೨ || ವರೂಥಿನೀ ವ್ರತದ ಅನುಷ್ಠಾನದಿಂದ ಸರ್ವದಾ ಸೌಖ್ಯವುಂಟಾಗುವುದು. ಪಾಪಹಾನಿಯೂ, ಸೌಭಾಗ್ಯ ಪ್ರಾಪ್ತಿಯೂ ಉಂಟಾಗುವವು ||೩|| ಈ ವ್ರತವನ್ನು ಆಚರಿಸುವುದರಿಂದ ದುರ್ಭಾಗಿನಿಯಾಗಿದ್ದ ಸ್ತ್ರೀಯೂ ಕೂಡಾ ಸೌಭಾಗ್ಯವನ್ನು ಹೊಂದುವಳು. ವ್ರತಾನುಷ್ಠಾನ ಮಾಡುವವರಿಗೆಲ್ಲ ಭುಕ್ತಿ ಮುಕ್ತಿಗಳು ಪ್ರಾಪ್ತವಾಗುವವು. ||೪|| ಈ ವ್ರತವು ಅವರ ಸರ್ವಪಾಪಗಳನ್ನು ಕಳೆಯುವದು. ಗರ್ಭವಾಸವು ಉಂಟಾಗದಂತೆ ಮಾಡುವದು. ಈ ವರೂಥಿನೀ ವ್ರತವನ್ನು ಆಚರಿಸಿದ್ದರಿಂದಲೇ ಮಾಂಧಾತಾ ರಾಜನು ಸ್ವರ್ಗಲೋಕವನ್ನು ಪಡೆದನು || ೫ || ಅದರಂತೆ ಧುಂಧುಮಾರ ಮೊದಲಾದ ಇತರ ಅನೇಕ ರಾಜರೂ ಕೂಡ ಸ್ವರ್ಗವನ್ನೂ ಹೊಂದಿದ್ದಾರೆ. ಈಶ್ವರನು ಬ್ರಹ್ಮಕಪಾಲದಿಂದ

ಧುಂಧುಮಾರಾದಯಶ್ಚಾನ್ಯೇ ರಾಜಾನೋ ಬಹವಸ್ತಥಾ |
ಬ್ರಹ್ಮಕಪಾಲನಿರ್ಮುಕ್ತೋ ಬಭೂವ ಭಗವಾನ್ ಭವಃ || ೬ ||

ದಶವರ್ಷಸಹಸ್ರಾಣಿ ತಪಸ್ತಪ್ಯತಿ ಯೋ ನರಃ |
ತತ್ತುಲ್ಯಂ ಫಲಮಾಪ್ನೋತಿ ವರೂಥಿನ್ಯಾ ವ್ರತಾದಪಿ || ೭ ||

ಕುರುಕ್ಷೇತ್ರೇ ರವಿಗ್ರಾಹೇ ಸ್ವರ್ಣಭಾರಂ ದದಾತಿ ಯಃ |
ತತ್ತುಲ್ಯಂ ಫಲಮಾಪ್ನೋತಿ ವರೂಥಿನ್ಯಾ ವ್ರತಾನ್ನರಃ || ೮ ||

ಶ್ರದ್ಧಾವಾನ್ ಯಸ್ತು ಕುರುತೇ ವರೂಥಿನ್ಯಾ ವ್ರತಂ ನರಃ |
ವಾಂಛಿತಂ ಲಭತೇ ಸೋಽಪಿ ಇಹಲೋಕೇ ಪರತ್ರ ಚ || ೯ ||

ಪವಿತ್ರಾ ಪಾವನೀ ಹ್ಯೇಷಾ ಮಹಾಪಾತಕನಾಶಿನೀ |
ಭುಕ್ತಿಮುಕ್ತಿಪ್ರದಾ ಹ್ಯೇಷಾ ಕರ್ತೃಣಾಂ ನೃಪಸತ್ತಮ || ೧೦ ||

ಅಶ್ವದಾನಾತ್ ನೃಪಶ್ರೇಷ್ಠ ಗಜದಾನಂ ವಿಶಿಷ್ಯತೇ |
ಗಜದಾನಾದ್ಭೂಮಿದಾನಂ ತಿಲದಾನಂ ತತೋಽಧಿಕಮ್ || ೧೧ ||

ತತಃ ಸುವರ್ಣದಾನಂ ತು ಹ್ಯನ್ನದಾನಂ ತತೋಽಧಿಕಮ್ |
ಅನ್ನದಾನಾತ್ಪರಂ ದಾನಂ ನ ಭೂತಂ ನ ಭವಿಷ್ಯತಿ || ೧೨ ||

---

ಮುಕ್ತನಾಗಿದ್ದಾನೆ || ೬ || ಹತ್ತು ಸಹಸ್ರವರ್ಷಗಳ ವರೆಗೆ ತಪಸ್ಸನ್ನು ಆಚರಿಸಿದ ಮನುಷ್ಯನು ಯಾವ ಫಲವನ್ನು ಪಡೆಯುವನೋ ಅದೇ ಫಲವನ್ನು ಈ ಒಂದು ವರೂಥಿನೀ ವ್ರತವನ್ನು ಆಚರಿಸಿದಾಗ ಹೊಂದುವನು || ೭ || ಸೂರ್ಯಗ್ರಹಣದ ಸಮಯದಲ್ಲಿ ಕುರುಕ್ಷೇತ್ರದಲ್ಲಿದ್ದು ಸುವರ್ಣಭಾರವನ್ನು ದಾನ ಮಾಡಿದಾಗ ಬರುವಷ್ಟೇ ಫಲವನ್ನು ಈ ವ್ರತಾನುಷ್ಠಾನ ಮಾತ್ರದಿಂದ ಹೊಂದುವನು || ೮ || ಶ್ರದ್ಧೆಯಿಂದ ಯುಕ್ತನಾಗಿ ಈ ವರೂಥಿನೀ ವ್ರತವನ್ನು ಆಚರಿಸುವವನು ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ತನ್ನ ಇಷ್ಟಾರ್ಥವನ್ನು ಹೊಂದುವನು || ೯ || ಹೇ ರಾಜಾ, ಈ ಏಕಾದಶಿಯು ಅತ್ಯಂತ ಪವಿತ್ರವಾಗಿದೆ, ಪಾವನವಾಗಿದೆ, ಮಹಾಪಾತಕಗಳ ನಾಶಿನಿಯಾಗಿದೆ. ಭುಕ್ತಿ ಮುಕ್ತಿಪ್ರದವಾಗಿದೆ || ೧೦ || ಹೇ ರಾಜನ್, ಅಶ್ವದಾನಕ್ಕಿಂತ ಗಜದಾನವು ಶ್ರೇಷ್ಠವು, ಗಜದಾನಕ್ಕಿಂತ ಭೂಮಿದಾನವೂ, ಭೂಮಿದಾನಕ್ಕಿಂತ ತಿಲದಾನವೂ || ೧೧ || ತಿಲದಾನಕ್ಕಿಂತ ಸುವರ್ಣದಾನವೂ ಹಾಗೂ ಸುವರ್ಣದಾನಕ್ಕಿಂತ ಅನ್ನದಾನವು ಶ್ರೇಷ್ಠವಾಗಿದೆ. ಇಂಥ ಅನ್ನದಾನಕ್ಕಿಂತಲೂ ಶ್ರೇಷ್ಠವಾದ ಬೇರೊಂದು ದಾನವು ಇದುವರೆಗೂ ಆಗಿರುವುದಿಲ್ಲ ಹಾಗೂ ಇನ್ನು ಮುಂದೆ ಆಗುವುದೂ ಇಲ್ಲ || ೧೨ || ಅನ್ನದಿಂದ ಪಿತೃಗಳು, ದೇವತೆಗಳು ಹಾಗೂ ಮನುಷ್ಯರಿಗೆ ತೃಪ್ತಿಯುಂಟಾಗುವುದು. ಹೇ ರಾಜಾ ಇಂಥ ಅನ್ನದಾನಕ್ಕೆ ಸಮಾನವಾದದ್ದು ಕನ್ಯಾದಾನವೆಂದು

ಪಿತೃದೇವಮನುಷ್ಯಾಣಾಂ ತೃಪ್ತಿರನ್ನೇನ ಜಾಯತೇ |
ತತ್ಸಮಂ ಕವಿಭಿಃ ಪ್ರೋಕ್ತಂ ಕನ್ಯಾದಾನಂ ನೃಪೋತ್ತಮ || ೧೩ ||

ಧೇನುದಾನಂ ಚ ತತ್ತುಲ್ಯಮಿತ್ಯಾಹ ಭಗವಾನ್ ಸ್ವಯಮ್ |
ಪ್ರೋಕ್ತೇಭ್ಯಃ ಸರ್ವದಾನೇಭ್ಯೋ ವಿದ್ಯಾದಾನಂ ವಿಶಿಷ್ಯತೇ || ೧೪ ||

ತತ್ಫಲಂ ಸಮವಾಪ್ನೋತಿ ನರಃ ಕೃತ್ವಾ ವರೂಥಿನೀಮ್ |
ಕನ್ಯಾವಿತ್ತೇನ ಜೀವಂತಿ ಯೇ ನರಾಃ ಪಾಪಮೋಹಿತಾಃ || ೧೫ ||

ತೇ ನರಾಃ ನರಕೇ ಯಾಂತಿ ಯಾವದಾಭೂತಸಂಪ್ಲವಮ್ |
ತಸ್ಮಾತ್ಸರ್ವಪ್ರಯತ್ನೇನ ನ ಗ್ರಾಹ್ಯಂ ಕನ್ಯಕಾಧನಮ್ || ೧೬ ||

ಯಶ್ಚ ಗೃಹ್ಣಾತಿ ಲೋಭೇನ ಕನ್ಯಾಂ ಕ್ರೀತ್ವಾ ಚ ತದ್ಧನಮ್ |
ಸೋಽನ್ಯಜನ್ಮನಿ ರಾಜೇಂದ್ರ ಹ್ಯೋತುರ್ಭವತಿ ನಿಶ್ಚಿತಮ್ || ೧೭ ||

ಕನ್ಯಾಂ ವಿತ್ತೇನ ಯೋ ದದ್ಯಾತ್ ಯಥಾಶಕ್ತಿ ಸ್ವಲಂಕೃತಾಮ್ |
ತತ್ಪುಣ್ಯಸಂಖ್ಯಾಂ ಕರ್ತುಂ ಹಿ ಚಿತ್ರಗುಪ್ತೋ ನ ವೇತ್ತ್ಯಲಮ್ || ೧೮ ||

ತತ್ಫಲಂ ಸಮವಾಪ್ನೋತಿ ನರಃ ಕೃತ್ವಾ ವರೂಥಿನೀಮ್ |
ಕಾಂಸ್ಯಂ ಮಾಂಸಂ ಮಸೂರಾನ್ನಂ ಚಣಕಾನ್ ಕೋದ್ರವಾಂಸ್ತಥಾ || ೧೯ ||

---

ಜ್ಞಾನಿಗಳು ಹೇಳುತ್ತಾರೆ || ೧೩ || ಗೋದಾನವೂ ಕನ್ಯಾದಾನಕ್ಕೆ ಸಮವೆಂದು ಸ್ವತಃ ಭಗವಂತನೇ ಹೇಳಿದ್ದಾನೆ. ಇದುವರೆಗೆ ಹೇಳಿದ ಎಲ್ಲ ದಾನಗಳಿಗಿಂತ ವಿದ್ಯಾದಾನವು ವಿಶಿಷ್ಟವಾದುದಾಗಿದೆ || ೧೪ || ಇಂಥ ವಿದ್ಯಾ ದಾನದಿಂದ ಬರುವಷ್ಟು ಫಲವನ್ನು ವರೂಥಿನೀ ವ್ರತವನ್ನು ಆಚರಿಸುವವನು ಪಡೆಯುವನು. ಕನ್ಯಾ ಧನದಿಂದ ಯಾರು ಜೀವಿಸುವರೋ ಪಾಪಮೋಹಿತರಾದ ಅವರು || ೧೫ || ಮಹಾಪ್ರಲಯವಾಗುವವರೆಗೆ ನರಕದಲ್ಲಿ ಬೀಳುವರು. ಆದ್ದರಿಂದ ಎಂಥದೇ ಪರಿಸ್ಥಿತಿಯಲ್ಲಿ ಕನ್ಯಾದಾನದ ಸಮಯದಲ್ಲಿ ಧನ ದ್ರವ್ಯಗಳನ್ನು ಸ್ವೀಕರಿಸಕೂಡದು || ೧೬ || ಯಾವನು ಲೋಭದಿಂದ ಧನವನ್ನು ಸ್ವೀಕರಿಸಿ ಕನ್ಯೆಯನ್ನು ಮಾರಾಟ ಮಾಡುವನೋ ಅವನು ಮರುಜನ್ಮದಲ್ಲಿ ನಿಶ್ಚಿತವಾಗಿ ಬೆಕ್ಕಿನ ಜನ್ಮವನ್ನು ಹೊಂದುತ್ತಾನೆ || ೧೭ || ಇನ್ನು ಯಾವನು ತನ್ನ ಶಕ್ತ್ಯನುಸಾರವಾಗಿ ಕನ್ನೆಯನ್ನು ಚೆನ್ನಾಗಿ ಅಲಂಕರಿಸಿ ದ್ರವ್ಯವನ್ನು ಕೊಟ್ಟು ದಾನ ಮಾಡುವನೋ ಅವನು ಸಂಪಾದಿಸುವ ಪುಣ್ಯ ಫಲದ ಮಿತಿಯನ್ನು ಚಿತ್ರಗುಪ್ತರೂ ಕೂಡ ಸಂಪೂರ್ಣವಾಗಿ ತಿಳಿಯಲಾರರು || ೧೮ || ಇಂಥ ಕನ್ಯಾದಾನದ ಫಲವನ್ನು ವರೂಥಿನೀ ವ್ರತವನ್ನಾಚರಿಸುವವನು ಪಡೆಯುವನು. ಈ ವ್ರತವನ್ನು ಆಚರಿಸುವ ಮನುಷ್ಯನು ದಶಮಿಯ ದಿನ ಕಂಚಿನ ಪಾತ್ರೆಯಲ್ಲಿ ಭೋಜನ,

ಶಾಕಂ ಮಧು ಪರಾನ್ನಂ ಚ ಪುನರ್ಭೋಜನಮೈಥುನೇ |
ವೈಷ್ಣವೋ ವ್ರತಕರ್ತಾ ಚ ದಶಮ್ಯಾಂ ದಶ ವರ್ಜಯೇತ್ || ೨೦ ||

ದ್ಯೂತಕ್ರೀಡಾಂ ಚ ನಿದ್ರಾಂ ಚ ತಾಂಬೂಲಂ ದಂತಧಾವನಮ್ |
ಪರಾಪವಾದಂ ಪೈಶುನ್ಯಂ ಪತಿತೈಃ ಸಹ ಭಾಷಣಮ್ || ೨೧ ||

ಕ್ರೋಧಂ ಚೈವಾನೃತಂ ವಾಕ್ಯಮೇಕಾದಶ್ಯಾಂ ವಿವರ್ಜಯೇತ್ |
ಕಾಂಸ್ಯಂ ಮಾಂಸಂ ಮಸೂರಾಂಶ್ಚ ಕ್ಷೌದ್ರಂ ವಿತಥಭಾಷಣಮ್ || ೨೨ ||

ವ್ಯಾಯಾಮಂ ಚ ಪ್ರವಾಸಂ ಚ ಪುನರ್ಭೋಜನಮೈಥುನೇ |
ಕ್ಷೌರಂ ತೈಲಂ ಪರಾನ್ನಂ ಚ ದ್ವಾದಶ್ಯಾಂ ಪರಿವರ್ಜಯೇತ್ || ೨೩ ||

ಅನೇನ ವಿಧಿನಾ ರಾಜನ್ ವಿಹಿತಾ ಯೈರ್ವರೂಥಿನೀ |
ಸರ್ವಂ ಪಾಪಕ್ಷಯಂ ಕೃತ್ವಾ ದದ್ಯಾತ್ ಪ್ರಾಂತೇಕ್ಷಯಾಂ ಗತಿಮ್ || ೨೪ ||

ರಾತ್ರೌ ಜಾಗರಣಂ ಕೃತ್ವಾ ಪೂಜಿತೋ ಯೈರ್ಜನಾರ್ದನಃ |
ಸರ್ವಪಾಪವಿನಿರ್ಮುಕ್ತಾಸ್ತೇ ಯಾಂತಿ ಪರಮಾಂ ಗತಿಮ್ || ೨೫ ||

ತಸ್ಮಾತ್ಸರ್ವಪ್ರಯತ್ನೇನ ಕರ್ತವ್ಯಾ ಪಾಪಭೀರುಭಿಃ |
ಕ್ಷಪಾರಿತನಯಾದ್ಭೀತೈರ್ನರದೇವ ವರೂಥಿನೀಮ್ || ೨೬ ||

---

ಮಾಂಸಭಕ್ಷಣ, ಮಸೂರಾನ್ನ, ಕಡಲೆ, ಕೋದ್ರವ || ೧೯ || ಶಾಕ, ಜೇನುತುಪ್ಪ, ಪರಾನ್ನ, ಪುನರ್ಭೋಜನ ಮತ್ತು ಮೈಥುನ ಈ ಹತ್ತನ್ನು ವ್ರತಕರ್ತನಾದ ವೈಷ್ಣವನು ದಶಮಿಯ ದಿನ ತ್ಯಜಿಸಬೇಕು. || ೨೦ || ದ್ಯೂತಕ್ರೀಡೆ, ನಿದ್ರಾ, ತಾಂಬೂಲ, ದಂತ ಧಾವನ, ಪರಾಪವಾದ, ಪೈಶುನ್ಯ, ಪತಿತರೊಂದಿಗೆ ಸಂಭಾಷಣೆ, || ೨೧ || ಕ್ರೋಧ, ಅಸತ್ಯಭಾಷಣ ಇವನ್ನು ಏಕಾದಶಿಯ ದಿನ ವರ್ಜಿಸಬೇಕು. ಕಂಚಿನ ಪಾತ್ರೆಯಲ್ಲಿ ಭೋಜನ, ಮಾಂಸ, ಮಸೂರ, ಕ್ಷೌದ್ರ, ಅಸತ್ಯ ಭಾಷಣ || ೨೨ || ವ್ಯಾಯಾಮ, ಪ್ರವಾಸ, ಪುನರ್ಭೋಜನ, ಮೈಥುನ, ಕ್ಷೌರ, ತೈಲ ಮತ್ತು ಪರಾನ್ನಭೋಜನ ಎಂಬ ಹನ್ನೆರಡನ್ನು ದ್ವಾದಶಿಯ ದಿನ ತ್ಯಜಿಸಬೇಕು || ೨೩ || ಹೇ ರಾಜನ್, ಈ ಕ್ರಮದಿಂದ ಆಚರಿಸಲ್ಪಟ್ಟ ವರೂಥಿನೀ ವ್ರತವು ವ್ರತಿಗಳ ಸಕಲಪಾಪಗಳನ್ನು ಕಳೆದು ಕೊನೆಗೆ ಅಕ್ಷಯವಾದ ಲೋಕವನ್ನು ದೊರಕಿಸಿಕೊಡುವದು || ೨೪ || ಆ ದಿನ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಿ ಜನಾರ್ದನನನ್ನು ಭಕ್ತಿಯಿಂದ ಪೂಜಿಸುವವರು ಸರ್ವ ಪಾಪಗಳಿಂದ ಮುಕ್ತರಾಗಿ ಪರಮಗತಿಯನ್ನು ಹೊಂದುವರು || ೨೫ || ಆದ್ದರಿಂದ ಪಾಪಭೀರುಗಳಾದವರು ಮತ್ತು ಯಮರಾಜನಿಂದ ಅಂಜುವವರು (ಕ್ಷಪಾ=ರಾತ್ರಿ, ಕ್ಷಪಾರಿ=ಸೂರ್ಯ, ಕ್ಷಪಾರಿತನಯ=ಸೂರ್ಯಪುತ್ರ) ಸರ್ವಪ್ರಯತ್ನಪೂರ್ವಕ ಈ ವರೂಥಿನೀ ವ್ರತವನ್ನು

ಪಠನಾಚ್ಛ್ರವಣಾದ್ರಾಜನ್ ಗೋಸಹಸ್ರಫಲಂ ಲಭೇತ್ |
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕೇ ಮಹೀಯತೇ || ೨೭ ||

|| ಇತಿ ಶ್ರೀಭವಿಷ್ಯೋತ್ತರಪುರಾಣೇ ವೈಶಾಖಕೃಷ್ಣವರೂಥಿನೀ ಏಕಾದಶೀವ್ರತ ಮಾಹಾತ್ಮ್ಯಂ ಸಂಪೂರ್ಣಮ್ || ೧೧ ||

---

ಆಚರಿಸಬೇಕು || ೨೬ || ಹೇ ರಾಜನ್, ಈ ವ್ರತದ ಮಹಿಮೆಯನ್ನು ಪಠಿಸುವವನೂ ಮತ್ತು ಶ್ರವಣ ಮಾಡುವವನೂ ಸಹಸ್ರ ಗೋದಾನದ ಫಲವನ್ನು ಹೊಂದುವನಲ್ಲದೇ, ಸಕಲಪಾಪಗಳಿಂದ ಮುಕ್ತನಾಗಿ ಮರಣಾನಂತರ ವಿಷ್ಣುಲೋಕವನ್ನು ಹೊಂದುವನು || ೨೭ ||

|| ಇಲ್ಲಿಗೆ ಶ್ರೀ ಭವಿಷ್ಯೋತ್ತರ ಪುರಾಣದಲ್ಲಿಯ ವೈಶಾಖ ಕೃಷ್ಣಪಕ್ಷದ ವರೂಥಿನೀ ಏಕಾದಶೀವ್ರತದ ಮಹಾತ್ಮೆಯು ಸಮಾಪ್ತವಾಯಿತು ||
|| ಶ್ರೀ ಕೃಷ್ಣಾರ್ಪಣಮಸ್ತು ||

# ವೈಶಾಖ ಶುಕ್ಲೈಕಾದಶೀ ವ್ರತ ಕಥಾ

ಯುಧಿಷ್ಠಿರ ಉವಾಚ -

ವೈಶಾಖಶುಕ್ಲಪಕ್ಷೇ ತು ಕಿಂ ನಾಮ್ನೈಕಾದಶೀ ಭವೇತ್ |
ಕಿಂ ಫಲಂ ಕೋ ವಿಧಿಸ್ತಸ್ಯಾಃ ಕಥಯಸ್ವ ಜನಾರ್ದನ || ೧ ||

ಶ್ರೀಕೃಷ್ಣ ಉವಾಚ

ಕಥಯಾಮಿ ಕಥಾಮೇತಾಂ ಶ್ರುಣು ತ್ವಂ ಧರ್ಮನಂದನ |
ವಸಿಷ್ಠೋ ಯಾಮಕಥಯತ್ಪುರಾ ರಾಮಾಯ ಪೃಚ್ಛತೇ || ೨ ||

ಶ್ರೀರಾಮ ಉವಾಚ

ಭಗವನ್ ಶ್ರೋತುಮಿಚ್ಛಾಮಿ ವ್ರತಾನಾಮುತ್ತಮಂ ವ್ರತಮ್ |
ಸರ್ವಪಾಪಕ್ಷಯಕರಂ ಸರ್ವದುಃಖನಿಕೃಂತನಮ್ || ೩ ||

ಮಯಾ ದುಃಖಾನಿ ಭುಕ್ತಾನಿ ಸೀತಾವಿರಹಜಾನಿ ವೈ |
ತತೋಽಹಂ ಭಯಭೀತೋಸ್ಮಿ ಪೃಚ್ಛಾಮಿ ತ್ವಾಂ ಮಹಾಮುನೇ || ೪ ||

ವಸಿಷ್ಠ ಉವಾಚ

ಸಾಧು ಪೃಷ್ಟಂ ತ್ವಯಾ ರಾಮ ತವೈಷಾ ನೈಷ್ಠಿಕೀ ಮತಿಃ |
ತ್ವನ್ನಾಮಗ್ರಹಣೇನೈವ ಪೂತೋ ಭವತಿ ಮಾನವಃ || ೫ ||

---

ಹೇ ಶ್ರೀಹರೇ ಜನಾರ್ದನಾ, ವೈಶಾಖ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು ? ಆ ಏಕಾದಶೀವ್ರತಾನುಷ್ಠಾನದ ಫಲವೇನು ? ಮತ್ತು ವ್ರತದ ವಿಧಾನವಾವುದು? ಇದೆಲ್ಲವನ್ನೂ ಹೇಳಿ ಅನುಗ್ರಹಿಸಬೇಕು ಎಂದು ಯುಧಿಷ್ಠಿರನು ಪ್ರಾರ್ಥಿಸಲು || ೧ || ಶ್ರೀ ಕೃಷ್ಣನು ಹೇಳುತ್ತಾನೆ - ಹೇ ಧರ್ಮರಾಜಾ, ನೀನು ಕೇಳಿದುದೆಲ್ಲವನ್ನೂ ತಿಳಸುವೆನು. ವ್ರತದ ಕಥೆಯನ್ನೂ ಹೇಳುವೆನು. ನೀನು ಕೇಳುವಂಥವನಾಗು. ಹಿಂದಕ್ಕೆ ಶ್ರೀರಾಮನಿಗೆ ವಸಿಷ್ಠರು ಇದೇ ವಿಷಯಕ್ಕೆ ಹೇಳಿದುದನ್ನೇ ನಿನಗೀಗ ತಿಳಿಸುವೆನು || ೨ || ಶ್ರೀ ರಾಮಚಂದ್ರನು ವಸಿಷ್ಠರನ್ನು ಕುರಿತು - ಪೂಜ್ಯ ಮಹರ್ಷಿಗಳೇ, ವ್ರತಗಳಲ್ಲಿ ಶ್ರೇಷ್ಠವಾದ ವ್ರತವನ್ನು ತಿಳಿಯಬಯಸಿದ್ದೇನೆ. ಸರ್ವಪಾಪಗಳನ್ನು ನಾಶಮಾಡುವ ಮತ್ತು ಸಕಲ ದುಃಖಗಳನ್ನು ಕಳೆಯುವ ಅತಿ ಶ್ರೇಷ್ಠವಾದ ವ್ರತದ ಬಗ್ಗೆ ತಿಳಿಸುವಂಥವರಾಗಿರಿ || ೩ || ಸೀತಾವಿರಹದಿಂದ ಉಂಟಾದ ಅನೇಕ ದುಃಖಗಳನ್ನು ಅನುಭೋಗಿಸಿದ್ದೇನೆ. ಆದ್ದರಿಂದ ಹೇ ಮಹಾಮುನೇ, ಭೀತನಾದ ನಾನು ನಿಮ್ಮನ್ನು ಪ್ರಶ್ನಿಸುತ್ತಿದ್ದೇನೆ ಎಂದು ನುಡಿಯಲು ||೪|| ವಸಿಷ್ಠರು ಹೇಳುತ್ತಾರೆ - ಹೇ ಪ್ರಭೋ, ಶ್ರೀರಾಮಚಂದ್ರ, ಬಹು ಉತ್ತಮವಾದ

ತಥಾಪಿ ಕಥಯಿಷ್ಯಾಮಿ ಲೋಕಾನಾಂ ಹಿತಕಾಮ್ಯಯಾ |
ಪವಿತ್ರಂ ಪಾವನಾನಾಂ ಚ ವ್ರತಾನಾಮುತ್ತಮಂ ವ್ರತಮ್ || ೬ ||

ವೈಶಾಖಸ್ಯ ಸಿತೇ ಪಕ್ಷೇ ದ್ವಾದಶೀ ರಾಮ ಯಾ ಭವೇತ್ |
ಮೋಹಿನೀ ನಾಮ ಸಾ ಪ್ರೋಕ್ತಾ ಸರ್ವಪಾಪಹರಾ ಪರಾ || ೭ ||

ಮೋಹಜಾಲಾತ್ ಪ್ರಮುಚ್ಯೇತ ಪಾತಕಾನಾಂ ಸಮೂಹತಃ |
ಅಸ್ಯಾ ವ್ರತಪ್ರಭಾವೇಣ ಸತ್ಯಂ ಸತ್ಯಂ ವದಾಮ್ಯಹಮ್ || ೮ ||

ಅತಸ್ತು ಕಾರಣಾದ್ರಾಮ ಕರ್ತವ್ಯೈಷಾ ಭವಾದೃಶೈಃ |
ಪಾತಕಾನಾಂ ಕ್ಷಯಕರೀ ಮಹಾದುಃಖವಿನಾಶಿನೀ || ೯ ||

ಶೃಣುಷ್ವೈಕಮನಾ ರಾಮ ಕಥಾಂ ಪುಣ್ಯಪ್ರದಾಂ ಶುಭಾಮ್ |
ಯಸ್ಯಾಃ ಶ್ರವಣಮಾತ್ರೇಣ ಮಹಾಪಾಪಂ ಪ್ರಣಶ್ಯತಿ || ೧೦ ||

ಸರಸ್ವತ್ಯಾಸ್ತಟೇ ರಮ್ಯೇ ಪುರೀ ಭದ್ರಾವತೀ ಶುಭಾ |
ದ್ಯುತಿಮಾನ್ನಾಮ ನೃಪತಿಸ್ತತ್ರ ರಾಜ್ಯಂ ಕರೋತಿ ವೈ || ೧೧ ||

---

ಪ್ರಶ್ನೆಯನ್ನು ಮಾಡಿರುವಿ. ನಿನ್ನ ಬುದ್ಧಿಯು ಅತಿ ಶ್ರದ್ಧಾಯುಕ್ತವಾಗಿದೆ. ನಿನ್ನ ನಾಮಸ್ಮರಣೆ ಮಾತ್ರದಿಂದಲೇ ನರನು ಪವಿತ್ರನಾಗುವನು || ೫ || ನೀನು ಇಷ್ಟು ಮಹಿಮೋಪೇತನಾಗಿದ್ದರೂ ಲೋಕದ ಜನರಿಗೆ ಹಿತವಾಗಲೆಂಬ ಉದ್ದೇಶದಿಂದ ಮಾತ್ರ ಅತ್ಯಂತ ಪವಿತ್ರವಾದ ಮತ್ತು ವ್ರತಗಳಲ್ಲಿ ಶ್ರೇಷ್ಠವಾದ ಈ ವ್ರತದ ಬಗ್ಗೆ ತಿಳಿಸುವೆನು ಕೇಳು || ೬ || ಹೇ ಶ್ರೀರಾಮಚಂದ್ರ, ವೈಶಾಖ ಮಾಸದ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಯು ಸಕಲ ಪಾಪಗಳನ್ನು ನಾಶ ಮಾಡುವ ಮೋಹಿನೀ ಎಂದು ಪ್ರಸಿದ್ಧವಾದ ಶ್ರೇಷ್ಠ ದಿನವಾಗಿದೆ || ೭ || ಈ ವ್ರತದ ಪ್ರಭಾವದಿಂದ ಮನುಷ್ಯನು ಮೋಹಜಾಲ ಮತ್ತು ಪಾತಕಗಳ ಸಮೂಹದಿಂದ ಖಂಡಿತವಾಗಿಯೂ ಮುಕ್ತನಾಗುವನು. ಈ ವಿಷಯವನ್ನು ಪ್ರಮಾಣಪೂರ್ವಕ ಹೇಳುತ್ತಿದ್ದೇನೆ || ೮ || ಈ ಕಾರಣದಿಂದಲೇ ಪಾತಕಗಳನ್ನು ಕಳೆಯುವ, ಮಹಾದುಃಖವನ್ನು ನಾಶಮಾಡುವ ಈ ವ್ರತವನ್ನು ನಿನ್ನಂಥವರು ತಪ್ಪದೇ ಆಚರಿಸಬೇಕು || ೯ || ಶ್ರೀರಾಮಚಂದ್ರ ಪ್ರಭೋ, ಪುಣ್ಯಪ್ರದವಾದ, ಶುಭಕರವಾದ ಈ ವ್ರತದ ಕಥೆಯನ್ನು ತಿಳಿಸುವೆನು, ಏಕಾಗ್ರಚಿತ್ತನಾಗಿ ಕೇಳು. ಈ ಕಥೆಯ ಶ್ರವಣಮಾತ್ರದಿಂದಲೇ ಮಹಾಪಾಪವು ನಾಶವಾಗುವುದು || ೧೦ || ಹಿಂದಕ್ಕೆ ಸರಸ್ವತೀ ನದಿಯ ಮನೋಹರವಾದ ತೀರದಲ್ಲಿ ಭದ್ರಾವತಿ ಎಂಬ ಹೆಸರಿನ ಒಂದು ಪುರವು ಶೋಭಿಸುತ್ತಿದ್ದಿತು. ಆ ಪುರದಲ್ಲಿ ದ್ಯುತಿಮಾನ್ ಎಂಬ ನೃಪತಿಯು ರಾಜ್ಯ ಭಾರ ಮಾಡುತ್ತಲಿದ್ದನು || ೧೧ || ಹೇ ಶ್ರೀರಾಮ, ಚಂದ್ರವಂಶದಲ್ಲಿ ಹುಟ್ಟಿದ ಆ ರಾಜನು ಅತ್ಯಂತ ಧೈರ್ಯಶಾಲಿಯೂ, ಸತ್ಯಪ್ರತಿಜ್ಞನೂ ಆಗಿದ್ದನು. ಅದೇ ಪುರದಲ್ಲಿ ಧನ ಧಾನ್ಯ

ಸೋಮವಂಶೋದ್ಭವೋ ರಾಮ ಧೃತಿಮಾನ್ ಸತ್ಯಸಾಗರಃ |
ತತ್ರ ವೈಶ್ಯೋ ನಿವಸತಿ ಧನಧಾನ್ಯಸಮೃದ್ಧಿಮಾನ್ || ೧೨ ||

ಧನಪಾಲ ಇತಿಖ್ಯಾತಃ ಪುಣ್ಯಕರ್ಮಪ್ರವರ್ತಕಃ |
ಪ್ರಪಾಪಾವತ್ರಾದ್ಯಾಯತನತಡಾಗಾರಾಮಕಾರಕಃ || ೧೩ ||

ವಿಷ್ಣುಭಕ್ತಿಪರಃ ಶಾಂತಸ್ತಸ್ಯಾಸನ್ ಪಂಚ ಪುತ್ರಕಾಃ |
ಸುಮನಾ ದ್ಯುತಿಮಾಂಶ್ಚೈವ ಮೇಧಾವೀ ಸುಕೃತೀ ತಥಾ || ೧೪ ||

ಪಂಚಮೋ ಧೃಷ್ಟಬುದ್ಧಿಶ್ಚ ಮಹಾಪಾಪರತಃ ಸದಾ |
ವಾರಸ್ತ್ರೀಸಂಗನಿರತೋ ವಿಟಗೋಷ್ಠೀವಿಶಾರದಃ || ೧೫ ||

ದ್ಯೂತಾದಿವ್ಯಸನಾಸಕ್ತಃ ಪರಸ್ತ್ರೀರತಿಲಾಲಸಃ |
ನ ದೇವಾಂಶ್ಚಾತಿಥೀನ್ ವೃದ್ಧಾನ್ ಪಿತೃಂಶ್ಚಾರ್ಚೇದ್ದ್ವಿಜಾನಪಿ || ೧೬ ||

ಅನ್ಯಾಯಕರ್ತಾ ದುಷ್ಟಾತ್ಮಾ ಪಿತುರ್ದ್ರವ್ಯಕ್ಷಯಂಕರಃ |
ಅಭಕ್ಷ್ಯಭಕ್ಷಕಃ ಪಾಪಃ ಸುರಾಪಾನರತಃ ಸದಾ || ೧೭ ||

ವೇಶ್ಯಾಕಂಠೇ ಕ್ಷಿಪ್ತಬಾಹುರ್ಭ್ರಮನ್ ದುಷ್ಟಶ್ಚತುಷ್ಪಥೇ |
ಪಿತ್ರಾ ನಿಷ್ಕಾಸಿತೋ ಗೇಹಾತ್ ಪರಿತ್ಯಕ್ತಶ್ಚ ಬಾಂಧವೈಃ || ೧೮ ||

---

ಸಂಪತ್ತಿನಿಂದ ಶ್ರೀಮಂತನಾಗಿದ್ದ ಒಬ್ಬ ವೈಶ್ಯನು ವಾಸವಾಗಿದ್ದನು. || ೧೨ || ಧನಪಾಲ ಎಂಬ ಹೆಸರಿನ ಆ ವೈಶ್ಯನು ಸದಾ ಪುಣ್ಯಕರ್ಮಗಳಲ್ಲಿ ಆಸಕ್ತನೂ, ಅರವಟ್ಟಿಗೆ, ಯಜ್ಞಶಾಲೆ, ಕೆರೆ, ಉಪವನ ಮುಂತಾದವುಗಳನ್ನು ಕಟ್ಟಿಸುವವನೂ ಆಗಿದ್ದನು. || ೧೩ || ವಿಷ್ಣುಭಕ್ತನೂ, ಅತಿ ಶಾಂತ ಸ್ವಭಾವದವನೂ ಆದ ಧನಪಾಲನಿಗೆ ಸುಮನ, ದ್ಯುತಿಮಾನ್, ಮೇಧಾವೀ, ಸುಕೃತೀ ಮತ್ತು ಧೃಷ್ಟಬುದ್ಧಿ ಎಂಬ ಹೆಸರಿನ ಐದು ಜನ ಮಕ್ಕಳಿದ್ದರು. || ೧೪ || ಕೊನೆಯವನಾದ ಧೃಷ್ಟಬುದ್ಧಿಯು ಸದಾ ಮಹಾ ಪಾಪಕರ್ಮಗಳಲ್ಲಿ ರತನೂ, ವೇಶ್ಯಾಸ್ತ್ರೀ ಸಂಗದಲ್ಲಿ ಆಸಕ್ತನೂ, ವಿಟಪುರುಷರ ವಾರ್ತಾಲಾಪಗಳಲ್ಲಿ ನಿಪುಣನೂ ಆಗಿದ್ದನು. ||೧೫|| ದ್ಯೂತಾದಿ ದುಶ್ಚಟಗಳಲ್ಲಿ ಆಸಕ್ತನೂ, ಪರಸ್ತ್ರೀರತಿ ವಿಲಾಸಿಯೂ ಆಗಿದ್ದನು. ಒಂದು ದಿನವೂ ಅವನು ದೇವತೆಗಳನ್ನು ಪೂಜಿಸಲಿಲ್ಲ, ಅತಿಥಿ ಅಭ್ಯಾಗತರನ್ನು ಸ್ವಾಗತಿಸಲಿಲ್ಲ. ವೃದ್ಧರನ್ನು, ಪಿತೃಗಳನ್ನು ಹಾಗೂ ಬ್ರಾಹ್ಮಣರನ್ನು ಗೌರವಿಸಲಿಲ್ಲ. || ೧೬ || ಅನ್ಯಾಯ ಕರ್ಮಗಳನ್ನು ಮಾಡುತ್ತಾ ಆ ದುಷ್ಟಾತ್ಮನು ತನ್ನ ತಂದೆಯು ಸಂಪಾದಿಸಿದ ದ್ರವ್ಯವನ್ನೆಲ್ಲ ಹಾಳು ಮಾಡುತ್ತಲಿದ್ದನು. ಪಾಪಾತ್ಮನಾದ ಅವನು ನಿಷಿದ್ಧ ಪದಾರ್ಥಗಳನ್ನು ಸೇವಿಸುತ್ತ ಸದಾ ಸುರಾಪಾನ ಮಾಡುತ್ತ ಕಾಲಕಳೆಯತೊಡಗಿದನು. || ೧೭ || ಒಮ್ಮೆ ಒಬ್ಬ ವೇಶ್ಯಾ ಸ್ತ್ರೀಯು ಹೆಗಲಲ್ಲಿ ಕೈಹಾಕಿಕೊಂಡು ಚತುಷ್ಪಥದಲ್ಲಿ ಅಡ್ಡಾಡುತ್ತಿರುವಾಗ ಇದನ್ನು ಕಂಡು

ಸ್ವದೇಹಭೂಷಣಾನ್ಯೇವ ಕ್ಷಯಂ ನೀತಾನಿ ತೇನ ವೈ |
ಗಣಿಕಾಭಿಃ ಪರಿತ್ಯಕ್ತೋ ನಿಂದಿತಶ್ಚ ಧನಕ್ಷಯಾತ್ || ೧೯ ||

ತತಶ್ಚಿಂತಾಪರೋ ಜಾತೋ ವಸ್ತ್ರಹೀನಃ ಕ್ಷುಧಾರ್ದಿತಃ |
ಕಿಂ ಕರೋಮಿ ಕ್ವ ಗಚ್ಛಾಮಿ ಕೇನೋಪಾಯೇನ ಜೀವ್ಯತೇ || ೨೦ ||

ತಸ್ಕರತ್ವಂ ಸಮಾರಬ್ಧಂ ತತ್ರೈವ ನಗರೇ ಪುನಃ |
ಗೃಹೀತೋ ರಾಜಪುರುಷೈರ್ಮುಕ್ತಶ್ಚ ಪಿತೃಗೌರವಾತ್ || ೨೧ ||

ಪುನರ್ಬದ್ಧಃ ಪುನರ್ಮುಕ್ತಃ ಪುನರ್ಮುಕ್ತಃ ಸಸಂಭ್ರಮಃ |
ದೃಷ್ಟಬುದ್ಧಿರ್ದುರಾಚಾರೀ ನಿಬದ್ಧೋ ನಿಗಡೈರ್ದೃಢೈಃ || ೨೨ ||

ಕಶಾಘಾತೈಸ್ತಾಡಿತಶ್ಚ ಪೀಡಿತಶ್ಚ ಪುನಃ ಪುನಃ |
ನ ಸ್ಥಾತವ್ಯಂ ಹಿ ಮಂದಾತ್ಮನ್ ತ್ವಯಾ ಮದ್ದೇಶಗೋಚರೇ || ೨೩ ||

ಏವಮುಕ್ತಸ್ತತೋ ರಾಜ್ಞಾ ಮೋಚಿತೋ ದೃಢಬಂಧನಾತ್ |
ನಿರ್ಜಗಾಮ ಭಯಾತ್ತಸ್ಯ ಗತೋಽಸೌ ಗಹನಂ ವನಮ್ || ೨೪ ||

---

ಅವನ ತಂದೆಯು ಮಗನನ್ನು ಮನೆಯಿಂದ ಹೊರಹಾಕಿದನು. ಎಲ್ಲ ಬಾಂಧವರೂ ಇವನನ್ನು ದೂರವಿಟ್ಟರು. || ೧೮ || ಆಗ ಧೃಷ್ಟದ್ಯುಮ್ನನು ತನ್ನ ಮೈಮೇಲೆ ಧರಿಸಿದ ಸುವರ್ಣಾಭರಣಗಳನ್ನೇ ಮಾರಿ ಬಂದ ದ್ರವ್ಯದಲ್ಲಿ ಜೀವಿಸತೊಡಗಿದನು. ಕೆಲ ದಿನಗಳಲ್ಲಿ ಕೈಯಲ್ಲಿದ್ದ ದ್ರವ್ಯವೆಲ್ಲಾ ಖರ್ಚಾಗಿ ಹೋಗಲು ವೇಶ್ಯಾಸ್ತ್ರೀಯರಿಂದಲೂ ನಿಂದಿತನಾಗಿ ತ್ಯಜಿಸಲ್ಪಟ್ಟನು. || ೧೯ || ಎಲ್ಲ ಕಳೆದು ಹೋಗಲು ವಸ್ತ್ರಗಳಿಲ್ಲದ, ಹಸಿವೆಯಿಂದ ಬಳಲಿದ ಅವನು ಚಿಂತಾತುರನಾಗಿ ಇನ್ನೇನು ಮಾಡಲಿ, ಎಲ್ಲಗೆ ಹೋಗಲಿ, ಹೇಗೆ ಜೀವಿಸಲಿ, ಎಂದು ಮುಂತಾಗಿ ವಿಚಾರಿಸತೊಡಗಿದನು. || ೨೦ || ಹೀಗೆ ವಿಚಾರಿಸುತ್ತ ಕೊನೆಗೆ ಅವನು ಅದೇ ನಗರದಲ್ಲಿ ಕಳ್ಳತನವನ್ನು ಪ್ರಾರಂಭಿಸಲು ನಿರ್ಧರಿಸಿದನು. ಕಳ್ಳತನ ಮಾಡುತ್ತಿರವಾಗ ರಾಜಭಟರಿಂದ ಹಿಡಿಯಲ್ಪಟ್ಟರೂ ಅವನ ತಂದೆಯ ಮೇಲಿನ ಗೌರವದಿಂದ ಪುನಃ ಬಿಡಲ್ಪಟ್ಟನು. || ೨೧ || ಎರಡು, ಮೂರು ಸಲ ಇದೇ ರೀತಿ ಹಿಡಿಯಲ್ಪಟ್ಟು ಮುಕ್ತನಾಗಿದ್ದ ದುರಾಚಾರಿ ಧೃಷ್ಟಬುದ್ಧಿಯನ್ನು ಕೊನೆಗೆ ರಾಜಭಟರು ಅನಿವಾರ್ಯವಾಗಿ ಬೇಡಿಗಳನ್ನು ಹಾಕಿ ಬಂಧಿಸಿದರು. ||೨೨|| ಅವನನ್ನು ಬಾರುಕೋಲಿನಿಂದ ಮತ್ತೆ ಮತ್ತೆ ಹೊಡೆದು ಪೀಡಿಸಿದರು. `ಎಲೈ ಮೂರ್ಖನೇ ನೀನು ನನ್ನ ರಾಜ್ಯದಲ್ಲಿರಲು ಅಯೋಗ್ಯನಾಗಿರುವಿ' ||೨೩|| ಎಂದು ರಾಜನಿಂದ ನಿಂದಿತನಾದ ಅವನನ್ನು ರಾಜಭಟರು ನಿಗಡಬಂಧದಿಂದ ಮುಕ್ತಗೊಳಿಸಿ ರಾಜ್ಯದಿಂದ ಹೊರಹಾಕಿದರು. ರಾಜಭಯದಿಂದ ಧೃಷ್ಟಬುದ್ಧಿಯು ಆ ನಗರವನ್ನು ಬಿಟ್ಟು ಗಹನವಾದ ವನವನ್ನು ಸೇರಿದನು || ೨೪ || ಅಲ್ಲಿ ಹಸಿವೆ ನೀರಡಿಕೆಗಳಿಂದ

ಕ್ಷುತ್ತೃಷಾ ಪೀಡಿತಶ್ಚಾಯಮಿತಶ್ಚೇತಶ್ಚ ಧಾವತಿ |
ಸಿಂಹವನ್ನಿಜಘಾನಾಸೌ ಮೃಗಸೂಕರಚಿತ್ತಲಾನ್ || ೨೫ ||

ಆಮಿಷಾಹಾರನಿರತೋ ವನೇ ತಿಷ್ಠತಿ ಸರ್ವದಾ |
ಕರೇ ಶರಾಸನಂ ಕೃತ್ವಾ ನಿಷಂಗಂ ಪೃಷ್ಠಸಂಗತಮ್ || ೨೬ ||

ಅರಣ್ಯಚಾರಿಣೋ ಹಂತಿ ಪಕ್ಷಿಣಶ್ಚ ಚತುಷ್ಪದಾನ್ |
ಚಕೋರಾಂಶ್ಚ ಮಯೂರಾಂಶ್ಚ ಕಂಕಾಂಸ್ತಿತ್ತಿರಮೂಷಕಾನ್ || ೨೭ ||

ಏತಾನನ್ಯಾನ್ ಹಂತಿ ನಿತ್ಯಂ ಧೃಷ್ಟಬುದ್ಧಿಃ ಸ ನಿರ್ಘೃಣಃ |
ಪೂರ್ವಜನ್ಮಕೃತೈಃ ಪಾಪೈರ್ನಿಮಗ್ನಃ ಪಾಪಕರ್ದಮೇ || ೨೮ ||

ದುಃಖಶೋಕಸಮಾವಿಷ್ಟಶ್ಚಿಂತಯನ್ ಸೋಽಪ್ಯಹರ್ನಿಶಮ್ |
ಕೌಂಡಿನ್ಯಸ್ಯಾಶ್ರಮಪದಂ ಪ್ರಾಪ್ತಃ ಪುಣ್ಯವಶಾತ್ ಕ್ವಚಿತ್ || ೨೯ ||

ಮಾಧವೇ ಮಾಸಿ ಜಾಹ್ನವ್ಯಾಂ ಕೃತಸ್ನಾನಂ ತಪೋಧನಮ್ |
ಆಸಸಾದ ಧೃಷ್ಟಬುದ್ಧಿಃ ಶೋಕಭಾರೇಣ ಪೀಡಿತಃ || ೩೦ ||

ತದ್ವಸ್ತ್ರಬಿಂದುಸ್ಪರ್ಶೇನ ಗತಪಾಪ್ಮಾ ಹತಾಶುಭಃ |
ಕೌಂಡಿನ್ಯಸ್ಯಾಗ್ರತಃ ಸ್ಥಿತ್ವಾ ಪ್ರತ್ಯುವಾಚ ಕೃತಾಂಜಲಿಃ || ೩೧ ||

---

ಪೀಡಿತನಾಗಿ ತಿರುಗತೊಡಗಿದನು. ಸಿಂಹದಂತೆ ಮೃಗ, ಹಂದಿ, ಚಿರತೆ ಮೊದಲಾದವುಗಳನ್ನು ಕೊಲ್ಲುತ್ತಾ ||೨೫|| ಅವುಗಳ ಮಾಂಸವನ್ನು ಭಕ್ಷಿಸುತ್ತಾ ಸದಾ ವನದಲ್ಲಿಯೇ ವಾಸವಾಗಿದ್ದನು. ಯಾವಾಗಲೂ ಕೈಯಲ್ಲಿ ಧನುಸ್ಸನ್ನು ಹಿಡಿದು ಬೆನ್ನು ಹಿಂದೆ ಬತ್ತಳಿಕೆಯನ್ನು ಕಟ್ಟಿಕೊಂಡು ತಿರುಗುತ್ತಾ || ೨೬ || ಅರಣ್ಯದಲ್ಲಿ ಸಂಚರಿಸುವ ಪ್ರಾಣಿಗಳನ್ನು ಚಕೋರ, ಮಯೂರ, ಕ್ರೌಂಚ ಕಂಕ ತಿತ್ತಿರ ಮೊದಲಾದ ಪಕ್ಷಿಗಳನ್ನು, ಮೂಷಕಗಳನ್ನು || ೨೭ || ಹಾಗೂ ಇತರ ಪಶುಪಕ್ಷಿಗಳನ್ನು ಕೊಲ್ಲುತ್ತಾ ಜೀವಿಸಿದನು. ಪೂರ್ವ ಜನ್ಮದಲ್ಲಿ ಮಾಡಿದ ಪಾಪಕರ್ಮಾನುಸಾರವಾಗಿ ಈ ಜನ್ಮದಲ್ಲಿಯೂ ಅನೇಕ ಪಾಪ ಕರ್ಮಗಳನ್ನು ಮಾಡುತ್ತಾ ಧೃಷ್ಟಬುದ್ಧಿಯು ಪಾಪದ ಕೆಸರಿನಲ್ಲಿ ಮುಳುಗಿಹೋದನು || ೨೮ || ಅವನಾದರೂ ದುಃಖ ಶೋಕಗಳಿಂದ ಪೂರಿತನಾಗಿ ಹಗಲು ರಾತ್ರಿ ಚಿಂತಿಸುತ್ತಾ ತಿರುಗುತ್ತಿರಲು ಎಲ್ಲಿಯೋ ಇದ್ದ ಸ್ವಲ್ಪ ಪುಣ್ಯವಶದಿಂದ ಒಮ್ಮೆ ಕೌಂಡಿನ್ಯ ಋಷಿಗಳ ಆಶ್ರಮವನ್ನು ಕಂಡು ಅಲ್ಲಿ ಪ್ರವೇಶಿಸಿದನು || ೨೯ || ವೈಶಾಖ ಮಾಸದಲ್ಲಿ ಪ್ರಾತಃಕಾಲ ಗಂಗಾಸ್ನಾನ ಮಾಡಿ ಬಂದಿದ್ದ, ತಪೋಧನನಾದ ಕೌಂಡಿನ್ಯ ಮುನಿಯನ್ನು ಆಶ್ರಮದಲ್ಲಿ ಕಂಡು ಶೋಕತಪ್ತನಾಗಿದ್ದ ಧೃಷ್ಟಬುದ್ಧಿಯು ಅವನೆದುರು ಬಾಗಿ ನಿಂತುಕೊಂಡನು || ೩೦ || ಕೌಂಡಿನ್ಯನ ವದ್ದೆಯಾಗಿದ್ದ ವಸ್ತ್ರಗಳಿಂದ ಕೆಳಗೆ ಬಿದ್ದ ನೀರಿನ ಹನಿಗಳು ಧೃಷ್ಟಬುದ್ಧಿಗೆ ಸಿಡಿದಾಕ್ಷಣವೇ ಅವನ ಕೆಲ

ಧೃಷ್ಟಬುದ್ಧಿರುವಾಚ -

ಪ್ರಾಯಶ್ಚಿತ್ತಂ ವದ ಬ್ರಹ್ಮನ್ ವಿನಾ ಯತ್ನೇನ ಯದ್ಭವೇತ್ |
ಹ್ಯಾಜನ್ಮಕೃತಪಾಪಸ್ಯ ನಾಸ್ತಿ ವಿತ್ತಂ ಮಮಾಧುನಾ || ೩೨ ||

ಋಷಿರುವಾಚ -

ಶ್ರುಣುಷ್ವೈಕಮನಾ ಭೂತ್ವಾ ಯೇನ ಪಾಪಕ್ಷಯಸ್ತವ |
ವೈಶಾಖಸ್ಯ ಸಿತೇ ಪಕ್ಷೇ ಮೋಹಿನೀ ನಾಮ ನಾಮತಃ || ೩೩ ||

ಏಕಾದಶೀವ್ರತಂ ತಸ್ಮಾತ್ ಕುರು ಮದ್ವಾಕ್ಯೇನೋದಿತಃ |
ಮೇರುತುಲ್ಯಾನಿ ಪಾಪಾನಿ ಕ್ಷಯಂ ನಯತಿ ದೇಹಿನಾಮ್ || ೩೪ ||

ಬಹುಜನ್ಮಾರ್ಜಿತಾನ್ಯೇಷಾ ಮೋಹಿನೀ ಸಮುಪೋಷಿತಾ |
ಇತಿವಾಕ್ಯಂ ಮುನೇಃ ಶ್ರುತ್ವಾ ಧೃಷ್ಟಬುದ್ಧಿರ್ಹಸನ್ ಹೃದಿ || ೩೫ ||

ವ್ರತಂ ಚಕಾರ ವಿಧಿವತ್ ಕೌಂಡಿನ್ಯಸ್ಯೋಪದೇಶತಃ |
ಕೃತೇ ವ್ರತೇ ನೃಪಶ್ರೇಷ್ಠ ಹತಪಾಪೋ ಬಭೂವ ಸಃ || ೩೬ ||

ದಿವ್ಯದೇಹಸ್ತತೋ ಭೂತ್ವಾ ಗರುಡೋಪರಿ ಸಂಸ್ಥಿತಃ |
ಜಗಾಮ ವೈಷ್ಣವಂ ಲೋಕಂ ಸರ್ವೋಪದ್ರವವರ್ಜಿತಮ್ || ೩೭ ||

---

ಪಾಪಗಳು, ಅಶುಭಗಳು ಕಳೆದು ಹೋದವು. ಅವನು ತನ್ನೆರಡೂ ಕೈಗಳನ್ನು ಜೋಡಿಸಿ ಮುನಿಯನ್ನು ಕುರಿತು ಹೇ ಪೂಜ್ಯ ಬ್ರಹ್ಮಜ್ಞಾನಿಗಳೇ, ಹುಟ್ಟಿದಾರಭ್ಯ ಮಾಡಿದ ಪಾಪಗಳನ್ನು ಕಳೆದುಕೊಳ್ಳಲು ಅನಾಯಾಸ ಸಾಧ್ಯವಾದ ಏನಾದರೊಂದು ಸುಲಭ ಉಪಾಯವನ್ನು / ಪ್ರಾಯಶ್ಚಿತ್ತ ತಿಳಿಸಿರಿ. ನನ್ನಲ್ಲಿ ಒಂದು ಕಾಸುದ್ರವ್ಯವೂ ಇರುವುದಿಲ್ಲ ಎಂದು ಪ್ರಾರ್ಥಿಸಲು ||೩೨|| ಕೌಂಡಿನ್ಯರು ಹೇಳಿದರು - ಅಯ್ಯಾ ನಿನ್ನ ಪಾಪಗಳ ನಾಶಕ್ಕಾಗಿ ಈಗ ಹೇಳುವ ಉಪಾಯವನ್ನು ಏಕಾಗ್ರಚಿತ್ತದಿಂದ ಕೇಳು. ವೈಶಾಖಮಾಸದ ಶುಕ್ಲಪಕ್ಷದಲ್ಲಿ ಮೋಹಿನೀ ಎಂಬ ಹೆಸರಿನ || ೩೩ || ಏಕಾದಶೀ ವ್ರತವು ಬರುವುದು. ನಾನು ಹೇಳಿದಂತೆ ಆ ದಿನದ ವ್ರತವನ್ನು ಆಚರಿಸು. ಈ ವ್ರತಾಚರಣೆಯಿಂದ ಮೇರು ಪರ್ವತದಂತೆ ಅಸಂಖ್ಯವಾಗಿದ್ದ ಬಹುಜನ್ಮಗಳಲ್ಲಿ ಸಂಚಿತವಾಗಿರುವ ಪಾಪಗಳೆಲ್ಲವೂ ನಾಶವಾಗಿ ಹೋಗುವವು. ಮುನಿಯ ಉಪದೇಶದಿಂದ ಹರ್ಷಚಿತ್ತನಾದ ಧೃಷ್ಟಬುದ್ಧಿಯು || ೩೪ || ೩೫ || ಕೌಂಡಿನ್ಯರ ಉಪದೇಶದಂತೆ ಮೋಹಿನೀ ವ್ರತವನ್ನು ವಿಧಿಪೂರ್ವಕ ಆಚರಿಸಿದನು. ಇದರಿಂದ ಅವನ ಪಾಪಗಳೆಲ್ಲವೂ ನಾಶವಾದವು. || ೩೬ || ದಿವ್ಯವಾದ ದೇಹವನ್ನು ಹೊಂದಿದ ಅವನು ಗರುಡಾರೂಢನಾಗಿ ಸರ್ವೋಪದ್ರವಗಳಿಂದ ರಹಿತವಾದ ವೈಷ್ಣವಲೋಕವನ್ನು ಸೇರಿದನು.

ಇತೀದೃಶಂ ರಾಮಚಂದ್ರ ತಮೋಮೋಹನಿಕೃಂತನಮ್ |
ನಾತಃ ಪರತರಃ ಕಿಂಚಿತ್ ತ್ರೈಲೋಕ್ಯೇ ಸಚರಾಚರೇ || ೩೮ ||

ಯಜ್ಞಾದಿತೀರ್ಥದಾನಾನಿ ಕಲಾಂ ನಾರ್ಹಂತಿ ಷೋಡಶೀಮ್ |
ಪಠನಾಚ್ಛ್ರವಣಾದ್ರಾಜನ್ ಗೋಸಹಸ್ರಫಲಂ ಲಭೇತ್ || ೩೯ ||

|| ಇತಿ ಶ್ರೀಕೂರ್ಮಪುರಾಣೇ ವೈಶಾಖಶುಕ್ಲ ಮೋಹಿನ್ಯೇಕಾದಶೀ
ವ್ರತಮಾಹಾತ್ಮ್ಯಂ ಸಂಪೂರ್ಣಮ್ || ೧೨ ||

---

||೩೭|| ಹೇ ಶ್ರೀರಾಮಚಂದ್ರ ಪ್ರಭೋ, ಈ ಪ್ರಕಾರ ಮಹಿಮೋಪೇತವಾಗಿರುವ ಈ ಮೋಹಿನೀವ್ರತವನ್ನು ಬಿಟ್ಟರೆ ಅಜ್ಞಾನ ದುಃಖಗಳನ್ನು ಕಳೆಯಬಲ್ಲ ಬೇರೊಂದು ವ್ರತವು ತ್ರಿಲೋಕಗಳ ಚರಾಚರಪ್ರಪಂಚದಲ್ಲೆಲ್ಲೂ ದೊರೆಯುವುದಿಲ್ಲ || ೩೮ || ಹೇ ಧರ್ಮರಾಜಾ, ಯಜ್ಞಾದಿಗಳು, ತೀರ್ಥದಾನಗಳು ಇವಾವವೂ ಈ ವ್ರತದ ಹದಿನಾರನೆಯ ಒಂದಂಶಕ್ಕೂ ಸಮಾನವಾಗುವುದಿಲ್ಲ. ಈ ವ್ರತದ ಮಹಿಮೆಯ ಪಠಣ, ಶ್ರವಣಗಳಿಂದ ಸಹಸ್ರ ಗೋದಾನದ ಫಲವು ಪ್ರಾಪ್ತವಾಗುವುದು. || ೩೯ ||

|| ಇಲ್ಲಿಗೆ ಶ್ರೀ ಕೂರ್ಮಪುರಾಣದಲ್ಲಿಯ ವೈಶಾಖಶುಕ್ಲಪಕ್ಷದ ಮೋಹಿನೀ
ಏಕಾದಶೀವ್ರತದ ಮಹಾತ್ಮೆಯು ಸಮಾಪ್ತವಾಯಿತು ||
|| ಶ್ರೀ ಕೃಷ್ಣಾರ್ಪಣಮಸ್ತು ||

# ಜ್ಯೇಷ್ಠ ಕೃಷ್ಣೈಕಾದಶೀ ವ್ರತ ಕಥಾ

ಯುಧಿಷ್ಠಿರ ಉವಾಚ -

ಜೇಷ್ಠಸ್ಯ ಕೃಷ್ಣಪಕ್ಷೇ ತು ಕಿಂ ನಾಮ್ಯೈಕಾದಶೀ ಭವೇತ್ |
ಶ್ರೋತುಮಿಚ್ಛಾಮಿ ಮಾಹಾತ್ಮ್ಯಂ ತದ್ವದಸ್ವ ಜನಾರ್ದನ || ೧ ||

ಶ್ರೀಕೃಷ್ಣ ಉವಾಚ -

ಸಾಧು ಪೃಷ್ಟಂ ತ್ವಯಾ ರಾಜನ್ ಲೋಕಾನಾಂ ಹಿತಕಾಮ್ಯಯಾ |
ಬಹುಪುಣ್ಯಪ್ರದಾ ಹ್ಯೇಷಾ ಮಹಾಪಾತಕನಾಶಿನೀ || ೨ ||

ಅಪರಾ ನಾಮ ರಾಜೇಂದ್ರ ಅಪಾರಫಲದಾಯಿನೀ |
ಲೋಕೇ ಪ್ರಸಿದ್ಧತಾಂ ಯಾತಿ ಅಪರಾಂ ಯಸ್ತು ಸೇವತೇ || ೩ ||

ಬ್ರಹ್ಮಹತ್ಯಾಭಿಭೋತೋಽಪಿ ಗೋತ್ರಹಾ ಭ್ರೂಣಹಾ ತಥಾ |
ಪರಾಪವಾದವಾದೀ ಚ ಪರಸ್ತ್ರೀರಸಿಕೋಽಪಿ ಚ || ೪ ||

ಅಪರಾಸೇವನಾದ್ರಾಜನ್ ವಿಪಾಪ್ಮಾ ಭವತಿ ಧ್ರುವಮ್ |
ಕೂಟಸಾಕ್ಷ್ಯಂ ಮಾನಕೂಟಂ ತುಲಾಕೂಟಂ ಕರೋತಿ ಯಃ || ೫ ||

---

ಹೇ ಶ್ರೀಕೃಷ್ಣಾ, ಜನಾರ್ದನಾ, ಜ್ಯೇಷ್ಠ ಮಾಸದ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯು ಯಾವ ಹೆಸರಿನಿಂದ ಪ್ರಸಿದ್ಧವಾಗಿದೆ ? ಅದರ ಮಾಹಾತ್ಮ್ಯವನ್ನು ತಿಳಿಯಬಯಸಿದ್ದೇನೆ. ಆದ್ದರಿಂದ ಎಲ್ಲವನ್ನು ತಿಳಿಸಿ ಅನುಗ್ರಹಿಸು ಎಂದು ಯುಧಿಷ್ಠಿರನು ಪ್ರಾರ್ಥಿಸಲು || ೧ || ಶ್ರೀ ಕೃಷ್ಣನು ಹೇಳುತ್ತಾನೆ ಹೇ ರಾಜನ್, ಎಲ್ಲ ಸಜ್ಜನರಿಗೂ ಈ ಏಕಾದಶಿಯ ಮಹಾತ್ಮೆಯು ತಿಳಿಯಲಿ ಮತ್ತು ಅವರಿಗೆ ಶುಭವಾಗಲಿ ಎಂಬ ಸದುದ್ದೇಶದಿಂದ ನೀನು ಯೋಗ್ಯವಾದ ಪ್ರಶ್ನೆಯನ್ನು ಮಾಡಿರುವಿ. ಜೇಷ್ಠಕೃಷ್ಣಪಕ್ಷದ ಏಕಾದಶೀಯು ಏನಿದೆಯೋ ಅದು ಮಹಾ ಪಾತಕಗಳನ್ನು ನಾಶ ಮಾಡುವ ಮತ್ತು ಬಹು ಪುಣ್ಯಪ್ರದವಾದ ಏಕಾದಶಿಯಾಗಿದೆ. || ೨ || ಹೇ ರಾಜೇಂದ್ರ, ಅಪರಾ ಎಂಬ ಹೆಸರಿನ ಪ್ರಸಿದ್ಧವಾದ ಈ ಏಕಾದಶಿಯು ವ್ರತಿಗೆ ಅಪಾರವಾದ ಪುಣ್ಯ ಫಲವನ್ನು ಕೊಡಲು ಸಮರ್ಥವಾಗಿದೆ. ಈ ಅಪರಾ ಏಕಾದಶೀವ್ರತವನ್ನು ಆಚರಿಸುವ ಪುರುಷನು ಲೋಕದಲ್ಲಿ ಕೀರ್ತಿಶಾಲಿಯಾಗುತ್ತಾನೆ. || ೩ || ಅವನು ಬ್ರಹ್ಮಹತ್ಯೆ, ಗೋಹತ್ಯೆ, ಭ್ರೂಣಹತ್ಯೆ ಮಾಡಿದವನಾಗಿರಲಿ, ಪರನಿಂದೆ ಹಾಗೂ ಪರಸ್ತ್ರೀ ಲೋಲುಪನಾಗಿರಲಿ || ೪ || ಅಂಥವನೂ ಅಪರಾವ್ರತವನ್ನು ಆಚರಿಸಿದರೆ ಸಾಕು ಸಕಲಪಾಪಗಳಿಂದ ನಿಶ್ಚಿತವಾಗಿ ಮುಕ್ತನಾಗುತ್ತಾನೆ. ಸುಳ್ಳು ಸಾಕ್ಷಿಯನ್ನು ಹೇಳಿದವನು, ಮಿಥ್ಯಾಪ್ರಶಂಸೆ ಮಾಡಿದವನು, ತೂಕ ಕಡಿಮೆ ಮಾಡಿ

**ಕೂಟವೇದಂ ಪಠೇದ್ವಿಪ್ರಃ ಕೂಟಶಾಸ್ತ್ರಂ ಕರೋತಿ ಚ |**
**ಜ್ಯೋತಿಷೀ ಕೂಟಗಣಕಃ ಕೂಟಾಯುರ್ವೇದಕೋ ಭಿಷಕ್ || ೬ ||**

**ಕೂಟಸಾಕ್ಷಿಸಮಾ ಹ್ಯೇತೇ ವಿಜ್ಞೇಯಾ ನರಕೌಕಸಃ |**
**ಅಪರಾಸೇವನಾದ್ರಾಜನ್ ಪಾಪಮುಕ್ತಾ ಭವಂತಿ ತೇ || ೭ ||**

**ಕ್ಷತ್ರಿಯಃ ಕ್ಷಾತ್ರಧರ್ಮಂ ಯಸ್ತ್ಯಕ್ತ್ವಾ ಯುದ್ಧಾತ್ಪಲಾಯತೇ |**
**ಸ ಯಾತಿ ನರಕಂ ಘೋರಂ ಸ್ವೀಯಧರ್ಮಬಹಿಷ್ಕೃತಃ || ೮ ||**

**ಅಪರಾಸೇವನಾದ್ರಾಜನ್ ಪಾಪಂ ತ್ಯಕ್ತ್ವಾ ದಿವಂ ವ್ರಜೇತ್ |**
**ವಿದ್ಯಾಮಧೀತ್ಯ ಯಃ ಶಿಷ್ಯೋ ಗುರುನಿಂದಾಂ ಕರೋತಿ ವೈ || ೯ ||**

**ಮಹಾಪಾತಕಯುಕ್ತೋಽಪಿ ನಿರಯಂ ಯಾತಿ ದಾರುಣಮ್ |**
**ಅಪರಾಸೇವನಾತ್ ಸೋಽಪಿ ಸದ್ಗತಿಂ ಪ್ರಾಪ್ನುಯಾನ್ನರಃ || ೧೦ ||**

**ಅಪರಾಮಹಿಮಾನಂ ತು ಶೃಣು ರಾಜನ್ ವದಾಮ್ಯಹಮ್ |**
**ಪುಷ್ಕರತ್ರಿತಯೇ ಸ್ನಾತ್ವಾ ಕಾರ್ತಿಕ್ಯಾಂ ಯತ್ಫಲಂ ಲಭೇತ್ || ೧೧ ||**

**ಮಕರಸ್ಥೇ ರವೌ ಮಾಘೇ ಪ್ರಯಾಗೇ ಯತ್ಫಲಂ ನೃಣಾಮ್ |**
**ಕಾಶ್ಯಾಂ ಯತ್ಪ್ರಾಪ್ಯತೇ ಪುಣ್ಯಂ ಶಿವರಾತ್ರೇರುಪೋಷಣಾತ್ || ೧೨ ||**

---

ತೂಗಿ ಕೊಡುವವನು || ೫ || ಮಿಥ್ಯಾವೇದ ಪಠಣ ಮಾಡಿದವನು, ಮಿಥ್ಯಾ ಶಾಸ್ತ್ರಗ್ರಂಥಗಳನ್ನು ನಿರ್ಮಿಸಿದವನು, ತಪ್ಪು ಲೆಖ್ಖ ಮಾಡಿದ ಜ್ಯೋತಿಷಿಯು ಮತ್ತು ನಕಲಿ (ಆಯುರ್ವೇದ) ವೈದ್ಯನು || ೬ || ಇವರೆಲ್ಲರೂ ಕೂಟಸಾಕ್ಷಿಗೆ ಸಮಾನರು. ಇಂಥವರು ಅಪರಾವ್ರತವನ್ನು ಆಚರಿಸಿದರೆ ತಾವು ಮಾಡಿದ ಪಾಪಗಳಿಂದ ಮುಕ್ತರಾಗುತ್ತಾರೆ || ೭ || ಕ್ಷತ್ರಿಯನಾದವನು ಕ್ಷಾತ್ರಧರ್ಮವನ್ನು ಬಿಟ್ಟು ಯುದ್ಧದಿಂದ ಪಲಾಯನ ಮಾಡಿದರೆ ಸ್ವಧರ್ಮಭ್ರಷ್ಟನಾಗಿ ಘೋರವಾದ ನರಕವನ್ನು ಹೊಂದುವನು. || ೮ || ಆದರೆ ಅಪರಾವ್ರತವನ್ನು ಮಾಡಿದರೆ ಅವನು ಪಾಪದಿಂದ ಮುಕ್ತನಾಗಿ ಸ್ವರ್ಗಲೋಕವನ್ನು ಸೇರುವನು. ವಿದ್ಯಾಧ್ಯಯನವನ್ನು ಮಾಡಿ ಯಾವ ಶಿಷ್ಯನು ತನ್ನ ಗುರುಗಳನ್ನೇ ನಿಂದಿಸುವನೋ ||೯|| ಅಂಥವನು ಮಹಾಪಾತಕದಿಂದ ಯುಕ್ತನಾಗಿ ದಾರುಣವಾದ ನಿರಯವನ್ನು ಹೊಂದುವನು. ಆದರೆ ಅಪರಾವ್ರತವನ್ನು ಮಾಡಿದರೆ ಅವನೂ ಕೂಡ ಸದ್ಗತಿಯನ್ನು ಹೊಂದುವನು || ೧೦ || ಹೇ ರಾಜನ್, ಈಗ ಅಪರಾವ್ರತದ ಮಹಿಮೆಯನ್ನು ತಿಳಿಸುವೆನು ಕೇಳು. ಕಾರ್ತಿಕ ಮಾಸದಲ್ಲಿ ಮೂರೂ ಪುಷ್ಕರತೀರ್ಥಗಳಲ್ಲಿ ಸ್ನಾನ ಮಾಡಿದರೆ ಏನು ಫಲವು ಬರುವದೋ || ೧೧ || ಮಕರ ಸಂಕ್ರಮಣದ ದಿನ ಪ್ರಯಾಗಸ್ನಾನದಿಂದಾವ ಫಲವಿದೆಯೋ, ಶಿವರಾತ್ರಿಯ ದಿನ ಕಾಶಿಯಲ್ಲಿದ್ದು ಉಪವಾಸ ಮಾಡಿದರೇನು ಫಲವಿದೆಯೋ || ೧೨ ||

ಗಯಾಯಾಂ ಪಿಂಡದಾನೇನ ಯತ್ಫಲಂ ಪ್ರಾಪ್ಯತೇ ನರೈಃ |
ಸಿಂಹಸ್ಥಿತೇ ದೇವಗುರೌ ಗೌತಮೀಸ್ನಾನತೋ ನರಃ || ೧೩ ||

ಯತ್ಫಲಂ ಸಮವಾಪ್ನೋತಿ ಕುಂಭೇ ಕೇದಾರದರ್ಶನಾತ್ |
ಬದರ್ಯಾಶ್ರಮಯಾತ್ರಾಯಾಸ್ತತ್ತೀರ್ಥಸೇವನಾದಪಿ || ೧೪ ||

ಯತ್ಫಲಂ ಸಮವಾಪ್ನೋತಿ ಕುರುಕ್ಷೇತ್ರೇ ರವಿಗ್ರಹೇ |
ಗಜಾಶ್ವಹೇಮದಾನೇನ ಯಜ್ಞೇ ಕೃತ್ಸುವರ್ಣದಃ || ೧೫ ||

ತತ್ಫಲಂ ಸಮವಾಪ್ನೋತಿ ಹ್ಯಪರಾಯಾ ವ್ರತಾನ್ನರಃ |
ಅರ್ಧಪ್ರಸೂತಾಂ ಗಾಂ ದತ್ವಾ ಸುವರ್ಣಂ ವಸುಧಾಂ ತಥಾ || ೧೬ ||

ನರೋ ಯತ್ಫಲಮಾಪ್ನೋತಿ ಅಪರಾಯಾ ವ್ರತೇನ ತತ್ |
ಪಾಪದ್ರುಮಕುಠಾರೋಽಯಂ ಪಾಪೇಂಧನದವಾನಲಃ || ೧೭ ||

ಪಾಪಾಂಧಕಾರಸೂರ್ಯೋಽಯಂ ಪಾಪಸಾರಂಗಕೇಸರೀ |
ಅಪರೈಕಾದಶೀ ರಾಜನ್ ಕರ್ತವ್ಯಾ ಪಾಪಭೀರುಭಿಃ || ೧೮ ||

ಬುದ್ಬುದಾ ಇವ ತೋಯೇಷು ಪುತ್ತಿಕಾ ಇವ ಜಂತುಷು |
ಜಾಯಂತೇ ಮರಣಾಯೈವ ಏಕಾದಶ್ಯಾ ವ್ರತಂ ವಿನಾ || ೧೯ ||

---

ಗಯಾದಲ್ಲಿ ಪಿಂಡಪ್ರದಾನದಿಂದ ಯಾವ ಫಲವಿದೆಯೋ, ಸಿಂಹರಾಶಿಯಲ್ಲಿ ಗುರುವಿರುವಾಗ ಗೌತಮೀ ಸ್ನಾನದಿಂದ ಯಾವ ಫಲವು ಪ್ರಾಪ್ತವಾಗುವುದೋ || ೧೩ || ಕುಂಭದಲ್ಲಿ ಕೇದಾರನಾಥನ ದರ್ಶನ ಮತ್ತು ಬದರೀಯಾತ್ರೆಗಳಿಂದ ಯಾವ ಫಲವು ಬರುವದೋ || ೧೪ || ಸೂರ್ಯಗ್ರಹಣದ ದಿನ ಕುರುಕ್ಷೇತ್ರದಲ್ಲಿ ಸ್ನಾನಮಾಡುವದರಿಂದ ಹಾಗೂ ಆನೆ, ಕುದುರೆ, ಸುವರ್ಣದಾನಗಳಿಂದ ಯಾವ ಫಲವಿದೆಯೋ, ಆದರಂತೆ ಯಜ್ಞದಲ್ಲಿ ಸುರ್ಣದಾನದಿಂದಾವ ಫಲವು ಬರುವದೋ || ೧೫ || ಇದೆಲ್ಲದರ ಫಲವು ಅಪರಾವ್ರತಾನುಷ್ಠಾನಮಾತ್ರದಿಂದ ಲಭಿಸುವದು. ಅರ್ಧಪ್ರಸೂತವಾದ ಗೋವನ್ನು, ಸುವರ್ಣವನ್ನು ಮತ್ತು ಭೂಮಿಯನ್ನು ದಾನವಾಗಿ ಕೊಟ್ಟಾಗ ಬರುವಷ್ಟು ಫಲವನ್ನು ||೧೬|| ಅಪರಾವ್ರತವನ್ನು ಆಚರಿಸುವವನು ಪಡೆಯುವನು. ಪಾಪಗಳೆಂಬ ವೃಕ್ಷಕ್ಕೆ ಕುಠಾರದಂತೆಯೂ, ಪಾಪಗಳೆಂಬ ಇಂಧನಕ್ಕೆ (ಉರುವಲ) ದಾವಾಗ್ನಿಯಂತೆಯೂ ||೧೭|| ಪಾಪಾಂಧಕಾರಕ್ಕೆ ಸೂರ್ಯನಂತೆಯೂ, ಪಾಪಗಳೆಂಬ ಸಾರಂಗಕ್ಕೆ ಸಿಂಹದಂತೆಯೂ ಆಗಿರುವ ಈ ಅಪರಾ ಏಕಾದಶೀವ್ರತವನ್ನು ಪಾಪಭೀರುಗಳಾದ ಜನರು ಶ್ರದ್ಧೆಯಿಂದ ಆಚರಿಸಬೇಕು || ೧೮ || ಇಂಥ ಮಹಿಮೋಪೇತವಾದ ಏಕಾದಶೀವ್ರತವನ್ನು ಆಚರಿಸದವರು ನೀರಿನ ಮೇಲಿನ ಗುಳ್ಳೆಗಳಂತೆ (ಪುತ್ತಿಕಾ) ನಿಷ್ಕ್ರಿಯರೂ ನಿಷ್ಪ್ರಯೋಜಕರೂ ಆಗಿರುವರು

ಅಪರಾಂ ಸಮುಪೋಷ್ಯೈವ ಪೂಜಯಿತ್ವಾ ತ್ರಿವಿಕ್ರಮಮ್ |
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ವ್ರಜೇನ್ನರಃ || ೨೦ ||

ಲೋಕಾನಾಂ ಚ ಹಿತಾರ್ಥಾಯ ತವಾಗ್ರೇ ಕಥಿತಂ ಮಯಾ |
ಪಠನಾಚ್ಛ್ರವಣಾದ್ರಾಜನ್ ಸರ್ವಪಾಪೈಃ ಪ್ರಮುಚ್ಯತೇ || ೨೧ ||

|| ಇತಿ ಶ್ರೀಬ್ರಹ್ಮಾಂಡಪುರಾಣೇ ಜ್ಯೇಷ್ಠಕೃಷ್ಣ
ಅಪರೈಕಾದಶೀವ್ರತಮಾಹಾತ್ಮ್ಯಂ ಸಂಪೂರ್ಣಮ್ ||೧೩ ||

---

(ಇದ್ದೂ ಇಲ್ಲದಂತೆ ಆಗಿರುವರು) ಮತ್ತು ಸಾಯುವದಕ್ಕಾಗಿಯೇ ಹುಟ್ಟಿರುವಂತೆ ಇರುವರು. ||೧೯|| ಅಪರಾ ಏಕಾದಶಿಯಂದು ಉಪವಾಸ ಮಾಡಿಯೇ ತ್ರಿವಿಕ್ರಮನನ್ನು ಪೂಜಿಸಿದರೆ ಅವನು ಸಕಲಪಾಪಗಳಿಂದ ಮುಕ್ತನಾಗಿ ವಿಷ್ಣುಲೋಕವನ್ನು ಹೊಂದುವನು. || ೨೦ || ಹೇ ರಾಜನ್, ಸಕಲಜನರಿಗೂ ಕ್ಷೇಮವಾಗಲೆಂಬ ಉದ್ದೇಶದಿಂದಲೇ ಈ ವ್ರತದ ಮಹಾತ್ಮೆಯನ್ನು ನಿನಗೆ ತಿಳಿಸಿದ್ದೇನೆ. ಇದರ ಮಹಾತ್ಮೆಯ ಶ್ರವಣ ಹಾಗೂ ಪಠಣಗಳಿಂದಲೂ ಸರ್ವಪಾಪಗಳು ನಾಶವಾಗುವವು. || ೨೧ ||

|| ಇಲ್ಲಿಗೆ ಶ್ರೀಬ್ರಹ್ಮಾಂಡ ಪುರಾಣದಲ್ಲಿಯ ಜ್ಯೇಷ್ಠಕೃಷ್ಣಪಕ್ಷದ ಅಪರಾ
ಏಕಾದಶೀವ್ರತದ ಮಹಾತ್ಮೆಯು ಸಮಾಪ್ತವಾಯಿತು. ||

|| ಶ್ರೀಕೃಷ್ಣಾರ್ಪಣಮಸ್ತು ||

# ಜ್ಯೇಷ್ಠ ಶುಕ್ಲೈಕಾದಶೀ ವ್ರತ ಕಥಾ

ಭೀಮಸೇನ ಉವಾಚ -

ಪಿತಾಮಹ ಮಹಾಬುದ್ಧೇ ಶ್ರುಣು ಮೇ ಪರಮಂ ವಚಃ |
ಯುಧಿಷ್ಠಿರಶ್ಚ ಕುಂತೀ ಚ ತಥಾ ದ್ರುಪದನಂದಿನೀ || ೧ ||

ಅರ್ಜುನೋ ನಕುಲಶ್ಚೈವ ಸಹದೇವಸ್ತಥೈವ ಚ |
ಏಕಾದಶ್ಯಾಂ ನ ಭುಂಜಂತಿ ಕದಾಚಿದಪಿ ಸುವ್ರತ || ೨ ||

ತೇ ಮಾಂ ಬ್ರುವಂತಿ ವೈ ನಿತ್ಯಂ ಮಾ ತ್ವಂ ಭುಂಕ್ಷ್ವ ವೃಕೋದರ |
ಅಹಂ ತಾನಬ್ರುವಂ ತಾತ ಬುಭುಕ್ಷಾ ದುಃಸಹಾ ಮಮ || ೩ ||

ದಾನಂ ದಾಸ್ಯಾಮಿ ವಿಧಿವತ್ ಪೂಜಯಿಷ್ಯಾಮಿ ಕೇಶವಮ್ |
ವಿನೋಪವಾಸಂ ಲಭ್ಯೇತ ಕಥಮೇಕಾದಶೀವ್ರತಮ್ || ೪ ||

ಭೀಮಸೇನವಚಃ ಶ್ರುತ್ವಾ ವ್ಯಾಸೋ ವಚನಮಬ್ರವೀತ್ |

ವ್ಯಾಸ ಉವಾಚ -

ಯದಿ ಸ್ವರ್ಗೋಽತ್ಯಭೀಷ್ಟಸ್ತೇ ನರಕೋಽನಿಷ್ಟ ಏವ ಚ || ೫ ||

ಏಕಾದಶ್ಯಾಂ ನ ಭೋಕ್ತವ್ಯಂ ಪಕ್ಷಯೋರುಭಯೋರಪಿ |

---

ಶ್ರೀ ವೇದವ್ಯಾಸರನ್ನು ಕುರಿತು ಭೀಮಸೇನನು ಪ್ರಶ್ನಿಸುತ್ತಾನೆ - ಮಹಾತ್ಮರಾದ ಪೂಜ್ಯರಾದ ಪಿತಾಮಹರೇ, ನಾನು ಹೇಳುವದನ್ನು ಕೇಳಿರಿ. ಯುಧಿಷ್ಠಿರ, ಕುಂತೀ, ದ್ರೌಪದೀ ||೧|| ಅರ್ಜುನ ಮತ್ತು ನಕುಲ ಸಹದೇವರು ಏಕಾದಶಿಯ ದಿನ ಎಂದಿಗೂ ಭೋಜನ ಮಾಡುವದಿಲ್ಲ || ೨ || ಅವರು - "ಹೇ ವೃಕೋದರ, ನೀನಾದರೂ ಆ ದಿನ ಭೋಜನ ಮಾಡಕೂಡದು" ಎಂದು ನನಗೂ ಹೇಳುತ್ತಿದ್ದಾರೆ. ಪೂಜ್ಯರೇ, ಹಸಿವೆಯೆಂಬುದು ನನಗೆ ದುಃಸಹವಾದುದು ಎಂದು ನಾನು ಅವರಿಗೆ ತಿಳಿಸಿದ್ದೇನೆ || ೩ || ವಿವಿಧ ದಾನಗಳನ್ನು ಬೇಕಾದರೆ ಕೊಡುವೆನು. ವಿಧಿಪೂರ್ವಕ ಕೇಶವನನ್ನು ಪೂಜಿಸುವೆನು. ಏಕಾದಶಿಯ ದಿನ ಉಪವಾಸ ಮಾಡದೇ ಏಕಾದಶೀವ್ರತದ ಫಲವು ಹೇಗೆ ಲಭಿಸುವದೆಂಬುದನ್ನು ನನಗೆ ದಯಮಾಡಿ ತಿಳಿಸಿರಿ || ೪ || ಭೀಮಸೇನನ ಮಾತುಗಳನ್ನು ಕೇಳಿ ಶ್ರೀ ವೇದವ್ಯಾಸರು ಎಲೈ ಭೀಮಸೇನಾ, ನಿನಗೆ ಒಂದು ವೇಳೆ ಸ್ವರ್ಗವು ಅತಿ ಇಷ್ಟವಾಗಿದ್ದರೆ ಮತ್ತು ನರಕವೆಂಬುದು ಅನಿಷ್ಟವಾಗಿದ್ದರೆ || ೫ || ಮಾಸದ ಉಭಯ ಪಕ್ಷಗಳಲ್ಲಿ ಒರುವ ಏಕಾದಶಿಯ ದಿನ

ಭೀಮಸೇನ ಉವಾಚ -

ಪಿತಾಮಹ ಮಹಾಬುದ್ಧೇ ಕಥಯಾಮಿ ತವಾಗ್ರತಃ || ೬ ||

ಏಕಭುಕ್ತೇ ನ ಶಕ್ತೋsಹಮುಪವಾಸಃ ಕಥಂ ಮುನೇ |
ವೃಕೋ ನಾಮಾಸ್ತಿ ಯೋ ವಹ್ನಿಃ ಸ ಸದಾ ಜಠರೇ ಮಮ || ೭ ||

ಅತೀವಾನ್ನಂ ಯದಾಶ್ನಾಮಿ ತದಾ ಸಮುಪಶಾಮ್ಯತಿ |
ಏಕಂ ಶಕ್ತೋsಸ್ಮ್ಯಹಂ ಕರ್ತುಂ ಚೋಪವಾಸಂ ಮಹಾಮುನೇ || ೮ ||

ಯೇನೈವ ಪ್ರಾಪ್ಯತೇ ಸ್ವರ್ಗಸ್ತತ್ಕರೋಮಿ ಯಥಾತಥಮ್ |
ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋsಹಮಾಪ್ನುಯಾಮ್ || ೯ ||

ವ್ಯಾಸ ಉವಾಚ -

ಶ್ರುತಾಸ್ತೇ ಮಾನವಾ ಧರ್ಮಾ ವೈದಿಕಾಶ್ಚ ಶ್ರುತಾಸ್ತ್ವಯಾ |
ಕಲೌ ಯುಗೇ ನ ಶಕ್ಯಂತೇ ಕರ್ತುಂ ತೇ ವೈ ನರಾಧಿಪ || ೧೦ ||

ಸುಖೋಪಾಯಂ ಚಾಲ್ಪಧನಮಲ್ಪಕ್ಲೇಶಂ ಮಹಾಫಲಮ್ |
ಪುರಾಣಾನಾಂ ಚ ಸರ್ವೇಷಾಂ ಸಾರಭೂತಂ ವದಾಮಿ ತೇ || ೧೧ ||

---

ಎಂದಿಗೂ ಭೋಜನ ಮಾಡಕೂಡದು ಎಂದು ಹೇಳಲು ಭೀಮಸೇನನು ಪುನಃ ಪ್ರಶ್ನಿಸುತ್ತಾನೆ ಭೋ ಮಹಾಜ್ಞಾನಿಗಳಾದ ಪಿತಾಮಹರೇ, ನಿಮ್ಮೆದುರು ಎಲ್ಲವನ್ನೂ ತಿಳಿಸುವೆನು ಕೇಳಿರಿ ||೬|| ಒಪ್ಪತ್ತು ಊಟ ಮಾಡುವುದರಿಂದ ನನಗೆ ಸಾಕಾಗುವುದಿಲ್ಲ ಹೀಗಿರುವಾಗ ಉಪವಾಸವನ್ನೆಂತು ಮಾಡಬಲ್ಲೆನು ? ನನ್ನ ಜಠರದಲ್ಲಿ ಸದಾ ಪ್ರಜ್ವಲಿಸುತ್ತಿರುವ ವೃಕ ಎಂಬ ಅಗ್ನಿಯು || ೭ || ಅತಿ ಆಹಾರವನ್ನು ನಾನು ಸೇವಿಸಿದಾಗಲೇ ಉಪಶಮನ ಹೊಂದುವದು. ಹೇ ಮಹಾಮುನೇ, ಯಾವ ಏಕಾದಶಿಯ ದಿನ ಉಪವಾಸ ಮಾಡುವದರಿಂದ ಸ್ವರ್ಗಪ್ರಾಪ್ತಿಯಾಗುವದೋ ಆ ದಿನ ಮಾತ್ರ ಹೇಗಾದರೂ ಮಾಡಿ ಉಪವಾಸ ಮಾಡುವೆನು. ಆದ್ದರಿಂದ ಎಲ್ಲ ಏಕಾದಶಿಗಳಲ್ಲಿ ನಾನು ಶ್ರೇಯಸ್ಸನ್ನು ಹೊಂದುವ ಅಂಥ ಒಂದು ಏಕಾದಶಿಯನ್ನು ನಿಶ್ಚಯಿಸಿ ಆ ಬಗ್ಗೆ ನನಗೆ ತಿಳಿಸಿರಿ || ೮ || ೯ || ಆಗ ಶ್ರೀವೇದವ್ಯಾಸರು ಹೇಳುತ್ತಾರೆ ಅಯ್ಯಾ ಭೀಮಸೇನರಾಜಾ, ನೀನು ಎಲ್ಲ ಮಾನವ (ಲೌಕಿಕ) ಧರ್ಮಗಳನ್ನು, ಮತ್ತು ವೈದಿಕಧರ್ಮಗಳನ್ನೂ ತಿಳಿದವನಾಗಿರುವಿ. ಆದರೆ ಅವೆಲ್ಲವುಗಳನ್ನು ಕಲಿಯುಗದಲ್ಲಿ ಆಚರಿಸಲು ಸಾಧ್ಯವಿಲ್ಲ || ೧೦ || ಆದ್ದರಿಂದ ಅಲ್ಪ ಖರ್ಚಿನಲ್ಲಿ ನಿರ್ವಹಿಸಬಹುದಾದ, ಅಲ್ಪಾಯಾಸ ಸಾಧ್ಯವಾದ, ಮಹಾಫಲಪ್ರದವಾದ, ಸಕಲ ಪುರಾಣಗಳ ಸಾರಭೂತವಾದ ಒಂದು ಸುಲಭೋಪಾಯವನ್ನು ನಿನಗೀಗ ತಿಳಿಸುವೆನು, ಕೇಳು. || ೧೧ || ಮಾಸದ ಉಭಯ ಪಕ್ಷಗಳಲ್ಲಿ ಬರುವ ಏಕಾದಶೀ ದಿನಗಳಲ್ಲಿ ಊಟ ಮಾಡಬಾರದು. ಏಕಾದಶಿಯ ದಿನ

ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ |
ಏಕಾದಶ್ಯಾಂ ನ ಭುಂಕ್ತೇ ಯೋ ನ ಯಾತಿ ನರಕಂ ತು ಸಃ || ೧೨ ||

ವ್ಯಾಸಸ್ಯ ವಚನಂ ಶ್ರುತ್ವಾ ಕಂಪಿತೋಽಶ್ವತ್ಥಪತ್ರವತ್ |
ಭೀಮಸೇನೋ ಮಹಾಬಾಹುರ್ಭೀತೋ ವಾಕ್ಯಮಭಾಷತ || ೧೩ ||

ಭೀಮಸೇನ ಉವಾಚ -

ಪಿತಾಮಹ ನ ಶಕ್ತೋಽಹಮುಪವಾಸೇ ಕರೋಮಿ ಕಿಮ್ |
ತತೋ ಬಹುಫಲಂ ಬ್ರೂಹಿ ವ್ರತಮೇಕಂ ಮಮ ಪ್ರಭೋ || ೧೪ ||

ವ್ಯಾಸ ಉವಾಚ -

ವೃಷಸ್ಥೇ ಮಿಥುನಸ್ಥೇಽರ್ಕೇ ಶುಕ್ಲಾ ಏಕಾದಶೀ ಭವೇತ್ |
ಜ್ಯೇಷ್ಠಮಾಸೇ ಪ್ರಯತ್ನೇನ ಸೋಪೋಷ್ಯಾ ಜಲವರ್ಜಿತಾ || ೧೫ ||

ಸ್ನಾನೇ ಚಾಚಮನೇ ಚೈವ ವರ್ಜಯಿತ್ವೋದಕಂ ಬುಧಃ |
ಮಾಷಮಾತ್ರಂ ಸುವರ್ಣಸ್ಯ ಯತ್ರ ಮಜ್ಜತಿ ವೈ ಮಣಿಃ || ೧೬ ||

ಏತದಾಚಮನಂ ಪ್ರೋಕ್ತಂ ಪವಿತ್ರಂ ಕಾಯಶೋಧನಮ್ |
ಗೋಕರ್ಣಾಕೃತಹಸ್ತೇನ ಮಾಷಮಾತ್ರಂ ಜಲಂ ಪಿಬೇತ್ || ೧೭ ||

---

ಯಾವನು ಊಟಮಾಡುವದಿಲ್ಲವೋ ಅವನೆಂದಿಗೂ ನರಕವನ್ನು ಹೊಂದುವದಿಲ್ಲ ||೧೨|| ಶ್ರೀವ್ಯಾಸರ ಈ ನುಡಿಗಳನ್ನು ಕೇಳಿದ ಭೀಮಸೇನನು ಭೀತನಾಗಿ ನುಡಿದನು || ೧೩ || ಪೂಜ್ಯ ಪಿತಾಮಹರೇ, ಉಪವಾಸ ಮಾಡುವದಂತೂ ನನ್ನಿಂದ ಸಾಧ್ಯವಿಲ್ಲ. ಆದ್ದರಿಂದ ಏನು ಮಾಡಲಿ ? ಹೇ ಪ್ರಭೋ ಬಹುಫಲವನ್ನು ಕೊಡುವ ಯಾವುದಾದರೂ ಬೇರೊಂದು ವ್ರತವನ್ನು ಕುರಿತು ಹೇಳಿರಿ || ೧೪ || ಆಗ ಶ್ರೀ ವ್ಯಾಸರು ಹೇಳುತ್ತಾರೆ ವೃಷರಾಶಿಯಲ್ಲಿ ಅಥವಾ ಮಿಥುನರಾಶಿಯಲ್ಲಿ ಸೂರ್ಯನಿರುವಾಗ ಜೇಷ್ಠಶುಕ್ಲ ಏಕಾದಶಿಯೇನು ಬರುವದೋ ಆ ದಿನ ಹೇಗಾದರೂ ಮಾಡಿ ಕಷ್ಟಪಟ್ಟು ನೀರನ್ನು ಕೂಡ ಸೇವಿಸದೇ ಉಪವಾಸದಿಂದ ಇರಬೇಕು || ೧೫ || ಸ್ನಾನ ಮಾಡುವಾಗ ಮತ್ತು ಆಚಮನ ಮಾಡುವಾಗ ಅಧಿಕನೀರನ್ನು ಬಳಸಬಾರದು. ಒಂದು ಮಾಸ ತೂಕದ (೮ ಗುಂಜಿ) ಬಂಗಾರದ ಮಣಿಯು ಮುಳುಗುವಷ್ಟು ಮಾತ್ರ ನೀರನ್ನು || ೧೬ || ಆಚಮನಕ್ಕೆ ಬಳಸಬೇಕು. ಇಂಥ ಆಚಮನವು ದೇಹಶುದ್ಧಿಯನ್ನುಂಟು ಮಾಡುವದು. ಗೋವಿನ ಕರ್ಣದಂತೆ ಹಸ್ತವನ್ನು ಮಾಡಿ ಅದರಲ್ಲಿ ಮಾಸಿ ಮಾತ್ರ ಜಲವನ್ನು ಹಾಕಿ ಆಚಮನ ಮಾಡಬೇಕು || ೧೭ || ಇದಕ್ಕಿಂತ ಕಡಿಮೆ ಅಥವಾ ಹೆಚ್ಚಿಗೆ ಕುಡಿಯುವ ಜಲವು ಸುರಾಪಾನಕ್ಕೆ ಸಮಾನವಾಗುವದು. ಜಲವನ್ನು ಬಿಟ್ಟು

ತನ್ನ್ಯೂನಮಧಿಕಂ ಪೀತ್ವಾ ಸುರಾಪಾನಸಮಂ ಭವೇತ್ |
ಉಪಯುಂಜೀತ ನೈವಾನ್ಯತ್ ವ್ರತಭಂಗೋಽನ್ಯಥಾ ಭವೇತ್ || ೧೮ ||

ಉದಯಾದುದಯಂ ಯಾವದ್ವರ್ಜಯಿತ್ವಾ ತಥೋದಕಮ್ |
ಅಪ್ರಯತ್ನಾದವಾಪ್ನೋತಿ ದ್ವಾದಶದ್ವಾದಶೀಫಲಮ್ || ೧೯ ||

ಪ್ರಭಾತೇ ವಿಮಲೇ ಜಾತೇ ದ್ವಾದಶ್ಯಾಂ ಸ್ನಾನಮಾಚರೇತ್ |
ಜಲಂ ಸುವರ್ಣಂ ದತ್ವಾ ಚ ದ್ವಿಜಾತಿಭ್ಯೋ ಯಥಾವಿಧಿ || ೨೦ ||

ಭುಂಜೀತ ಕೃತಕೃತ್ಯಸ್ತು ಬ್ರಾಹ್ಮಣೈಃ ಸಹಿತೋ ವ್ರತೀ |
ಏವಂ ಕೃತೇ ತು ಯತ್ಪುಣ್ಯಂ ಭೀಮಸೇನ ಶೃಣುಷ್ವ ತತ್ || ೨೧ ||

ಸಂವತ್ಸರಸ್ಯ ಯಾ ಮಧ್ಯೇ ಹ್ಯೇಕಾದಶ್ಯೋ ಭವಂತಿ ವೈ |
ತಾಸಾಂ ಫಲಮವಾಪ್ನೋತಿ ಅತ್ರ ಮೇ ನಾಸ್ತಿ ಸಂಶಯಃ || ೨೨ ||

ಇತಿ ಮಾಂ ಕೇಶವಃ ಪ್ರಾಹ ಶಂಖಚಕ್ರಗದಾಧರಃ |
ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ || ೨೩ ||

ಏಕಾದಶ್ಯಾಂ ನಿರಾಹಾರಾನ್ನರಃ ಪಾಪಾತ್ಪ್ರಮುಚ್ಯತೇ |
ದ್ರವ್ಯಶುದ್ಧಿಃ ಕಲೌ ನಾಸ್ತಿ ಸಂಸ್ಕಾರಃ ಸ್ಮಾರ್ತ ಏವ ಚ || ೨೪ ||

---

ಇನ್ನಾವುದನ್ನೂ ಸೇವಿಸಬಾರದು. ಹಾಗೆ ಸೇವಿಸಿದರೆ ವ್ರತದ ಭಂಗವಾಗುವದು || ೧೮ || ಏಕಾದಶೀ ಸೂರ್ಯೋದಯದಿಂದ ಹಿಡಿದು ಮರುದಿನ ದ್ವಾದಶೀ ಸೂರ್ಯೋದಯದವರೆಗೆ ನೀರನ್ನೂ ಸೇವಿಸದೇ ಉಪವಾಸ ಮಾಡಿದರೆ ಅನಾಯಾಸವಾಗಿ ಹನ್ನೆರಡು ತಿಂಗಳುಗಳ ದ್ವಾದಶೀ (ಏಕಾದಶೀ) ವ್ರತಗಳ ಫಲವು ಪ್ರಾಪ್ತವಾಗುವದು || ೧೯ || ದ್ವಾದಶೀ ಪಾರಣೆಯ ದಿನ ಸುಪ್ರಭಾತದಲ್ಲಿ ಶುದ್ಧ ಜಲದಲ್ಲಿ ಸ್ನಾನವನ್ನು ಮಾಡಿ ಬ್ರಾಹ್ಮಣರಿಗೆ ಯಥಾವಿಧಿ ಸುವರ್ಣವನ್ನು ಹಾಗೂ ಜಲವನ್ನು ದಾನಮಾಡಬೇಕು || ೨೦ || ಸ್ನಾನಾಹ್ನಿಕ ಪೂಜಾ ನೈವೇದ್ಯಾದಿಗಳ ನಂತರ ಕೃತಕೃತ್ಯನಾದ ವ್ರತಿಯು ಬ್ರಾಹ್ಮಣರೊಂದಗೆ ಪಾರಣೆಯನ್ನು ಮಾಡಬೇಕು. ಹೇ ಭೀಮಸೇನ, ಈ ರೀತಿ ಆಚರಿಸುವದರಿಂದ ಬರುವ ಪುಣ್ಯವಿಶೇಷವನ್ನು ತಿಳಿಸುವೆನು ಕೇಳು || ೨೧ || ಒಂದು ವರ್ಷದಲ್ಲಿ ಎಷ್ಟು ಏಕಾದಶಿಗಳು ಬರುವವೋ ಆ ಎಲ್ಲ ಏಕಾದಶಿಗಳಂದು ಉಪವಾಸ ಮಾಡಿದಾಗಿನ ಫಲವು ಬರುವದೆಂಬಲ್ಲಿ ನನಗೆ ಸಂದೇಹವಿಲ್ಲ || ೨೨ || ಈ ವಿಷಯವನ್ನು ನನಗೆ ಶಂಖಚಕ್ರಗದಾಧಾರಿಯಾದ ಸ್ವತಃ ಶ್ರೀಕೇಶವನು ತಿಳಿಸಿದ್ದಾನೆ. ಅವನು ಮತ್ತೂ ಏನು ಹೇಳಿರುವನೆಂದರೆ ಸರ್ವಧರ್ಮಗಳನ್ನು ಪರಿತ್ಯಜಿಸಿ ತನ್ನೊಬ್ಬನನ್ನು ಮಾತ್ರ ಶರಣು ಹೊಂದಬೇಕು ಎಂದು. || ೨೩ || ಏಕಾದಶಿಯ ದಿನ ಮಾಡುವ ನಿರಾಹಾರ (ಉಪವಾಸ) ದಿಂದ ಮನುಷ್ಯನು ಸರ್ವ ಪಾಪಗಳಿಂದ

ವೈದಿಕಶ್ಚ ಕುತಶ್ಚಾಸ್ತೇ ಪ್ರಾಪ್ತೇ ದುಷ್ಟೇ ಕಲೌ ಯುಗೇ |
ಕಿಂ ನ ತೇ ಬಹುನೋಕ್ತೇನ ವಾಯುಪುತ್ರ ಪುನಃ ಪುನಃ || ೨೫ ||

ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ |
ಏಕಾದಶ್ಯಾಂ ಸಿತೇ ಪಕ್ಷೇ ಜ್ಯೇಷ್ಠಸ್ಯೋದಕವರ್ಜಿತಮ್ || ೨೬ ||

ಉಪೋಷ್ಯ ಫಲಮಾಪ್ನೋತಿ ತಚ್ಛೃಣುಷ್ವ ವೃಕೋದರ |
ಸರ್ವತೀರ್ಥೇಷು ಯತ್ಪುಣ್ಯಂ ಸರ್ವದಾನೇಷು ಯತ್ಫಲಮ್ || ೨೭ ||

ತತ್ಫಲಂ ಸಮವಾಪ್ನೋತಿ ಇಮಾಂ ಕೃತ್ವಾ ವೃಕೋದರ |
ಸಂವತ್ಸರಸ್ಯ ಯಾವತ್ಯಃ ಶುಕ್ಲಾಃ ಕೃಷ್ಣಾಃ ವೃಕೋದರ || ೨೮ ||

ಉಪೋಷಿತಾಸ್ತಾಃ ಸರ್ವಾ ಸ್ಯುರೇಕಾದಶ್ಯೋ ನ ಸಂಶಯಃ |
ಧನಧಾನ್ಯಬಲಾಯುರ್ದಾಃ ಪುತ್ರಾರೋಗ್ಯಫಲಪ್ರದಾಃ || ೨೯ ||

ಉಪೋಷಿತಾ ನರವ್ಯಾಘ್ರ ಇತಿ ಸತ್ಯಂ ವದಾಮಿ ತೇ |
ಯಮದೂತಾಃ ಮಹಾಕಾಯಾಃ ಕರಾಲಾಃ ಕೃಷ್ಣಪಿಂಗಲಾಃ || ೩೦ ||

ದಂಡಪಾಶಧರಾಃ ರೌದ್ರಾಃ ನೋಪಸರ್ಪಂತಿ ತಂ ನರಮ್ |
ಪೀತಾಂಬರಧರಾಃ ಸೌಮ್ಯಾಶ್ಚಕ್ರಹಸ್ತಾಃ ಮನೋಜವಾಃ || ೩೧ ||

---

ಮುಕ್ತನಾಗುತ್ತಾನೆ. ಕಲಿಯುಗದಲ್ಲಿ ದ್ರವ್ಯಶುದ್ಧಿಯೆಂಬುದಿಲ್ಲ. ಅಂದರೆ ಕೇವಲ ದಾನದಿಂದ ಶ್ರೇಷ್ಠಗತಿ ಇಲ್ಲ ಹಾಗೂ ಸ್ಮೃತ್ಯುಕ್ತವಾದ ಸಂಸ್ಕಾರಗಳಿಲ್ಲ || ೨೪ || ಹೀಗಿರುವಾಗ ದುಷ್ಟವಾದ ಕಲಿಯುಗವು ಬಂದಾಗ ವೈದಿಕ ಸಂಸ್ಕರವು ಹೇಗೆ ಸಾಧ್ಯ? ಹೇ ವಾಯುನಂದನ, ನಿನಗೆ ಮತ್ತೆ ಮತ್ತೆ ಹೆಚ್ಚಿಗೆ ಹೇಳುವುದೇನಿದೆ ? || ೨೫ || ಒಟ್ಟಿನಲ್ಲಿ ಹೇಳುವುದಾದರೆ ಉಭಯ ಪಕ್ಷಗಳ ಏಕಾದಶಿಯ ದಿನ ಊಟ ಮಾಡಬಾರದು. ಹೇ ವೃಕೋದರ, ಜ್ಯೇಷ್ಠಮಾಸ ಶುಕ್ಲ ಪಕ್ಷದ ಏಕಾದಶಿಯ ದಿನ ನೀರನ್ನೂ ಸೇವಿಸದೇ || ೨೬ || ಉಪವಾಸ ಮಾಡಿದರೆ ಬರುವ ಫಲವನ್ನು ತಿಳಿಸುವೆನು ಕೇಳು. ವರ್ಷದ ೧೨ ತಿಂಗಳ ಶುಕ್ಲ ಮತ್ತು ಕೃಷ್ಣಪಕ್ಷಗಳಲ್ಲಿ ಒಟ್ಟು ಎಷ್ಟು ಏಕಾದಶಿಗಳಿವೆಯೋ || ೨೮ || ಆ ಎಲ್ಲ ಏಕಾದಶಿಗಳಂದು ಉಪವಾಸ ಮಾಡಿದಂತಾಗುವದು. ಇದರಲ್ಲಿ ಸಂದೇಹವಿಲ್ಲ. ಎಲ್ಲ ಏಕಾದಶಿಗಳಂದು ಉಪವಾಸ ಮಾಡಿದಾಗ ಧನ, ಧಾನ್ಯ, ಬಲ, ಆಯುಷ್ಯಾದಿಗಳು, ಪುತ್ರ ಆರೋಗ್ಯ ಮುಂತಾದ ಎಷ್ಟು ಫಲಗಳ ಪ್ರಾಪ್ತಿಯಾಗುವದೋ || ೨೯ || ಅದೆಲ್ಲವೂ ಜ್ಯೇಷ್ಠಶುದ್ಧ ಏಕಾದಶೀ ಉಪವಾಸ ಮಾತ್ರದಿಂದ ಲಭಿಸುವದು. ಹೇ ರಾಜಾ ನಿನಗೆ ಸತ್ಯವಾದುದನ್ನು ಹೇಳುತ್ತಿದ್ದೇನೆ ಏನೆಂದರೆ ದೊಡ್ಡ ದೊಡ್ಡ ದೇಹಗಳುಳ್ಳ, ಭಯಂಕರರಾದ, ಕಪ್ಪು ಹಾಗೂ ಕಂದೀ ಬಣ್ಣದ || ೩೦ || ದಂಡ - ಪಾಶಗಳನ್ನು ಧರಿಸಿದ, ಭಯಂಕರರಾದ ಯಮದೂತರು, ಏಕಾದಶೀ ಉಪವಾಸ

ಯೇ ಪ್ರದಾಸ್ಯಂತಿ ದಾನಾನಿ ದ್ವಾದಶ್ಯಾಂ ಸಮುಪೋಷ್ಯ ಚ |
ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ಪ್ರಾಪ್ಸ್ಯಂತಿ ಪರಮಂ ಪದಮ್ || ೪೫ ||

ಬ್ರಹ್ಮಹಾ ಮದ್ಯಪಃ ಸ್ತೇನೋ ಗುರುದ್ವೇಷ್ಟಾ ಸದಾನೃತೀ |
ಮುಚ್ಯಂತೇ ಪಾತಕೈಃ ಸರ್ವೈರ್ನಿರ್ಜಲಾ ಯೈರುಪೋಷಿತಾ || ೪೬ ||

ವಿಶೇಷಂ ಶ್ರುಣು ಕೌಂತೇಯ ನಿರ್ಜಲೈಕಾದಶೀದಿನೇ |
ಯತ್ಕರ್ತವ್ಯಂ ನರೈಃ ಸ್ತ್ರೀಭಿಃ ಶ್ರದ್ಧಾದಮಸಮನ್ವಿತೈಃ || ೪೭ ||

ಜಲಾಶಯೀ ತು ಸಂಪೂಜ್ಯೋ ದೇಯಾ ಧೇನುಶ್ಚ ತನ್ಮಯೀ |
ಪ್ರತ್ಯಕ್ಷಾ ವಾ ನೃಪಶ್ರೇಷ್ಠ ಘೃತಧೇನುರಥಾಪಿ ವಾ || ೪೮ ||

ದಕ್ಷಿಣಾಭಿಶ್ಚ ಶ್ರೇಷ್ಠಾಭಿರ್ಮಿಷ್ಟಾನ್ನೈಶ್ಚ ಪೃಥಗ್ವಿಧೈಃ |
ತೋಷಣೀಯಾಃ ಪ್ರಯತ್ನೇನ ದ್ವಿಜಾ ಧರ್ಮಭೃತಾಂ ವರ || ೪೯ ||

ತುಷ್ಟೋ ಭವತಿ ವೈ ಕ್ಷಿಪ್ರಂ ತೈಸ್ತುಷ್ಟೈರ್ಮೋಕ್ಷದೋ ಹರಿಃ |
ಆತ್ಮದ್ರೋಹಃ ಕೃತಸ್ತೈಸ್ತು ಯೈರ್ನೈಷಾ ಸಮುಪೋಷಿತಾ || ೫೦ ||

ಪಾಪಾತ್ಮಾನೋ ದುರಾಚಾರಾ ದುಷ್ಟಾಸ್ತೇ ನಾತ್ರ ಸಂಶಯಃ |
ಕುಲಾನಾಂ ಚ ಶತಂ ಸಾಗ್ರಮನಾಚಾರರತಂ ಸದಾ || ೫೧ ||

ಮರಣಾನಂತರ ದುರ್ಗತಿಯನ್ನು ಹೊಂದುವನು. || ೪೪ || ಯಾವನು ಜ್ಯೇಷ್ಠ ಶುದ್ಧ ಏಕಾದಶೀ ಉಪವಾಸದಿಂದ ಇದ್ದು ದ್ವಾದಶಿಯ ದಿನ ವಿವಿಧ ದಾನಗಳನ್ನು ಕೊಡುವನೋ ಅವನು ಮೋಕ್ಷವನ್ನು ಹೊಂದುವನು || ೪೫ || ಬ್ರಹ್ಮಘಾತಕನು, ಮಧ್ಯಪಾನಿಯು, ಸ್ತೇನನು, ಗುರುದ್ವೇಷಿಯು ಮತ್ತು ಸದಾ ಅಸತ್ಯಭಾಷಿಯು ಯಾರೇ ಇದ್ದರು ಅವರು ನಿರ್ಜಲಾ ಏಕಾದಶೀ ವ್ರತವನ್ನು ಆಚರಿಸಿದರೆ ಮಾಡಿದ ಸಕಲಪಾಪಗಳಿಂದ ಮುಕ್ತರಾಗುವರು ||೪೬|| ಹೇ ಯುಧಿಷ್ಠಿರ, ನಿರ್ಜಲಾ ಏಕಾದಶಿಯ ದಿನ ಪುರುಷ ಹಾಗೂ ಸ್ತ್ರೀಯರು ಶ್ರದ್ಧಾ, ಇಂದ್ರಿಯ ನಿಗ್ರಹವುಳ್ಳವರಾಗಿ ಅವಶ್ಯ ಮಾಡಬೇಕಾದ ವಿಶೇಷ ಧರ್ಮಗಳನ್ನು ತಿಳಿಸುವೆನು ಕೇಳು || ೪೭ || ಆ ದಿನ ಜಲಶಾಯಿಯಾದ ಶ್ರೀಮನ್ನಾರಾಯಣನನ್ನು ಭಕ್ತಿಯಿಂದ ಪೂಜಿಸಿ ಗೋದಾನವನ್ನು ಕೊಡಬೇಕು. ಪ್ರತ್ಯಕ್ಷ ಗೋವನ್ನಾಗಲೀ ಅಥವಾ ಘೃತಧೇನುವನ್ನಾಗಲೀ ದಾನ ಮಾಡಬೇಕು || ೪೮ || ಸಾಕಷ್ಟು ದಕ್ಷಿಣಾದಿಗಳನ್ನು ಕೊಟ್ಟು ಮತ್ತು ವಿವಿಧ ಮಿಷ್ಟಾನ್ನಗಳನ್ನು ಉಣಿಸಿ ಬ್ರಾಹ್ಮಣರನ್ನು ಸಂತೋಷ ಪಡಿಸಬೇಕು || ೪೯ || ಬ್ರಾಹ್ಮಣರನ್ನು ಈ ರೀತಿ ಸಂತೋಷಗೊಳಿಸಿದರೆ ಕೂಡಲೇ ಶ್ರೀಹರಿಯು ಪ್ರಸನ್ನನಾಗಿ ಮೋಕ್ಷವನ್ನು ದಯಪಾಲಿಸುವನು. ನಿರ್ಜಲೈಕಾದಶಿಯ ದಿನ ಉಪವಾಸ ಮಾಡದಿದ್ದವರು ಆತ್ಮದ್ರೋಹ ಮಾಡಿಕೊಂಡಂತೆಯೇ ಸರಿ. || ೫೦ || ಉಪವಾಸ ಮಾಡದವರು ಪಾಪಾತ್ಮರೂ, ದುರಾಚಾರಿಗಳೂ, ದುಷ್ಟರೂ ಆಗಿರುವರೆಂಬಲ್ಲಿ ಸಂದೇಹವೇ ಇಲ್ಲ. ಅಂಥವರ ಹಿಂದಿನ

ಆತ್ಮನಾ ಸಹ ತೈರ್ನೀತಂ ವಾಸುದೇವಸ್ಯ ಮಂದಿರಮ್ |
ಶಾಂತೈರ್ದಾನಪರೈಶ್ಚೈವ ಅರ್ಚದ್ಭಿಶ್ಚ ತಥಾ ಹರಿಮ್ || ೫೨ ||

ಕುರ್ವದ್ಭಿರ್ಜಾಗರಂ ರಾತ್ರೌ ಯೈರ್ನರೈಃ ಸಮುಪೋಷಿತಾ |
ಅನ್ನಂ ಪಾನಂ ತಥಾ ಗಾವೋ ವಸ್ತ್ರಂ ಶಯ್ಯಾಸನಂ ಶುಭಮ್ || ೫೩ ||

ಕಮಂಡಲುಸ್ತಥಾ ಛತ್ರಂ ದಾತವ್ಯಂ ನಿರ್ಜಲಾ ದಿನೇ |
ಉಪಾನಹೌ ಚ ಯೋ ದದ್ಯಾತ್ ಪಾತ್ರಭೂತೇ ದ್ವಿಜೋತ್ತಮ || ೫೪ ||

ಸ ಸೌವರ್ಣೇನ ಯಾನೇನ ಸ್ವರ್ಗಲೋಕೇ ವ್ರಜೇದ್ಧ್ರುವಮ್ |
ಯಶ್ಚೇಮಾಂ ಶ್ರುಣುಯಾದ್ಭಕ್ತ್ಯಾ ಯಶ್ಚಾಪಿ ಪರಿಕೀರ್ತಯೇತ್ || ೫೫ ||

ಉಭೌ ತೌ ಸ್ವರ್ಗತೌ ಸ್ಯಾತಾಂ ನಾತ್ರ ಕಾರ್ಯಾ ವಿಚಾರಣಾ |
ಯತ್ಫಲಂ ತು ಸಿನೀವಾಲ್ಯಾಂ ರಾಹುಗ್ರಸ್ತೇ ದಿವಾಕರೇ || ೫೬ ||

ಕೃತ್ವಾ ಶ್ರಾದ್ಧಂ ಲಭೇನ್ಮರ್ತ್ಯಸ್ತದಸ್ಯಾಃ ಶ್ರವಣಾದಪಿ |
ನಿಯಮಂ ಚ ಪ್ರಕುರ್ವೀತ ದಂತಧಾವನಪೂರ್ವಕಮ್ || ೫೭ ||

ಹಾಗೂ ಮುಂದಿನ ಒಂದು ನೂರು ತಲೆ ಮಾರಿನವರೆಲ್ಲರೂ ಅನಾಚಾರರತರಾಗಿರುವರು. ||೫೧|| ಮತ್ತು ಯಾರು ಈ ಏಕಾದಶೀ ವ್ರತವನ್ನು ಆಚರಿಸುವರೋ, ಶಾಂತರೂ, ದಾನಿಗಳೂ ಹಾಗೂ ಶ್ರೀಹರಿಯನ್ನು ಅರ್ಚಿಸುವವರೂ, ಏಕಾದಶೀ ರಾತ್ರಿ ಜಾಗರಣೆ ಮಾಡುವವರೂ ಆದ ಅವರು ತಮ್ಮ ಹಿಂದಿನ ಮತ್ತು ಮುಂದಿನ ಒಂದು ನೂರು ತಲೆಮಾರಿನವರು ಕುಟುಂಬಿಗಳು ಅನಾಚಾರಿಗಳಾಗಿದ್ದರೂ ಅವರನ್ನು ತಮ್ಮೊಂದಿಗೆ ಶ್ರೀ ಹರಿ ವಾಸುದೇವನ ಮಂದಿರಕ್ಕೆ ಕರೆದೊಯ್ಯುವರು. ನಿರ್ಜಲಾ ಏಕಾದಶೀ ಪಾರಣೆಯ ದಿನ ಶ್ರೇಷ್ಠವಾದ ಅನ್ನ, ಪಾನ, ಗೋ, ವಸ್ತ್ರ, ಶಯ್ಯಾ ಆಸನ || ೫೨ || ೫೩ || ಕಮಂಡಲು, ಛತ್ರ, ಪಾದರಕ್ಷೆ ಮುಂತಾದವುಗಳನ್ನು ಸತ್ಪಾತ್ರರಲ್ಲಿ ದಾನ ಮಾಡಬೇಕು || ೫೪ || ಈ ರೀತಿ ದಾನ ಮಾಡುವವನನ್ನು ಮರಣಾನಂತರ ಸುವರ್ಣವಾಹನದಲ್ಲಿ ಕುಳ್ಳಿರಿಸಿಕೊಂಡು ದೇವದೂತರು ಸ್ವರ್ಗಲೋಕಕ್ಕೆ ಕರೆದೊಯ್ಯುವರು. ಈ ಏಕಾದಶಿಯ ಮಹಾತ್ಮೆಯನ್ನು ಭಕ್ತಿಯಿಂದ ಶ್ರವಣ ಮಾಡುವವನೂ ಮತ್ತು ಹೇಳುವವನೂ || ೫೫ || ಇಬ್ಬರೂ ನಿಶ್ಚಯವಾಗಿ ಸ್ವರ್ಗಲೋಕವನ್ನು ಪಡೆಯುವರು. ಸಿನೀವಾಲೀ (ಚಂದ್ರನು ಉದಯಿಸಿದ ಅಮವಾಸ್ಯೆ ಭಾಗ) ಅಮವಾಸ್ಯೆಯ ದಿನದ ಸೂರ್ಯಗ್ರಹಣದ ದಿನ || ೫೬ || ಪಿತೃಶ್ರಾದ್ಧವನ್ನು ಮಾಡುವ ಮನುಷ್ಯನು ಯಾವ ಫಲವನ್ನು ಪಡೆಯುವನೋ ಅದೇ ಫಲವನ್ನು ಈ ನಿರ್ಜಲೈಕಾದಶೀ ಮಹಾತ್ಮೆಯ ಶ್ರವಣ ಮಾಡುವವನು ಹೊಂದುವನು. ದಂತಧಾವನಪೂರ್ವಕ ಈ ಏಕಾದಶೀ ವ್ರತದ ಗ್ರಹಣ ಮಾಡಬೇಕು || ೫೭ || ಏಕಾದಶಿಯ ದಿನ ಶ್ರೀಕೇಶವನ ಪ್ರೀತ್ಯರ್ಥವಾಗಿ ನಿರಾಹಾರನಾಗಿದ್ದು ಆಚಮನ ಮಾಡುವಾಗಿನ ಜಲವಲ್ಲದೇ ಬೇರೇ ಜಲವನ್ನು ಸ್ವೀಕರಿಸುವದಿಲ್ಲ. ಎಂದು ಸಂಕಲ್ಪ ಮಾಡಬೇಕು || ೫೮ || ದ್ವಾದಶಿಯ ದಿನ ದೇವದೇವೋತ್ತಮನಾದ

ಏಕಾದಶ್ಯಾಂ ನಿರಾಹಾರೋ ವರ್ಜಯಿಷ್ಯಾಮಿ ವೈ ಜಲಮ್ |
ಕೇಶವ ಪ್ರೀಣನಾರ್ಥಾಯ ಅನ್ಯದಾಚಮನಾದೃತೇ || ೫೮ ||

ದ್ವಾದಶ್ಯಾಂ ದೇವದೇವೇಶಃ ಪೂಜನೀಯಸ್ತ್ರಿವಿಕ್ರಮಃ |
ಗಂಧಪುಷ್ಪೈಸ್ತಥಾ ದೀಪೈರ್ವಾರಿಭಿಃ ಪ್ರೀಣಯೇದ್ಧರಿಮ್ || ೫೯ ||

ಪೂಜಯಿತ್ವಾ ವಿಧಾನೇನ ಮಂತ್ರಮೇತಮುದೀರಯೇತ್ |
ದೇವದೇವ ಹೃಷೀಕೇಶ ಸಂಸಾರಾರ್ಣವತಾರಕ || ೬೦ ||

ಜಲಕುಂಭಪ್ರದಾನೇನ ನಯ ಮಾಂ ಪರಮಾಂ ಗತಿಮ್ |
ತತಃ ಕುಂಭಾಃ ಪ್ರದಾತವ್ಯಾಃ ಬ್ರಾಹ್ಮಣೇಭ್ಯಃ ಸ್ವಶಕ್ತಿತಃ || ೬೧ ||

ಸಾನ್ನಾವಸ್ತ್ರಯುತಾ ಭೀಮ ಛತ್ರೋಪಾನತ್ಫಲಾನ್ವಿತಾಃ |
ದಾನಾನ್ಯನ್ಯಾನಿ ದೇಯಾನಿ ಜಲಧೇನುರ್ವಿಶೇಷತಃ || ೬೨ ||

ಭೋಜಯಿತ್ವಾ ತತೋ ವಿಪ್ರಾನ್ ಸ್ವಯಂ ಭುಂಜೀತ ವಾಗ್ಯತಃ |
ಏವಂ ಯಃ ಕುರುತೇ ಪುಣ್ಯಾಂ ದ್ವಾದಶೀಂ ಪಾಪನಾಶಿನೀಮ್ || ೬೩ ||

ಸರ್ವಪಾಪವಿನಿರ್ಮುಕ್ತಃ ಪದಂ ಗಚ್ಛತ್ಯನಾಮಯಮ್ || ೬೪ ||

|| ಇತಿ ಶ್ರೀ ಬ್ರಹ್ಮವೈವರ್ತಪುರಾಣೇ ಜ್ಯೇಷ್ಠಶುಕ್ಲ
ನಿರ್ಜಲೈಕಾದಶೀವ್ರತಮಾಹಾತ್ಮ್ಯಂ ಸಂಪೂರ್ಣಮ್ || ೧೪ ||

---

ಶ್ರೀತ್ರಿವಿಕ್ರಮನನ್ನು ಗಂಧಪುಷ್ಪ, ದೀಪ, ವಾರಿಗಳಿಂದ ಭಕ್ತಿಪೂರ್ವಕ ಪೂಜಿಸಿ ಪ್ರಸನ್ನಗೊಳಿಸಬೇಕು || ೫೯ || ವಿಧಿಪೂರ್ವಕ ಷೋಡಶೋಪಚಾರಗಳಿಂದ ಪೂಜಿಸಿ ಈ ಮಂತ್ರವನ್ನು ಪಠಿಸಬೇಕು - ಹೇ ದೇವದೇವ, ಹೃಷೀಕೇಶಾ, ಸಂಸಾರಾರ್ಣವತಾರಕ ||೬೦|| ಈ ಜಲಕುಂಭದಾನದಿಂದ ಪ್ರೀತನಾಗಿ ನನ್ನನ್ನು ಪರಮಲೋಕಕ್ಕೆ ಕರೆದೊಯ್ಯಬೇಕು. ಈ ಮಂತ್ರವನ್ನು ಪಠಿಸಿ ಹೀಗೆ ಪ್ರಾರ್ಥಿಸಿ ನಂತರ ಆ ಜಲಕುಂಭವನ್ನು ತನ್ನ ಶಕ್ತ್ಯನುಸಾರ ದಕ್ಷಿಣಾದಿಗಳೊಂದಿಗೆ ಬ್ರಾಹ್ಮಣರಿಗೆ ದಾನಮಾಡಬೇಕು || ೬೧ || ಅನ್ನ, ವಸ್ತ್ರ, ಛತ್ರ, ಉಪಾನಹ ಮುಂತಾದ ಇತರ ದಾನಗಳನ್ನು ಕೊಡಬೇಕು. ವಿಶೇಷವಾಗಿ ಜಲಧೇನುವಿನ ದಾನವನ್ನು ಕೊಡಬೇಕು || ೬೨ || ನಂತರ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಆಮೇಲೆ ಯಜಮಾನನು ಸ್ವತಃ ಮೌನದಿಂದ ಊಟ ಮಾಡಬೇಕು. ಪಾಪನಾಶಕವಾದ ದ್ವಾದಶಿಯ ದಿನ ಈ ಪ್ರಕಾರ ಮಾಡುವವನು || ೬೩ || ಸರ್ವಪಾಪಗಳಿಂದ ಮುಕ್ತನಾಗಿ ಅಕ್ಷಯವಾದ ಲೋಕವನ್ನು ಹೊಂದುವನು || ೬೪ ||

||ಇಲ್ಲಿಗೆ ಶ್ರೀಬ್ರಹ್ಮವೈವರ್ತಪುರಾಣದಲ್ಲಿಯ ಜ್ಯೇಷ್ಠಶುಕ್ಲಪಕ್ಷದ ನಿರ್ಜಲೈಕಾದಶೀ
ವ್ರತ ಮಹಾತ್ಮೆಯು ಸಮಾಪ್ತವಾಯಿತು || ಶ್ರೀ ಕೃಷ್ಣಾರ್ಪಣಮಸ್ತು ||

# ಆಷಾಢ ಕೃಷ್ಣೈಕಾದಶೀವ್ರತಕಥಾ

ಯುಧಿಷ್ಠಿರ ಉವಾಚ

ಜ್ಯೇಷ್ಠಶುಕ್ಲೇ ನಿರ್ಜಲಾಯಾ ಮಾಹಾತ್ಮ್ಯಂ ವೈ ಶ್ರುತಂ ಮಯಾ ।
ಆಷಾಢಕೃಷ್ಣಪಕ್ಷೇ ತು ಕಿಂ ನಾಮ್ನೈಕಾದಶೀ ಭವೇತ್ ॥೧॥

ಕಥಯಸ್ವ ಪ್ರಸಾದೇನ ಮಮಾಗ್ರೇ ಮಧುಸೂದನ ।

ಶ್ರೀಕೃಷ್ಣ ಉವಾಚ

ವ್ರತಾನಾಮುತ್ತಮಂ ರಾಜನ್ ಕಥಯಾಮಿ ತವಾಗ್ರತಃ ॥೨॥

ಸರ್ವಪಾಪಕ್ಷಯಕರಂ ಭುಕ್ತಿಮುಕ್ತಿಪ್ರದಾಯಕಮ್ ।
ಆಷಾಢಸ್ಯಾಸಿತೇ ಪಕ್ಷೇ ಯೋಗಿನೀನಾಮ ನಾಮತಃ ॥೩॥

ಏಕಾದಶೀ ನೃಪಶ್ರೇಷ್ಠ ಮಹಾಪಾತಕನಾಶಿನೀ ।
ಸಂಸಾರಾರ್ಣವಮಗ್ನಾನಾಂ ಪಾರರೂಪಾ ಸನಾತನೀ ॥೪॥

ಜಗತ್ತ್ರಯೇ ಸಾರಭೂತಾ ಯೋಗಿನೀತಿ ನರಾಧಿಪ ।
ಕಥಯಾಮಿ ಕಥಾಂ ತಸ್ಯಾಃ ಪೌರಾಣೀಂ ಪಾಪಹಾರಿಣೀಮ್ ॥೫॥

ಅಲಕಾಧಿಪತಿರ್ನಾಮ್ನಾ ಕುಬೇರಃ ಶಿವಪೂಜಕಃ ।
ತಸ್ಯಾಸೀತ್ ಪುಷ್ಪವಟುಕೋ ಹೇಮಮಾಲೀತಿ ನಾಮತಃ ॥೬॥

---

ಹೇ ಭಗವನ್ ಮಧುಸೂದನ, ನೀನು ಇದುವರೆಗೆ ಹೇಳಿದ ಜ್ಯೇಷ್ಠ ಶುಕ್ಲಪಕ್ಷದ ನಿರ್ಜಲಾಏಕಾದಶಿಯ ಮಹಾತ್ಮೆಯನ್ನು ಕೇಳಿದೆನು. ಇನ್ನು ಆಷಾಢಕೃಷ್ಣಪಕ್ಷದ ಏಕಾದಶಿಯ ಮಹಿಮೆಯನ್ನು ತಿಳಿಸು. ಈ ಏಕಾದಶಿಯ ಹೆಸರೇನು? ॥೧॥ ಇವೆಲ್ಲವನ್ನು ತಿಳಿಸಿ ಅನುಗ್ರಹಿಸು. ಎಂದು ಯುಧಿಷ್ಠಿರನು ಪ್ರಾರ್ಥಿಸಲು ಶ್ರೀಕೃಷ್ಣನು ಹೇಳುತ್ತಾನೆ - ಹೇ ರಾಜನ್, ವ್ರತಗಳಲ್ಲಿ ಶ್ರೇಷ್ಠವಾದ ವ್ರತದ ಬಗ್ಗೆ ನಿನಗೀಗ ತಿಳಿಸುವೆನು. ॥೨॥ ಆಷಾಢಕೃಷ್ಣ ಪಕ್ಷದಲ್ಲಿ ಬರುವ ಯೋಗಿನೀ ಎಂಬ ಹೆಸರಿನ ಏಕಾದಶಿಯು ಸಕಲಪಾಪಗಳನ್ನು ಕಳೆದು ಭುಕ್ತಿಮುಕ್ತಿಗಳನ್ನು ಕೊಡುವಂಥದಾಗಿದೆ. ॥೩॥ ಮಹಾಪಾತಕಗಳನ್ನು ನಿವಾರಿಸುವಂಥದಾಗಿದೆ. ಸಂಸಾರಸಾಗರದಲ್ಲಿ ಮುಳುಗಿದವರನ್ನು ಉದ್ಧರಿಸಿ ಪಾರುಮಾಡುವಂಥದಾಗಿದೆ. ಸನಾತನಿಯಾದ ॥೪॥ ಈ ಯೋಗಿನೀ ಏಕಾದಶಿಯು ಮೂರುಲೋಕಗಳಲ್ಲಿ ಸಾರಭೂತವಾದ ವ್ರತವಾಗಿದೆ. ಪಾಪಪರಿಹಾರಕವಾದ ಈ ಏಕಾದಶಿಯ ಒಂದು ಪೌರಾಣಿಕ ಕಥೆಯನ್ನು ನಿನಗೆ ತಿಳಿಸುವೆನು ಕೇಳು. ॥೫॥ ಅಲಕಾನಗರದ ಅಧಿಪತಿಯಾದ ಕುಬೇರನು ಶಿವಪೂಜಕನಾಗಿದ್ದನು. ಹೇಮಮಾಲೀ ಎಂಬುವವನು ದೇವಪೂಜಾರ್ಥ ಅವನಿಗೆ ಹೂವುಗಳನ್ನು ತಂದುಕೊಡುವ ಮಾಲಿಯಾಗಿದ್ದನು. ॥೬॥ ವಿಶಾಲಾಕ್ಷೀ ಎನ್ನುವವಳು ಆ ಮಾಲಿಯ ಸುಂದರ

**ತಸ್ಯ ಪತ್ನೀ ಸರೂಪಾ ಚ ವಿಶಾಲಾಕ್ಷೀತಿ ನಾಮತಃ ।**
**ಸ ತಸ್ಯಾಂ ಸ್ನೇಹಸಂಯುಕ್ತಃ ಕಾಮಪಾಶವಶಂಗತಃ ॥೭॥**

**ಮಾನಸಾತ್ ಪುಷ್ಪನಿಚಯಮಾನೀಯ ಸ್ವಗೃಹೇ ಸ್ಥಿತಃ ।**
**ಪತ್ನೀಪ್ರೇಮಸಮಾಯುಕ್ತೋ ನ ಕುಬೇರಾಲಯಂ ಗತಃ ॥೮॥**

**ಕುಬೇರೋ ದೇವಸದನೇ ಕರೋತಿ ಶಿವಪೂಜನಮ್ ।**
**ಮಧ್ಯಾಹ್ನಸಮಯೇ ರಾಜನ್ ಪುಷ್ಪಾಣಿ ನ ಸಮೀಕ್ಷತೇ ॥೯॥**

**ಹೇಮಮಾಲೀ ಸ್ವಭವನೇ ರಮತೇ ಕಾಂತಯಾ ಸಹ ।**
**ಯಕ್ಷರಾಟ್ ಪ್ರತ್ಯುವಾಚಾಥ ಕಾಲಾತಿಕ್ರಮಕೋಪಿತಃ ॥೧೦॥**

**ಕಸ್ಮಾನ್ನಾಯಾತಿ ಭೋ ಯಕ್ಷಾಃ! ಹೇಮಮಾಲೀ ದುರಾತ್ಮವಾನ್ ।**
**ನಿಶ್ಚಯಃ ಕ್ರಿಯತಾಮಸ್ಯ ಪ್ರತ್ಯುವಾಚ ಪುನಃ ಪುನಃ ॥೧೧॥**

**ಯಕ್ಷಾ ಊಚುಃ**

**ವನಿತಾಕಾಮುಕೋ ಗೇಹೇ ರಮತೇ ಸ್ವೇಚ್ಛಯಾ ನೃಪ ।**
**ತೇಷಾಂ ವಾಕ್ಯಂ ಸಮಾಕರ್ಣ್ಯ ಕುಬೇರಃ ಕೋಪಪೂರಿತಃ ॥೧೨॥**

---

ಪತ್ನಿಯಾಗಿದ್ದಳು. ಹೇಮಮಾಲಿಯು ವಿಶಾಲಾಕ್ಷಿಯಲ್ಲಿ ಪ್ರೀತಿಯುಳ್ಳವನಾಗಿ ಕಾಮಪಾಶವಶನಾದನು. ॥೭॥ ಒಂದು ದಿನ ಮಾನಸಸರೋವರದಿಂದ ಅನೇಕ ಪುಷ್ಪಗಳನ್ನು ತಂದು ಕುಬೇರನಿಗೆ ಒಯ್ದು ಕೊಡುವ ಪೂರ್ವದಲ್ಲಿ ತನ್ನ ಮನೆಯಲ್ಲಿಟ್ಟುಕೊಂಡಿದ್ದನು. ಮನೆಯಲ್ಲಿ ಪತ್ನಿಯೊಂದಿಗೆ ಪ್ರೇಮಾಲಾಪಗಳನ್ನು ನಡೆಸುತ್ತ ಹೂವುಗಳನ್ನು ತೆಗೆದುಕೊಂಡು ಕುಬೇರನ ಮನೆಗೆ ಹೋಗುವದನ್ನು ಮರೆತುಬಿಟ್ಟನು. ॥೮॥ ಇತ್ತ ನಿಯಮದಂತೆ ಕುಬೇರನು ದೇವಮಂದಿರದಲ್ಲಿ ದೇವಪೂಜೆಯನ್ನು ಮಾಡುತ್ತಲಿದ್ದನು. ಹೇ ಧರ್ಮರಾಜಾ, ಮಧ್ಯಾಹ್ನಸಮಯವಾದರೂ ಹೂವುಗಳು ಇನ್ನೂ ಬಾರದಿರುವದನ್ನು ಕಂಡ ಕುಬೇರನು ಕುಪಿತನಾದನು. ॥೯॥ ಆದರೆ ಹೇಮಮಾಲಿಯಾದರೋ ತನ್ನ ಮನೆಯಲ್ಲಿ ಕಾಂತೆಯೊಂದಿಗೆ ಚಕ್ಕಂದ ನಡೆಸಿದ್ದಾನೆ. ಯಕ್ಷರಾಜನು ಪೂಜೆಗೆ ಕಾಲಾತಿಕ್ರಮವಾದುದರಿಂದ ಕೋಪಗೊಂಡು - "ಎಲೈ ದೂತರೇ, ದುರಾತ್ಮನಾದ ಆ ಹೇಮಮಾಲಿಯು ಇಷ್ಟು ಹೊತ್ತಾದರೂ ಏಕೆ ಹೂವುಗಳೊಂದಿಗೆ ಬರುತ್ತಿಲ್ಲ? ಇದರ ಕಾರಣವೇನೆಂಬುದನ್ನು ತಿಳಿದುಕೊಂಡು ಬನ್ನಿರಿ" ಎಂದು ಪುನಃ ಪುನಃ ಕೂಗ ತೊಡಗಿದನು. ಆಗ ಅಲ್ಲಿದ್ದ ಯಕ್ಷದೂತರು - "ಸ್ವಾಮಿನ್, ಸ್ತ್ರೀಲೋಲುಪನಾದ ಹೇಮಮಾಲಿಯು ಮನೆಯಲ್ಲಿ ಸ್ವಚ್ಛಂದವಾಗಿ ವಿಹರಿಸುತ್ತಿದ್ದಾನೆ" ಎಂದು ತಿಳಿಸಲು ಕೋಪಾವಿಷ್ಟನಾದ ಕುಬೇರನು ॥೧೨॥ ಆ ಕೂಡಲೇ ಹೇಮಮಾಲಿಯನ್ನು ಕರೆಕಳಿಸಿದನು. ಸ್ವಾಮಿಯಿಂದ ಕರೆ ಬಂದುದನ್ನರಿತ ಹೇಮಮಾಲಿಯು ಪೂಜಾಕಾಲ

ಆಪ್ಯಯಾಮಾಸ ತಂ ತೂರ್ಣಂ ವಟುಕಂ ಹೇಮಮಾಲಿನಮ್ ।
ಜ್ಞಾತ್ವಾ ಕಾಲಾತ್ಯಯಂ ಸೋಽಪಿ ಭಯವ್ಯಾಕುಲಲೋಚನಃ ॥೧೩॥

ಆಜಗಾಮ ನಮಸ್ಕೃತ್ಯ ಕುಬೇರಸ್ಯಾಗ್ರತಃ ಸ್ಥಿತಃ ।
ತಂ ದೃಷ್ಟ್ವಾ ಧನದಃ ಕ್ರುದ್ಧಃ ಕೋಪಸಂರಕ್ತಲೋಚನಃ ॥೧೪॥

ಪ್ರತ್ಯುವಾಚ ರುಷಾವಿಷ್ಟಃ ಕೋಪಾದ್ವಿಸ್ಫುರಿತಾಧರಃ ।

ಧನದ ಉವಾಚ

ರೇ ಪಾಪ! ದುಷ್ಟ ದುರ್ವೃತ್ತ ಕೃತವಾನ್ ದೇವಹೇಲನಮ್ ॥೧೫॥

ಅತೋ ಭವ ಶ್ವಿತ್ರಯುಕ್ತೋ ವಿಯುಕ್ತಃ ಕಾಂತಯಾ ಸದಾ ।
ಅಸ್ಮಾತ್ ಸ್ಥಾನಾದಪಧ್ವಸ್ತೋ ಗಚ್ಛ ಸ್ಥಾನಮಥಾಧಮಮ್ ॥೧೬॥

ಇತ್ಯುಕ್ತವಚನೇ ತೇನ ತಸ್ಮಾತ್ ಸ್ಥಾನಾತ್ ಪಪಾತ ಸಃ ।
ಮಹಾದುಃಖಾಭಿಭೂತಶ್ಚ ಕುಷ್ಠಪೀಡಿತವಿಗ್ರಹಃ ॥೧೭॥

ನ ವೈ ತೋಯಂ ನ ಭಕ್ಷ್ಯಂ ಚ ವನೇ ರೌದ್ರೇ ಲಭತ್ಯಸೌ ।
ನ ಸುಖಂ ದಿವಸೇ ತಸ್ಯ ನ ನಿದ್ರಾಂ ಲಭತೇ ನಿಶಿ ॥೧೮॥

ಛಾಯಾಯಾಂ ಪೀಡಿತತನುರ್ನಿದಾಘೇಽತ್ಯಂತಪೀಡಿತಃ ।
ಶಿವಪೂಜಾಪ್ರಭಾವೇಣ ಸ್ಮೃತಿಸ್ತಸ್ಯ ನ ಲುಪ್ಯತೇ ॥೧೯॥

ಮೀರಿರುವದನ್ನು ತಿಳಿದು ಭಯದಿಂದ ವ್ಯಾಕುಲನಾದನು. ॥೧೩॥ ಕೂಡಲೇ ಬಂದು ನಮಸ್ಕರಿಸಿ ಕುಬೇರನೆದುರು ಕೈ ಜೋಡಿಸಿಕೊಂಡು ನಿಂತನು. ಅವನನ್ನು ಕಂಡಾಕ್ಷಣವೇ ಆ ಮೊದಲಿಗೇ ಕ್ರುದ್ಧನಾಗಿದ್ದ ಕುಬೇರನು ಕೋಪದಿಂದ ಕಣ್ಣುಗಳನ್ನು ಕೆಂಪುಮಾಡಿಕೊಂಡು ॥೧೪॥ ಸಿಟ್ಟಿನಿಂದ ತುಟಿಗಳು ನಡುಗುತ್ತಿರಲು ಹೇಳಿದನು ಎಲೈ ಪಾಪಿಯೇ, ದುಷ್ಟನೇ, ದುರಾಚಾರಿಯೇ, ದೇವರಿಗೆ ತಿರಸ್ಕಾರವನ್ನು ಮಾಡಿರುವೆಯಾದ್ದರಿಂದ ॥೧೫॥ ಈ ಕೂಡಲೇ ನೀನು ಶ್ವೇತಕುಷ್ಠರೋಗವನ್ನು ಹೊಂದು, ಕಾಂತೆಯಿಂದ ದೂರನಾಗು. ಈ ಸ್ಥಳದಿಂದ ಭ್ರಷ್ಟನಾಗಿ ಅಧಮಲೋಕಕ್ಕೆ ಹೋಗು. ॥೧೬॥ ಈ ರೀತಿ ಸ್ವಾಮಿ ಕುಬೇರನಿಂದ ಶಪಿಸಲ್ಪಟ್ಟ ಹೇಮಮಾಲಿಯು ಆ ಕ್ಷಣವೇ ಸ್ಥಾನಭ್ರಷ್ಟನಾಗಿ ಕೆಳಗೆ ಬಿದ್ದನು. ಕುಷ್ಠರೋಗದಿಂದ ಪೀಡಿತವಾದ ದೇಹವನ್ನು ಹೊಂದಿ ಮಹಾದುಃಖದಿಂದ ಬಳಲತೊಡಗಿದನು. ॥೧೭॥ ಭಯಂಕರವಾದ ವನದಲ್ಲಿ ಬಿದ್ದ ಅವನು ಕುಡಿಯಲು ನೀರಿಲ್ಲದೇ ತಿನ್ನಲು ಭೋಗ್ಯಪದಾರ್ಥಗಳಿಲ್ಲದೇ ದುಃಖಿತನಾದನು. ಹಗಲು ಸುಖವಿಲ್ಲ ರಾತ್ರಿ ನಿದ್ರೆಯಿಲ್ಲ ॥೧೮॥ ನೆರಳಿನಲ್ಲಿ ತಂಪಿನಿಂದಲೂ, ಬಿಸಿಲಿನಲ್ಲಿ ಉಷ್ಣತೆಯಿಂದಲೂ ಅತ್ಯಂತ ಪೀಡಿತನಾದನು. ಶಿವಪೂಜಾ ಪ್ರಭಾವದಿಂದ ಆ ಯಕ್ಷನಿಗೆ ಪೂರ್ವಸ್ಮೃತಿ ಮಾತ್ರ ಕಳೆಯದೇ ಜಾಗ್ರತವಾಗಿತ್ತು ॥೧೯॥ ಮಾಡಿದ ಪಾಪಕರ್ಮದಿಂದ

ಪಾತಕೇನಾಭಿಭೂತೋಽಪಿ ಕರ್ಮ ಪೂರ್ವಮನುಸ್ಮರನ್ ।
ಭ್ರಮಮಾಣಸ್ತತೋಽಗಚ್ಛದ್ಧಿಮಾದ್ರಿಂ ಪರ್ವತೋತ್ತಮಮ್ ॥೨೦॥

ತತ್ರಾಪಶ್ಯನ್ಮುನಿವರಂ ಮಾರ್ಕಂಡೇಯಂ ತಪೋನಿಧಿಮ್ ।
ಯಸ್ಯಾಯುರ್ವಿದ್ಯತೇ ರಾಜನ್ ಬ್ರಹ್ಮಣೋ ದಿನಸಪ್ತಕಮ್ ॥೨೧॥

ಆಶ್ರಮಂ ಸ ಗತಸ್ತಸ್ಯ ಋಷೇರ್ಬ್ರಹ್ಮಸದಃ ಸಮಮ್ ।
ವವಂದೇ ಚರಣೌ ತಸ್ಯ ದೂರತಃ ಪಾಪಕರ್ಮಕೃತ್ ॥೨೨॥

ಮಾರ್ಕಂಡೇಯೋ ಮುನಿವರೋ ದೃಷ್ಟ್ವಾ ತಂ ಕುಷ್ಠಿನಂ ತದಾ ।
ಪರೋಪಕರಣಾರ್ಥಾಯ ಸಮಾಹೂಯೇದಮಬ್ರವೀತ್ ॥೨೩॥

ಮಾರ್ಕಂಡೇಯ ಉವಾಚ

ಕಸ್ಮಾತ್ ಕುಷ್ಠಾಭಿಭೂತಸ್ತ್ವಂ ಕುತೋ ನಿಂದ್ಯತರೋ ಹ್ಯಸಿ ।
ಇತ್ಯುಕ್ತಃ ಪ್ರತ್ಯುವಾಚಾಥ ಮಾರ್ಕಂಡೇಯೇನ ಧೀಮತಾ ॥೨೪॥

ಹೇಮಮಾಲ್ಯುವಾಚ

ಯಕ್ಷರಾಜಸ್ಯಾನುಚರೋ ಹೇಮಮಾಲೀತಿ ನಾಮತಃ ।
ಮಾನಸಾತ್ ಪುಷ್ಪನಿಚಯಮಾನೀಯ ಪ್ರತ್ಯಹಂ ಮುನೇ ॥೨೫॥

---

ಮಹಾಪಾಪಿಷ್ಠನಾಗಿದ್ದರೂ ಹಿಂದಿನ ಕರ್ಮವನ್ನು ಸ್ಮರಿಸುತ್ತ ಅರಣ್ಯದಲ್ಲಿ ಸಂಚರಿಸುತ್ತ ಆ ಹೇಮಮಾಲಿಯು ಪರ್ವತಗಳಲ್ಲಿ ಶ್ರೇಷ್ಠವಾದ ಹಿಮಾಲಯಕ್ಕೆ ಬಂದು ಸೇರಿದನು. ॥೨೦॥ ಆ ಪರ್ವತದ ಆಶ್ರಮವೊಂದರಲ್ಲಿದ್ದ, ತಪೋನಿಧಿಗಳಾದ, ಮಾರ್ಕಂಡೇಯ ಮುನಿವರರನ್ನು ಕಂಡನು. ಚತುರ್ಮುಖ ಬ್ರಹ್ಮನ ಆಯುಃ ಪ್ರಮಾಣದಿಂದ ಏಳು ದಿನ ಆಯುಷ್ಯವುಳ್ಳ ಮಾರ್ಕಂಡೇಯ ಋಷಿಗಳ ॥೨೧॥ ಬ್ರಹ್ಮನ ಸಭೆಯಂತಿದ್ದ ಆಶ್ರಮವನ್ನು ಪ್ರವೇಶಿಸಿದನು ಮತ್ತು ಪಾಪಕರ್ಮಗಳನ್ನು ಮಾಡಿದ್ದ ಆ ಹೇಮಮಾಲಿಯು ಋಷಿಗಳ ಚರಣಗಳಲ್ಲಿ ಭಕ್ತಿಯಿಂದ ನಮಿಸಿ ದೂರದಲ್ಲಿ ನಿಂತುಕೊಂಡನು. ॥೨೨॥ ಮಾರ್ಕಂಡೇಯ ಮುನಿಗಳು ದೂರದಲ್ಲಿ ನಿಂತಿರುವ ಆ ಕುಷ್ಠರೋಗಿಯನ್ನು ಕಂಡು ಕನಿಕರಬಟ್ಟು, ಅವನಿಗೆ ಏನಾದರೂ ಉಪಕಾರ ಮಾಡಬೇಕೆಂದು ಬಯಸಿ ತಮ್ಮ ಸನಿಹಕ್ಕೆ ಕರೆದು ಕೇಳಿದರು. ॥೨೩॥ ಅಯ್ಯಾ ನಿನಗೇಕೆ ಈ ಕುಷ್ಠರೋಗವು ಬಂದಿದೆ? ನೀನೇಕೆ ಎಲ್ಲರಿಂದ ನಿಂದಿತನಾಗಿರುವೆ? ಮಾರ್ಕಂಡೇಯರು ಈ ರೀತಿ ಪ್ರಶ್ನಿಸಲು ॥೨೪॥ ಹೇಮಮಾಲಿಯು ತನ್ನೆಲ್ಲ ವೃತ್ತಾಂತವನ್ನು ವಿವರಿಸಿದನು. - ಭೋ ಮುನಿವರರೇ, ನಾನು ಯಕ್ಷರಾಜನಾದ ಕುಬೇರನ ಸೇವಕನು. ಹೇಮಮಾಲಿ ಎಂದು ನನ್ನ ಹೆಸರು. ನಿತ್ಯವೂ ನಾನು ಮಾನಸ ಸರೋವರದಿಂದ ಪುಷ್ಪಗಳನ್ನು ತಂದು ॥೨೫॥ ನಮ್ಮ ರಾಜನು ಶಿವಪೂಜೆ ಮಾಡುವ ಸಮಯದಲ್ಲಿ ಸಮರ್ಪಿಸುವ ಕೆಲಸವನ್ನು

ಶಿವಪೂಜನವೇಲಾಯಾಂ ಕುಬೇರಾಯ ಸಮರ್ಪಯೇ ।
ಏಕಸ್ಮಿನ್ ದಿವಸೇ ಕಾಲಲೋಪಶ್ಚ ವಿಹಿತೋ ಮಯಾ ||೨೬||

ಪತ್ನೀಸೌಖ್ಯಪ್ರಮತ್ತೇನ ಕಾಮವ್ಯಾಕುಲಚೇತಸಾ ।
ತತಃ ಕ್ರುದ್ಧೇನ ಶಪ್ತೋಽಹಂ ರಾಜರಾಜೇನ ವೈ ಮುನೇ ||೨೭||

ಕುಷ್ಠಾಭಿಭೂತಃ ಸಂಜಾತೋ ವಿಯುಕ್ತಃ ಕಾಂತಯಾ ಸಹ
ಅಧುನಾ ತವ ಸಾನ್ನಿಧ್ಯಂ ಪ್ರಾಪ್ತೋಽಸ್ಮಿ ಶುಭಕರ್ಮಣಾ ||೨೮||

ಸತಾಂ ಸ್ವಭಾವತಶ್ಚಿತ್ತಂ ಪರೋಪಕರಣಕ್ಷಮಮ್ ।
ಇತಿ ಜ್ಞಾತ್ವಾ ಮುನಿಶ್ರೇಷ್ಠ ಶಾಧಿ ಮಾಂ ಚ ಕೃತೈನಸಮ್ ||೨೯||

ಮಾರ್ಕಂಡೇಯ ಉವಾಚ

ತ್ವಯಾ ಸತ್ಯಮಿಹ ಪ್ರೋಕ್ತಂ ನಾಸತ್ಯಂ ಭಾಷಿತಂ ಯತಃ ।
ಅತೋ ವ್ರತೋಪದೇಶಂ ತೇ ಕರಿಷ್ಯಾಮಿ ಶುಭಪ್ರದಮ್ ||೩೦||

ಆಷಾಢೇ ಕೃಷ್ಣಪಕ್ಷೇ ತ್ವಂ ಯೋಗಿನೀವ್ರತಮಾಚರ ।
ಅಸ್ಯ ವ್ರತಸ್ಯ ಪುಣ್ಯೇನ ಕುಷ್ಠೀ ತ್ವಂ ಮುಚ್ಯಸೇ ಧ್ರುವಮ್ ||೩೧||

ಇತಿ ವಾಕ್ಯಂ ಮುನೇಃ ಶ್ರುತ್ವಾ ದಂಡವತ್ಪತಿತೋ ಭುವಿ ।
ಉತ್ಥಾಪಿತಶ್ಚ ಮುನಿನಾ ಬಭೂವಾತೀವ ಹರ್ಷಿತಃ ||೩೨||

---

ಮಾಡುತ್ತಲಿದ್ದೆನು. ಒಂದು ದಿನ ಹೂವುಗಳನ್ನು ತಡಮಾಡಿ ತಂದುಕೊಟ್ಟೆನು. ||೨೬|| ಪತ್ನೀ ಸೌಖ್ಯದಿಂದ ಮತ್ತನಾಗಿ ಕಾಮದಿಂದ ವ್ಯಾಕುಲವಾದ ಮನಸ್ಸುಳ್ಳ ನಾನು ಈ ರೀತಿ ಹೂವುಗಳನ್ನು ತಡಮಾಡಿ ತಂದುಕೊಡಲು ಕುಪಿತನಾದ ರಾಜನು ನನ್ನನ್ನು ಹೀಗಾಗುವಂತೆ ಶಪಿಸಿದನು. ||೨೭|| ಶಾಪದಿಂದ ನಾನು ಕುಷ್ಠದಿಂದ ಪೀಡಿತನಾಗಿ, ಪ್ರಿಯೆಯಿಂದ ದೂರನಾದೆನು. ಹಿಂದಕ್ಕೆ ಮಾಡಿದ ಯಾವುದೋ ಒಂದು ಪುಣ್ಯಕರ್ಮದಿಂದ ಇಂದು ತಮ್ಮ ಸಾನ್ನಿಧ್ಯವನ್ನು ಹೊಂದಿದ್ದೇನೆ. ||೨೮|| ಸಜ್ಜನರ ಮನಸ್ಸು ಸ್ವಾಭಾವಿಕವಾಗಿಯೇ ಪರೋಪಕಾರಿಯಾಗಿರುತ್ತದೆಯಾದ್ದರಿಂದ ದಯಾಳುಗಳಾದ ತಾವು ಈ ಪಾಪಾತ್ಮನಿಗೆ ಕ್ಷೇಮವಾಗುವಂತೆ ಉಪದೇಶಿಸಬೇಕು. ||೨೯|| ಆಗ ಮಾರ್ಕಂಡೇಯ ಮುನಿಗಳು ಹೇಳಿದರು  ಅಯ್ಯಾ, ನೀನು ಅಸತ್ಯವನ್ನು ಹೇಳದೇ ಸತ್ಯವಾದುದನ್ನೇ ನುಡಿದಿರುವುದರಿಂದ ನಿನಗೆ ಒಳ್ಳೆಯದಾಗುವಂತೆ ಒಂದು ವ್ರತವನ್ನು ಉಪದೇಶಿಸುತ್ತೇನೆ. ||೩೦|| ನೀನು ಆಷಾಢಕೃಷ್ಣ ಪಕ್ಷದಲ್ಲಿ ಬರುವ ಯೋಗಿನೀ ಏಕಾದಶೀವ್ರತವನ್ನು ಆಚರಿಸಬೇಕು. ಆ ವ್ರತದ ಪ್ರಭಾವದಿಂದ ನೀನು ಕುಷ್ಠರೋಗದಿಂದ ನಿಶ್ಚಿತವಾಗಿ ಮುಕ್ತನಾಗುವಿ. ||೩೧|| ಮುನಿಗಳ ಈ ಮಾತನ್ನು ಕೇಳಿ ಹೇಮಮಾಲಿಯು ಅವರಿಗೆ ದಂಡವತ್ ನಮಿಸಿದನು. ಆಗ ಮಾರ್ಕಂಡೇಯರು ಅವನನ್ನು ಕೈಹಿಡಿದು ಮೇಲೆತ್ತಲು ಆ ಯಕ್ಷನು ಅತಿಹರ್ಷಿತನಾದನು. ||೩೨|| ಮಾರ್ಕಂಡೇಯ ಮುನಿಗಳ ಉಪದೇಶದಂತೆ ಅವನು

ಮಾರ್ಕಂಡೇಯೋಪದೇಶೇನ ಕೃತಂ ತೇನ ವ್ರತೋತ್ತಮಮ್ ।
ತದ್ವ್ರತಸ್ಯ ಪ್ರಭಾವೇಣ ದೇವರೂಪೋ ಬಭೂವ ಸಃ ॥೩೩॥

ಸಂಯೋಗಂ ಕಾಂತಯಾ ಲೇಭೇ ಬುಭುಜೇ ಸೌಖ್ಯಮುತ್ತಮಮ್ ।
ಈದೃಗ್ವಿಧಂ ನೃಪಶ್ರೇಷ್ಠ ಕಥಿತಂ ಯೋಗಿನೀವ್ರತಮ್ ॥೩೪॥

ಅಷ್ಟಾಶೀತಿಸಹಸ್ರಾಣಿ ದ್ವಿಜಾನ್ ಭೋಜಯತೇ ತು ಯಃ ।
ತತ್ಫಲಂ ಸಮವಾಪ್ನೋತಿ ಯೋಗಿನೀವ್ರತಕೃನ್ನರಃ ॥೩೫॥

ಮಹಾಪಾಪಪ್ರಶಮನೀ ಮಹಾಪುಣ್ಯಫಲಪ್ರದಾ ।
ಶುಚೌ ಕೃಷ್ಣೈಕಾದಶೀ ತೇ ಕಥಿತಾ ಯೋಗಿನೀ ನೃಪ ॥೩೬॥

॥ ಇತಿ ಶ್ರೀಬ್ರಹ್ಮವೈವರ್ತಪುರಾಣೇ ಆಷಾಢಕೃಷ್ಣೈಕಾದಶೀ
ವ್ರತಮಾಹಾತ್ಮ್ಯಂ ಸಂಪೂರ್ಣಮ್॥

ಶ್ರೇಷ್ಠವಾದ ಯೋಗಿನೀ ಏಕಾದಶೀ ವ್ರತವನ್ನು ಆಚರಿಸಿದನು ಹಾಗೂ ಆ ವ್ರತದ ಪ್ರಭಾವದಿಂದ ಅವನು ಮೊದಲಿನಂತೆ ಯಕ್ಷರೂಪವನ್ನೇ ಹೊಂದಿದನು. ॥೩೩॥ ಮತ್ತು ತನ್ನ ಪ್ರಿಯೆಯನ್ನು ಸೇರಿ ಮತ್ತೆ ಸುಖವನ್ನು ಹೊಂದಿದನು. ಹೇ ಯುಧಿಷ್ಠಿರ, ಇಂಥ ಮಹಿಮೋಪೇತವಾದ ಈ ಯೋಗಿನೀ ವ್ರತವನ್ನು ನಿನಗೆ ತಿಳಿಸಿದ್ದೇನೆ. ॥೩೪॥ ಎಂಭತ್ತೆಂಟು ಸಹಸ್ರ ಬ್ರಾಹ್ಮಣರಿಗೆ ಭೋಜನ ಮಾಡಿಸಿದರೆ ಯಾವ ಫಲವು ಬರುವದೋ ಅಷ್ಟೇ ಫಲವು ಈ ಯೋಗಿನೀ ವ್ರತಾನುಷ್ಠಾನದಿಂದ ಪ್ರಾಪ್ತವಾಗುವದು. ॥೩೫॥ ಮಹಾಪಾಪಗಳನ್ನು ಕಳೆದು ಮಹಾಪುಣ್ಯಪ್ರದವಾದ ಈ ಆಷಾಢಕೃಷ್ಣ ಪಕ್ಷದ ಏಕಾದಶೀ ವ್ರತವಾದ ಯೋಗಿನೀ ವ್ರತದ ಬಗ್ಗೆ ನಿನಗೋಸ್ಕರ ತಿಳಿಸಿದ್ದೇನೆ. ॥೩೬॥

॥ ಇಲ್ಲಿಗೆ ಶ್ರೀಬ್ರಹ್ಮವೈವರ್ತ ಪುರಾಣದಲ್ಲಿಯ ಆಷಾಢಕೃಷ್ಣಪಕ್ಷದ
ಯೋಗಿನೀ ಏಕಾದಶೀ ವ್ರತಮಹಾತ್ಮೆಯು ಸಮಾಪ್ತವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

# ಆಷಾಢಶುಕ್ಲೈಕಾದಶೀವ್ರತಕಥಾ

**ಯುಧಿಷ್ಠಿರ ಉವಾಚ**

**ಆಷಾಢಸ್ಯ ಸಿತೇ ಪಕ್ಷೇ ಕಿಂ ನಾಮ್ನ್ಯೈಕಾದಶೀ ಭವೇತ್ ।**
**ಕೋ ದೇವಃ ಕೋ ವಿಧಿಸ್ತಸ್ಯಾ ಏತದಾಖ್ಯಾಹಿ ಕೇಶವ ॥೧॥**

**ಶ್ರೀಕೃಷ್ಣ ಉವಾಚ**

**ಕಥಯಾಮಿ ಮಹೀಪಾಲ ಕಥಾಮಾಶ್ಚರ್ಯಕಾರಿಣೀಮ್ ।**
**ಕಥಯಾಮಾಸ ಯಾಂ ಬ್ರಹ್ಮಾ ನಾರದಾಯ ಮಹಾತ್ಮನೇ ॥೨॥**

**ನಾರದ ಉವಾಚ**

**ಕಥಯಸ್ವ ಪ್ರಸಾದೇನ ವಿಷ್ಣೋರಾರಾಧನಾಯ ಮೇ ।**
**ಆಷಾಢಶುಕ್ಲಪಕ್ಷೇ ತು ಕಿನ್ನಾಮ್ನ್ಯೈಕಾದಶೀ ಭವೇತ್ ॥೩॥**

**ಬ್ರಹ್ಮೋವಾಚ**

**ವೈಷ್ಣವೋಽಸಿ ಮುನಿಶ್ರೇಷ್ಠ ಸಾಧು ಪೃಷ್ಟಂ ಕಲಿಪ್ರಿಯ ।**
**ನಾತಃ ಪರತರಂ ಲೋಕೇ ಪವಿತ್ರಂ ಹರಿವಾಸರಾತ್ ॥೪॥**

**ಕರ್ತವ್ಯಂ ತು ಪ್ರಯತ್ನೇನ ಸರ್ವಪಾಪಾಪನುತ್ತಯೇ ।**
**ತಸ್ಮಾತ್ತೇಽಹಂ ಪ್ರವಕ್ಷ್ಯಾಮಿ ಶುಕ್ಲೇ ಏಕಾದಶೀವ್ರತಮ್ ॥೫॥**

---

ಹೇ ಶ್ರೀಹರೇ ಕೇಶವಾ, ಆಷಾಢಶುಕ್ಲಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು? ಆ ದಿನದ ದೇವತೆ ಯಾರು? ಈ ಏಕಾದಶೀ ವ್ರತದ ವಿಧಾನವೇನು? ಇದೆಲ್ಲವನ್ನು ತಿಳಿಸಿ ಅನುಗ್ರಹಿಸು ಎಂದು ಯುಧಿಷ್ಠಿರನು ಪ್ರಾರ್ಥಿಸಲು ॥೧॥ ಶ್ರೀಕೃಷ್ಣನು ಹೇಳುತ್ತಾನೆ - ಹೇ ಯುಧಿಷ್ಠಿರ ರಾಜಾ, ಈ ವಿಷಯದಲ್ಲಿ ಚತುರ್ಮುಖ ಬ್ರಹ್ಮನು ಮಹಾತ್ಮನಾದ ನಾರದನಿಗೆ ಹೇಳಿದ ಆಶ್ಚರ್ಯಕರವಾದ ಕಥೆಯನ್ನೇ ಈಗ ನಿನಗೆ ತಿಳಿಸುವೆನು ಕೇಳು. ॥೨॥ ಒಮ್ಮೆ ನಾರದರು ಬ್ರಹ್ಮನನ್ನು ಕುರಿತು ಪ್ರಶ್ನಿಸುತ್ತಾರೆ - "ಪೂಜ್ಯರೇ, ವಿಷ್ಣುವಿನ ಆರಾಧನೆ ಮಾಡಲು ಅನುಕೂಲವಾಗುವದಕ್ಕಾಗಿ, ಆಷಾಢಶುಕ್ಲಪಕ್ಷದಲ್ಲಿ ಬರುವ ಏಕಾದಶಿಯ ಹೆಸರು, ಅದರ ಮಹಾತ್ಮೆ ಇದೆಲ್ಲವನ್ನು ತಿಳಿಸಿ ಅನುಗ್ರಹಿಸಬೇಕು" ಎಂದು ಪ್ರಾರ್ಥಿಸಲು ಬ್ರಹ್ಮದೇವರು ಹೇಳುತ್ತಾರೆ - ಹೇ ಕಲಿಪ್ರಿಯ, ಮುನಿಶ್ರೇಷ್ಠ ನಾರದಾ, ಪರಮ ವೈಷ್ಣವನಾದ ನೀನು ಶ್ರೇಷ್ಠವಾದ ಪ್ರಶ್ನೆಯನ್ನು ಮಾಡಿರುವಿ. ಈ ಲೋಕದಲ್ಲಿ ಏಕಾದಶೀ ವ್ರತಕ್ಕಿಂತ ಶ್ರೇಷ್ಠವಾದ ಬೇರೊಂದು ಪವಿತ್ರವಾದ ವ್ರತವಿಲ್ಲ. ॥೪॥ ಸರ್ವಪಾಪಗಳ ನಿವೃತ್ತಿಗಾಗಿ ಪ್ರಯತ್ನಪೂರ್ವಕ ಏಕಾದಶೀ ವ್ರತವನ್ನು ಆಚರಿಸಬೇಕು. ಆದ್ದರಿಂದ ಹೇ ನಾರದಾ, ಈಗ ನಿನಗೆ ಆಷಾಢ ಶುಕ್ಲ ಏಕಾದಶೀ ವ್ರತದ ಬಗ್ಗೆ ತಿಳಿಸುವೆನು ಕೇಳು. ॥೫॥ ಸಕಲಪಾಪನಾಶಕವೂ, ಸರ್ವಕಾಮಪ್ರದವೂ

ಏಕಾದಶ್ಯಾಂ ವ್ರತಂ ಪುಣ್ಯಂ ಪಾಪಘ್ನಂ ಸರ್ವಕಾಮದಮ್ ।
ನ ಕೃತಂ ಯೈರ್ನರೈರ್ಲೋಕೇ ತೇ ನರಾ ನಿರಯೈಷಿಣಃ ॥೬॥

ಪದ್ಮಾ ನಾಮೇತಿ ವಿಖ್ಯಾತಾ ಶುಚೌ ಹ್ಯೇಕಾದಶೀ ಸಿತಾ ।
ಹೃಷೀಕೇಶಪ್ರೀತಯೇ ತು ಕರ್ತವ್ಯಂ ವ್ರತಮುತ್ತಮಮ್ ॥೭॥

ಕಥಯಾಮಿ ತವಾಗ್ರೇಽಹಂ ಕಥಾಂ ಪೌರಾಣಿಕೀಂ ಶುಭಾಮ್ ।
ಯಸ್ಯಾಃ ಶ್ರವಣ ಮಾತ್ರೇಣ ಮಹಾಪಾಪಂ ಪ್ರಣಶ್ಯತಿ ॥೮॥

ಮಾಂಧಾತಾ ನಾಮ ರಾಜರ್ಷಿರ್ವೈವಸ್ವದ್ವಂಶಸಂಭವಃ ।
ಬಭೂವ ಚಕ್ರವರ್ತೀ ಸ ಸತ್ಯಸಂಧಃ ಪ್ರತಾಪವಾನ್ ॥೯॥

ಧರ್ಮತಃ ಪಾಲಯಾಮಾಸ ಪ್ರಜಾಃ ಪುತ್ರಾನಿವೌರಸಾನ್ ।
ನ ತಸ್ಯ ರಾಜ್ಯೇ ದುರ್ಭಿಕ್ಷಂ ನಾಧಯೋ ವ್ಯಾಧಯಸ್ತಥಾ ॥೧೦॥

ನಿರಾತಂಕಾಃ ಪ್ರಜಾಸ್ತಸ್ಯ ಧನಧಾನ್ಯಸಮನ್ವಿತಾಃ ।
ನಾನ್ಯಾಯೋಪಾರ್ಜಿತಂ ದ್ರವ್ಯಂ ಕೋಶೇ ತಸ್ಯ ಮಹೀಪತೇಃ ॥೧೧॥

ತಸ್ಯೈವಂ ಕುರ್ವತೋ ರಾಜ್ಯೇ ಬಹುವರ್ಷಗಣೋ ಗತಃ ।
ಅಥೋ ಕದಾಚಿತ್ ಸಂಪ್ರಾಪ್ತೇ ವಿಪಾಕೇ ಪಾಪಕರ್ಮಣಃ ॥೧೨॥

---

ಆದ ಏಕಾದಶೀ ಎಂಬ ಪುಣ್ಯವ್ರತವನ್ನು ಲೋಕದಲ್ಲಿ ಯಾರು ಆಚರಿಸುವದಿಲ್ಲವೋ ಅವರು ನರಕವನ್ನು ಸೇರುವರು. ॥೬॥ ಆಷಾಢಶುಕ್ಲಪಕ್ಷದಲ್ಲಿ ಬರುವ ಏಕಾದಶಿಯು ಪದ್ಮಾ ಎಂಬ ಹೆಸರಿನಿಂದ ಖ್ಯಾತವಾಗಿದೆ. ಶ್ರೀಹರಿ ಹೃಷೀಕೇಶನ ಪ್ರೀತ್ಯರ್ಥವಾಗಿ ಶ್ರೇಷ್ಠವಾದ ಈ ಪದ್ಮಾವ್ರತವನ್ನು ಆಚರಿಸಬೇಕು. ॥೭॥ ಈಗ ನಿನ್ನೆದುರಿನಲ್ಲಿ ಶುಭಪ್ರದವಾದ, ಪೌರಾಣಿಕ ಕಥೆಯೊಂದನ್ನು ತಿಳಿಸುವೆನು. ಈ ಪೌರಾಣಿಕ ಕಥೆಯ ಶ್ರವಣಮಾತ್ರದಿಂದಲೇ ಶ್ರೋತೃವಿನ ಮಹಾಪಾಪವು ನಾಶವಾಗಿ ಹೋಗುವದು. ॥೮॥ ಒಂದಕ್ಕೆ ವೈವಸ್ವತವಂಶದಲ್ಲಿ ಹುಟ್ಟಿದ ಮಾಂಧಾತಾ ಎಂಬ ಹೆಸರಿನ ರಾಜರ್ಷಿಯು ಚಕ್ರವರ್ತಿಯಾಗಿದ್ದನು. ಸತ್ಯಸಂಧನೂ, ಅತ್ಯಂತಪ್ರತಾಪಿಯೂ ಆದ ಆ ಚಕ್ರವರ್ತಿಯು ॥೯॥ ಪ್ರಜೆಗಳನ್ನು ತನ್ನ ಒಡಹುಟ್ಟಿದ ಮಕ್ಕಳಂತೆ ಧರ್ಮದಿಂದ ಪರಿಪಾಲಿಸುತ್ತಿದ್ದನು. ಅವನ ರಾಜ್ಯದಲ್ಲಿ ದುರ್ಭಿಕ್ಷೆಯಾಗಲೀ, ಆಧಿವ್ಯಾಧಿಗಳಾಗಲೀ ಒಂದೂ ಇಲ್ಲದೇ ॥೧೦॥ ನಿರಾತಂಕರಾದ ಪ್ರಜೆಗಳೆಲ್ಲ ಧನ, ಧಾನ್ಯಗಳಿಂದ ಸಂಪನ್ನರಾಗಿದ್ದರು. ರಾಜರ್ಷಿಯ ಕೋಶದಲ್ಲಿ ಅನ್ಯಾಯದಿಂದ ಸಂಪಾದಿಸಿದ ದ್ರವ್ಯವಿರದೇ ನ್ಯಾಯದಿಂದ ಸಂಪಾದಿಸಿದ ದ್ರವ್ಯದಿಂದ ಕೋಶವು ಸಮೃದ್ಧವಾಗಿತ್ತು. ॥೧೧॥ ಈ ಪ್ರಕಾರ ಮಾಂಧಾತಾ ರಾಜನು ನ್ಯಾಯದಿಂದ ರಾಜ್ಯ ಪರಿಪಾಲನೆ ಮಾಡುತ್ತಿರಲು ಅನೇಕ ವರ್ಷಗಳು ಗತಿಸಿದವು. ಆದರೆ ಹಿಂದೆ ಯಾವುದೋ ಜನ್ಮಾಂತರದಲ್ಲಿ ಘಟಿಸಿದ ಪಾಪಕರ್ಮದ ಫಲವಾಗಿ ॥೧೨॥ ಅವನ ರಾಜ್ಯದಲ್ಲಿ ಒಮ್ಮೆ ಸತತವಾಗಿ ಮೂರು ವರ್ಷಗಳವರೆಗೆ ಮಳೆ

ವರ್ಷತ್ರಯಂ ತದ್ವಿಷಯೇ ನ ವವರ್ಷ ಬಲಾಹಕಃ ।
ತೇನೋದ್ವಿಗ್ನಾಃ ಪ್ರಜಾಸ್ತತ್ರ ಬಭೂವುಶ್ಚ ಕ್ಷುಧಾರ್ದಿತಾಃ ॥೧೩॥

ಸ್ವಾಹಾಸ್ವಧಾವಷಟ್ಕಾರವೇದಾಧ್ಯಯನವರ್ಜಿತಾಃ ।
ಬಭೂವುರ್ವಿಷಯಾಸ್ತಸ್ಯ ಸಸ್ಯಾಭಾವೇನ ಪೀಡಿತಾಃ ॥೧೪॥

ಅಥ ಪ್ರಜಾಃ ಸಮಾಗತ್ಯ ರಾಜಾನಮಿದಮಬ್ರುವನ್ ।
ಶ್ರೂಯತಾಂ ವಚನಂ ರಾಜನ್ ಪ್ರಜಾನಾಂ ಹಿತಕಾರಕಮ್ ॥೧೫॥

ಆಪೋ ನಾರಾ ಇತಿ ಪ್ರೋಕ್ತಾಃ ಪುರಾಣೇಷು ಮನೀಷಿಭಿಃ ।
ಅಯನಂ ತಾ ಭಗವತಸ್ತೇನ ನಾರಾಯಣಃ ಸ್ಮೃತಃ ॥೧೬॥

ಪರ್ಜನ್ಯರೂಪೀ ಭಗವಾನ್ ವಿಷ್ಣುಃ ಸರ್ವಗತಃ ಸದಾ ।
ಸ ಏವ ಕುರುತೇ ವೃಷ್ಟಿಂ ವೃಷ್ಟೇರನ್ನಂ ತತಃ ಪ್ರಜಾಃ ॥೧೭॥

ತದಭಾವೇನ ನೃಪತೇ ಕ್ಷಯಂ ಗಚ್ಛಂತಿ ವೈ ಪ್ರಜಾಃ ।
ತಥಾ ಕುರು ನೃಪಶ್ರೇಷ್ಠ ಯೋಗಕ್ಷೇಮೋ ಯಥಾ ಭವೇತ್ ॥೧೮॥

ರಾಜೋವಾಚ

ಸತ್ಯಮುಕ್ತಂ ಭವದ್ಭಿಶ್ಚ ನ ಮಿಥ್ಯಾಽಭಿಹಿತಂ ವಚಃ ।
ಅನ್ನಂ ಬ್ರಹ್ಮಮಯಂ ಪ್ರೋಕ್ತಮನ್ನೇ ಸರ್ವಂ ಪ್ರತಿಷ್ಠಿತಮ್ ॥೧೯॥

ಬೀಳಲಿಲ್ಲ. ಇದರಿಂದ ಬರಗಾಲ ಬಿದ್ದು ಪ್ರಜೆಗಳಲ್ಲಿ ಹಾಹಾಕಾರ ಉಂಟಾಯಿತು. ಎಲ್ಲರೂ ಹಸಿವೆಯಿಂದ ಪೀಡಿತರಾಗಿ ಉದ್ವಿಗ್ನರಾದರು. ॥೧೩॥ ರಾಜ್ಯದಲ್ಲಿ ಮಳೆ ಇಲ್ಲದೇ ಧಾನ್ಯ ವನಸ್ಪತಿಗಳು ಬೆಳೆಯಲಿಲ್ಲ. ಇದರಿಂದ ಸ್ವಾಹಾ, ಸ್ವಧಾ, ವಷಟ್ಕಾರ, ವೇದಾಧ್ಯಯನಗಳೆಲ್ಲ ಲೋಪವಾದವು. ॥೧೪॥ ಬರಗಾಲದಿಂದ ಜರ್ಜರಿತರಾದ ಪ್ರಜೆಗಳು ರಾಜನಿದ್ದಲ್ಲಿ ಬಂದು ನಿವೇದಿಸಿದರು - ಭೋ ರಾಜನ್, ಎಲ್ಲ ಪ್ರಜೆಗಳಿಗೆ ಕ್ಷೇಮವಾಗುವದಕ್ಕಾಗಿ ಕೆಲ ಮಾತುಗಳನ್ನು ಹೇಳುತ್ತಿದ್ದೇವೆ ಕೇಳಬೇಕು. ಏನೆಂದರೆ ॥೧೫॥ ನೀರಿಗೆ 'ನಾರಾ' ಎಂದು ಜ್ಞಾನಿಗಳಿಂದ ಪುರಾಣದಲ್ಲಿ ಹೇಳಲ್ಪಟ್ಟಿದೆ. ಇಂಥ ನೀರೇ ಭಗವಂತನಿಗೆ ಆಶ್ರಯವಾಗಿರುವದರಿಂದ ಭಗವಂತನು 'ನಾರಾಯಣ' ಎಂದು ಕರೆಸಿಕೊಳ್ಳಲ್ಪಡುತ್ತಾನೆ. ॥೧೬॥ ಪರ್ಜನ್ಯರೂಪಿಯಾದ ಭಗವಾನ್ ವಿಷ್ಣುವು ಸದಾಕಾಲ ಸರ್ವತ್ರ ವ್ಯಾಪಿಸಿರುವನು. ಅವನೇ ಮಳೆಯನ್ನು, ಮಳೆಯಿಂದ ಧಾನ್ಯಗಳನ್ನು ಮತ್ತು ಧಾನ್ಯಗಳಿಂದ ಪ್ರಜೆಗಳನ್ನು ಸೃಷ್ಟಿಸುವನು. ॥೧೭॥ ಹೇ ನೃಪತೇ, ಜಲಾಭಾವದಿಂದ ಅಂದರೆ ಮಳೆ ಇಲ್ಲದೇ, ಪ್ರಜೆಗಳು ನಾಶವಾಗಿ ಹೋಗುವರು. ಆದ್ದರಿಂದ ನೃಪಶ್ರೇಷ್ಠನೇ, ಪ್ರಜೆಗಳಿಗೆ ಕ್ಷೇಮವಾಗುವಂತೆ ಏನಾದರೂ ಉಪಾಯವನ್ನು ಮಾಡುವವನಾಗು. ॥೧೮॥ ಆಗ ಮಾಂಧಾತಾರಾಜನು ಹೇಳಿದನು - ಭೋ, ನೀವು ಸತ್ಯವಾದುದನ್ನೇ ಹೇಳಿರುವಿರಿ. ಅಸತ್ಯವನ್ನು ನುಡಿದಿರುವದಿಲ್ಲ. ಅನ್ನವು ಬ್ರಹ್ಮಸ್ವರೂಪವೆಂದು ವೇದಗಳಲ್ಲಿ ಹೇಳಲ್ಪಟ್ಟಿದೆ ಮತ್ತು ಅನ್ನದಲ್ಲೇ ಎಲ್ಲವೂ ಪ್ರತಿಷ್ಠಿತವಾಗಿದೆ. ॥೧೯॥ 'ಅನ್ನದಿಂದ ಪ್ರಾಣಿಗಳು ಜೀವಿಸುತ್ತವೆ.

ಅನ್ನಾದ್ಭವಂತಿ ಭೂತಾನಿ ಜಗದನ್ನೇನ ವರ್ತತೇ ।
ಇತ್ಯೇವಂ ಶ್ರೂಯತೇ ಲೋಕೇ ಪುರಾಣೇ ಬಹುವಿಸ್ತರೇ ॥೨೦॥

ನೃಪಾಣಾಮಪಚಾರೇಣ ಪ್ರಜಾನಾಂ ಪೀಡನಂ ಭವೇತ್ ।
ನಾಪಂ ಪಶ್ಯಾಮ್ಯಾತ್ಮಕೃತಂ ದೋಷಂ ಬುದ್ಧ್ಯಾ ವಿಚಾರಯನ್ ॥೨೧॥

ತಥಾಪಿ ಪ್ರಯತಿಷ್ಯಾಮಿ ಪ್ರಜಾನಾಂ ಹಿತಕಾಮ್ಯಯಾ ।
ಇತಿ ಕೃತ್ವಾ ಮತಿಂ ರಾಜಾ ಪರಿಮೇಯಬಲಾನ್ವಿತಃ ॥೨೨॥

ನಮಸ್ಕೃತ್ಯ ವಿಧಾತಾರಂ ಜಗಾಮ ಗಹನಂ ವನಮ್ ।
ಚಚಾರ ಮುನಿಮುಖ್ಯಾನಾಮಾಶ್ರಮಾಂಸ್ತಪಸ್ಯೈಧಿತಾನ್ ॥೨೩॥

ದದರ್ಶಾಥ ಬ್ರಹ್ಮಸುತಮೃಷಿಮಂಗಿರಸಂ ನೃಪಃ ।
ತೇಜಸಾ ದ್ಯೋತಿತದಿಶಂ ದ್ವಿತೀಯಮಿವ ಪದ್ಮಜಮ್ ॥೨೪॥

ತಂ ದೃಷ್ಟ್ವಾ ಹರ್ಷಿತೋ ರಾಜಾ ಹ್ಯವತೀರ್ಯ್ಯಚ ವಾಹನಾತ್ ।
ನಮಶ್ಚಕ್ರೇಽಸ್ಯ ಚರಣೌ ಕೃತಾಂಜಲಿಪುಟೋ ವಶೀ ॥೨೫॥

ಮುನಿಸ್ತಮಭಿನಂದ್ಯಾಥ ಸ್ವಸ್ತಿವಾಚನಪೂರ್ವಕಮ್ ।
ಪಪ್ರಚ್ಛ ಕುಶಲಂ ರಾಜ್ಯೇ ಸಪ್ತಸ್ವಂಗೇಷು ಭೂಪತೇಃ ॥೨೬॥

ಈ ಜಗತ್ತೆಲ್ಲ ಅನ್ನದಿಂದ ಜೀವಿಸಿರುತ್ತದೆ' ಎಂದು ಮುಂತಾಗಿ ಲೋಕದಲ್ಲಿ ಮತ್ತು ಪುರಾಣಗಳಲ್ಲಿ ಬಹುವಿಸ್ತಾರವಾಗಿ ನಿರೂಪಿಸಲ್ಪಟ್ಟಿರುತ್ತದೆ. ॥೨೦॥ ರಾಜರು ಮಾಡಿದ ಅಪಚಾರದಿಂದ ಪ್ರಜೆಗಳಿಗೆ ತೊಂದರೆಯುಂಟಾಗುತ್ತದೆ. ಎಷ್ಟು ವಿಚಾರಿಸಿದರೂ ನಾನು ಮಾಡಿದ ದೋಷವಾವುದೆಂಬುದನ್ನು ತಿಳಿಯದಾಗಿರುವೆನು. ॥೨೧॥ ಹಾಗಿದ್ದರೂ ಪ್ರಜೆಗಳಿಗೆ ಕ್ಷೇಮವಾಗಬೇಕೆಂಬ ಇಚ್ಛೆಯಿಂದ ನಾನು ಶಕ್ತಿಮೀರಿ ಪ್ರಯತ್ನಿಸುವೆನು. ಹೀಗೆಂದು ನಿಶ್ಚಯಿಸಿದ ರಾಜನು ತನ್ನೊಂದಿಗೆ ಪರಿಮಿತ ಸೇನೆಯನ್ನು ತೆಗೆದುಕೊಂಡು ॥೨೨॥ ಸೃಷ್ಟಿಕರ್ತನಾದ ಬ್ರಹ್ಮನಿಗೆ ನಮಸ್ಕರಿಸಿ ಗಹನವಾದ ವನಕ್ಕೆ ಹೊರಟನು. ಅಲ್ಲಿ ಶ್ರೇಷ್ಠರಾದ ಮುನಿಗಳ, ತಪಸ್ಸುಗಳಿಂದ ಸಮೃದ್ಧವಾದ ಆಶ್ರಮಗಳನ್ನು ಹುಡುಕುತ್ತಾ ನಡೆದನು. ॥೨೩॥ ಗಹನವಾದ ಅರಣ್ಯದಲ್ಲಿ ಒಂದೆಡೆ ರಾಜನು ಬ್ರಹ್ಮದೇವರ ಮಕ್ಕಳಾದ ಅಂಗೀರಸ ಋಷಿಯನ್ನು ಕಂಡನು. ತಮ್ಮ ತೇಜಸ್ಸಿನಿಂದ ದಶದಿಕ್ಕುಗಳನ್ನು (ಸುತ್ತಲೂ) ಪ್ರಕಾಶಿಸುತ್ತಿರುವ, ಇನ್ನೊಬ್ಬ ಚತುರ್ಮುಖಬ್ರಹ್ಮನೋ ಎಂಬಂತಿರುವ ॥೨೪॥ ಋಷಿಗಳನ್ನು ಕಂಡು ಅತ್ಯಂತ ಹರ್ಷಿತನಾದ ರಾಜನು ತನ್ನ ವಾಹನದಿಂದ ಕೆಳಗಿಳಿದು ಋಷಿಯ ಪಾದಕಮಲಗಳಲ್ಲಿ ಭಕ್ತಿಯಿಂದ ನಮಿಸಿ ಕೈಜೋಡಿಸಿಕೊಂಡು ನಿಂತುಕೊಂಡನು. ॥೨೫॥ ಕ್ಷೇಮ, ಆಶೀರ್ವಾದ ಪೂರ್ವಕ ರಾಜನನ್ನು ಅಭಿನಂದಿಸಿ ಅಂಗಿರಸರು ರಾಜನ ಸಪ್ತಾಂಗಗಳಿಂದ ಯುಕ್ತವಾದ ರಾಜ್ಯದ ಕ್ಷೇಮಸಮಾಚಾರದ ಬಗ್ಗೆ ಕುಶಲಪ್ರಶ್ನೆಯನ್ನು ಮಾಡಿದರು. ॥೨೬॥ ತನ್ನ ಕುಶಲವಿಚಾರವನ್ನು ನಿವೇದಿಸಿ ರಾಜನು

ನಿವೇದಯಿತ್ವಾ ಕುಶಲಂ ಪಪ್ರಚ್ಛಾನಾಮಯಂ ನೃಪಃ ।
ತತಶ್ಚ ಮುನಿನಾ ರಾಜಾ ಪೃಷ್ಟಾಗಮನಕಾರಣಃ ॥೨೭॥

ಅಬ್ರವೀನ್ನೃನಿಶಾರ್ದೂಲಂ ಸ್ವಸ್ಯಾಗಮನ ಕಾರಣಮ್ ।

ರಾಜೋವಾಚ

ಭಗವನ್ ಧರ್ಮವಿಧಿನಾ ಮಮ ಪಾಲಯತೋ ಮಹೀಮ್ ॥೨೮॥

ಅನಾವೃಷ್ಟಿಃ ಸಂಪ್ರವೃತ್ತಾ ನಾಹಂ ವೇದ್ಮ್ಯತ್ರ ಕಾರಣಮ್ ।
ಸಂಶಯಚ್ಛೇದನಾರ್ಥಾಯ ಹ್ಯಾಗತೋಽಹಂ ತವಾಂತಿಕಮ್ ॥೨೯॥

ಯೋಗಕ್ಷೇಮವಿಧಾನೇನ ಪ್ರಜಾನಾಂ ನಿರ್ವೃತಿಂ ಕುರು ।

ಋಷಿರುವಾಚ

ಏತತ್ಕೃತಯುಗಂ ರಾಜನ್ ಯುಗಾನಾಮುತ್ತಮಂ ಯುಗಮ್ ॥೩೦॥

ಅತ್ರ ಬ್ರಹ್ಮೋತ್ತರಾ ಲೋಕಾ ಧರ್ಮಶ್ಚಾತ್ರ ಚತುಷ್ಪದಃ ।
ಅಸ್ಮಿನ್ ಯುಗೇ ತಪೋಯುಕ್ತಾ ಬ್ರಾಹ್ಮಣಾ ನೇತರೇ ಜನಾಃ ॥೩೧॥

ವಿಷಯೇ ತವ ರಾಜೇಂದ್ರ ವೃಷಲೋ ಯತ್ತಪಸ್ಯತಿ ।
ಅಕಾರ್ಯಕರಣಾತ್ತಸ್ಯ ನ ವರ್ಷತಿ ಬಲಾಹಕಃ ॥೩೨॥

---

ಮುನಿಯ ಕ್ಷೇಮದ ಬಗ್ಗೆ ವಿಚಾರಿಸಲಾಗಿ, ಅಂಗೀರಸರು ರಾಜನು ತಮ್ಮಲ್ಲಿ ಬಂದಿರುವ ಕಾರಣದ ಬಗ್ಗೆ ತಿಳಿಯಬಯಸಿದರು. ॥೨೭॥ ಆಗ ರಾಜನು ಆಶ್ರಮಕ್ಕೆ ಬಂದಿರುವ ಕಾರಣವನ್ನು ಸ್ಪಷ್ಟಪಡಿಸಿದನು - ಪೂಜ್ಯರೇ, ಧರ್ಮಮಾರ್ಗದಿಂದ ರಾಜ್ಯಪಾಲನೆ ಮಾಡುತ್ತಿದ್ದರೂ ಈಗ ನನ್ನ ರಾಜ್ಯದಲ್ಲಿ ॥೨೮॥ ಅನಾವೃಷ್ಟಿಯಿಂದ ಬರಗಾಲವು ಬಂದಿದೆ. ಇದರ ಕಾರಣವನ್ನು ತಿಳಿಯದಾಗಿದ್ದೇನೆ. ನನ್ನ ಸಂಶಯವನ್ನು ನಿವಾರಣೆ ಮಾಡಿಕೊಳ್ಳುವದಕ್ಕಾಗಿ ನಾನು ನಿಮ್ಮಲ್ಲಿಗೆ ಬಂದಿದ್ದೇನೆ. ॥೨೯॥ ದಯಮಾಡಿ ಪ್ರಜೆಗಳಿಗೆ ಕ್ಷೇಮವಾಗುವದಕ್ಕಾಗಿ ಏನಾದರೊಂದು ಉಪಾಯವನ್ನು ತಿಳಿಸಿ ಅನುಗ್ರಹಿಸಿರಿ. ಆಗ ಋಷಿಗಳು ಹೇಳಿದರು - ಹೇ ರಾಜನ್, ಇದು ಯುಗಗಳಲ್ಲಿ ಅತಿ ಶ್ರೇಷ್ಠವಾದ ಕೃತಯುಗವಾಗಿದೆ. ॥೩೦॥ ಈ ಯುಗದಲ್ಲಿ ಎಲ್ಲ ಜನರು ಬ್ರಹ್ಮನನ್ನು ಕುರಿತು ಉಪಾಸನೆ ಮಾಡುವರು, ಧರ್ಮವು ನಾಲ್ಕೂ ಚರಣಗಳಿಂದ ಯುಕ್ತವಾಗಿರುವದು. ಈ ಯುಗದಲ್ಲಿ ಬ್ರಾಹ್ಮಣರು ಮಾತ್ರ ತಪೋನಿರತರಾಗಿರುವರು. ಉಳಿದವರಾರೂ ತಪೋನಿರತರಾಗಿರುವದಿಲ್ಲ. ॥೩೧॥ ಹೇ ರಾಜೇಂದ್ರಾ, ನಿನ್ನ ರಾಜ್ಯದಲ್ಲಿ ವೃಷಲನೆಂಬ ಒಬ್ಬ ಶೂದ್ರನು ತಪಸ್ಸನ್ನಾಚರಿಸುತ್ತಲಿರುವನು. ತನಗೆ ಅನುಚಿತವಾದ ಕರ್ಮವನ್ನು ಅವನು ಮಾಡುತ್ತಲಿರುವದರಿಂದ ನಿನ್ನ ರಾಜ್ಯದಲ್ಲಿ ಮೇಘಗಳು ಮಳೆ ಸುರಿಸುತ್ತಿಲ್ಲ. ॥೩೨॥ ನೀನು ಅವನನ್ನು ಸಂಹರಿಸಿದಿಯಾದರೆ ಅನಾವೃಷ್ಟಿ ದುರ್ಭಿಕ್ಷಗಳ

ಕುರು ತಸ್ಯ ವಧೇ ಯತ್ನಂ ಯೇನ ದೋಷಃ ಪ್ರಶಾಮ್ಯತಿ ।

ರಾಜೋವಾಚ

ನಾಪಮೇನಂ ವಧಿಷ್ಯಾಮಿ ತಪಸ್ಯಂತಮನಾಗಸಮ್ ॥೩೩॥
ಧರ್ಮೋಪದೇಶಂ ಕಥಯ ಉಪಸರ್ಗವಿನಾಶನಮ್ ।

ಋಷಿರುವಾಚ

ಯದ್ಯೇವಂ ತರ್ಹಿ ನೃಪತೇ ಕುರುಷ್ವೈಕಾದಶೀವ್ರತಮ್ ॥೩೪॥

ಶುಚಿಮಾಸೇ ಶುಕ್ಲಪಕ್ಷೇ ಪದ್ಮಾನಾಮೇತಿ ವಿಶ್ರುತಾ ।
ತಸ್ಯಾ ವ್ರತಪ್ರಭಾವೇಣ ಸುವೃಷ್ಟಿರ್ಭವಿತಾ ಧ್ರುವಮ್ ॥೩೫॥

ಸರ್ವಸಿದ್ಧಿಪ್ರದಾ ಹ್ಯೇಷಾ ಸರ್ವೋಪದ್ರವನಾಶಿನೀ ।
ಅಸ್ಯಾ ವ್ರತಂ ಕುರು ನೃಪ ಸಪ್ರಜಃ ಸಪರಿಚ್ಛದಃ ॥೩೬॥

ಇತಿ ವಾಕ್ಯಂ ಮುನೇಃ ಶ್ರುತ್ವಾ ರಾಜಾ ಸ್ವಗೃಹಮಾಗತಃ ।
ಆಷಾಢಮಾಸೇ ಸಂಪ್ರಾಪ್ತೇ ಪದ್ಮಾವ್ರತಮಥಾಕರೋತ್ ॥೩೭॥

ಪ್ರಜಾಭಿಃ ಸಹ ಸರ್ವಾಭಿಶ್ಚಾತುರ್ವರ್ಣ್ಯಸಮನ್ವಿತಃ ।
ಏವಂ ಕೃತೇ ವ್ರತೇ ರಾಜನ್ ಪ್ರವವರ್ಷ ಬಲಾಹಕಃ ॥೩೮॥

---

ದೋಷವು ಪರಿಹಾರವಾಗುವದು. ಇದನ್ನು ಕೇಳಿ ರಾಜನು - ಭೋ, ನಿರಪರಾಧಿಯಾದ ಮತ್ತು ತಪಸ್ಸನ್ನಾಚರಿಸುತ್ತಿರುವ ಅವನನ್ನು ನಾನು ಕೊಲ್ಲಲಾರೆನು. ॥೩೩॥ ಆದ್ದರಿಂದ ಈಗ ಬಂದಿರುವ ಆಪತ್ತಿಯು ನಾಶವಾಗುವಂತೆ ಏನಾದರೊಂದು ಧರ್ಮೋಪದೇಶವನ್ನು ಮಾಡಿರಿ ಎಂದು ಪುನಃ ಪ್ರಾರ್ಥಿಸಲು ಅಂಗೀರಸ ಮುನಿಗಳು ಹೇಳಿದರು - ಹಾಗಾದರೆ, ಹೇ ರಾಜಾ, ನಾನು ಹೇಳುವಂತೆ ಏಕಾದಶೀವ್ರತವನ್ನು ಆಚರಿಸು. ॥೩೪॥ ಆಷಾಢಮಾಸದ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಯು 'ಪದ್ಮಾ' ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಈ ಏಕಾದಶೀವ್ರತವನ್ನು ಆಚರಿಸಿದರೆ ಆ ವ್ರತದ ಪ್ರಭಾವದಿಂದ ನಿನ್ನ ರಾಜ್ಯದಲ್ಲಿ ನಿಶ್ಚಿತವಾಗಿ ಸುವೃಷ್ಟಿಯಾಗುವದು. ॥೩೫॥ ಪದ್ಮಾ ಏಕಾದಶಿಯು ಸಕಲಸಿದ್ಧಿಗಳನ್ನು ಕೊಡುವಂಥದೂ, ಸರ್ವಉಪದ್ರವಗಳನ್ನು ನಾಶಮಾಡುವಂಥದೂ ಆಗಿದೆ. ಹೇ ರಾಜಾ, ಇಂಥಾ ಏಕಾದಶೀವ್ರತವನ್ನು ನೀನು, ನಿನ್ನೆಲ್ಲ ಪರಿವಾರ ಹಾಗೂ ಪ್ರಜೆಗಳಿಂದ ಕೂಡಿಕೊಂಡು ಆಚರಿಸು. ॥೩೬॥ ಅಂಗೀರಸರ ಈ ಪ್ರಕಾರದ ಉಪದೇಶ ವಚನಗಳನ್ನು ಕೇಳಿ ರಾಜನು ತನ್ನ ರಾಜ್ಯಕ್ಕೆ ಹಿಂತಿರುಗಿದನು. ಆಷಾಢಮಾಸವು ಬರಲು ಪದ್ಮಾವ್ರತವನ್ನು ॥೩೭॥ ಚಾತುರ್ವರ್ಣ್ಯದ ತನ್ನೆಲ್ಲ ಪ್ರಜೆಗಳಿಂದ ಕೂಡಿಕೊಂಡು ಆಚರಿಸಿದನು. ಈ ವ್ರತದ ಪ್ರಭಾವದಿಂದ ರಾಜ್ಯದಲ್ಲಿ ಸುವೃಷ್ಟಿಯಾಯಿತು. ॥೩೮॥ ಭೂಮಿಯು ನೀರಿನಿಂದ ಹಸಿಯಾಯಿತು, ಸಸ್ಯಗಳಿಂದ ಸಮೃದ್ಧವಾಯಿತು. ಹೃಷೀಕೇಶನ

ಜಲೇನ ಪ್ಲಾವಿತಾ ಭೂಮಿರಭವಚ್ಚಸ್ಯಶಾಲಿನೀ |
ಹೃಷೀಕೇಶಪ್ರಸಾದೇನ ಜನಾಃ ಸೌಖ್ಯಂ ಪ್ರಪೇದಿರೇ ||೩೯||

ಏತಸ್ಮಾತ್ಕಾರಣಾದೇವ ಕರ್ತವ್ಯಂ ವ್ರತಮುತ್ತಮಮ್ |
ಭುಕ್ತಿಮುಕ್ತಿಪ್ರದಂ ಚೈವ ಲೋಕಾನಾಂ ಸುಖದಾಯಕಮ್ ||೪೦||

ಪಠನಾಚ್ಛ್ರವಣಾದಸ್ಯಾಃ ಸರ್ವಪಾಪೈಃ ಪ್ರಮುಚ್ಯತೇ |
ಇಯಮೇಕಾದಶೀ ರಾಜನ್ ಶಯನೀತ್ಯಭಿಧೀಯತೇ ||೪೧||

ವಿಷ್ಣೋಃ ಪ್ರಸಾದಸಿದ್ಧ್ಯರ್ಥಮಸ್ಯಾಂ ಚ ಶಯನವ್ರತಮ್ |
ಕರ್ತವ್ಯಂ ರಾಜಶಾರ್ದೂಲ ಜನೈರ್ಮೋಕ್ಷೇಚ್ಛುಭಿಃ ಸದಾ ||೪೨||

ಚಾತುರ್ಮಾಸ್ಯವ್ರತಾರಂಭೋಽಪ್ಯಸ್ಯಾಮೇವ ವಿಧೀಯತೇ |

ಯುಧಿಷ್ಠಿರ ಉವಾಚ

ಕಥಂ ಕೃಷ್ಣ ಪ್ರಕರ್ತವ್ಯಂ ಶ್ರೀವಿಷ್ಣೋಃ ಶಯನವ್ರತಮ್ ||೪೩||

ತದ್ಬ್ರೂಹಿ ಕೃಪಯಾ ದೇವ ಚಾತುರ್ಮಾಸ್ಯವ್ರತಾನಿ ಚ |

ಶ್ರೀಕೃಷ್ಣ ಉವಾಚ

ಶೃಣು ಪಾರ್ಥ ಪ್ರವಕ್ಷ್ಯಾಮಿ ಗೋವಿಂದಶಯನವ್ರತಮ್ ||೪೪||

---

ಅನುಗ್ರಹದಿಂದ ಪ್ರಜೆಗಳು ಮೊದಲಿನಂತೆ ಸುಖಿಗಳಾದರು. ||೩೯|| ಈ ಕಾರಣದಿಂದಲೇ ಶ್ರೇಷ್ಠವಾದ ಈ ಪದ್ಮಾವ್ರತವನ್ನು ಆಚರಿಸಬೇಕು. ಈ ವ್ರತವು ಭುಕ್ತಿ ಮುಕ್ತಿ ಪ್ರದವೂ, ಜನರಿಗೆ ಸುಖದಾಯಕವೂ ಆಗಿದೆ. ||೪೦|| ಈ ವ್ರತದ ಮಹಾತ್ಮೆಯು ಪಠನ ಹಾಗೂ ಶ್ರವಣಗಳಿಂದ ಸರ್ವಪಾಪಗಳೂ ನಾಶವಾಗುತ್ತವೆ. ಹೇ ಯುಧಿಷ್ಠಿರ ಮಹಾರಾಜಾ, ಈ ಏಕಾದಶಿಯನ್ನು 'ಶಯಿನೀ' ಎಂದೂ ಕರೆಯುವರು. ||೪೧|| ಹೇ ರಾಜಶಾರ್ದೂಲ, ಮೋಕ್ಷವನ್ನು ಇಚ್ಛಿಸುವ ಜನರು ವಿಷ್ಣುವಿನ ಅನುಗ್ರಹ ಸಂಪಾದನೆಗಾಗಿ ಈ ಏಕಾದಶಿಯ ದಿನ ತಪ್ಪದೇ ಶಯನ ವ್ರತವನ್ನು ಆಚರಿಸಬೇಕು. ||೪೨|| ಚಾತುರ್ಮಾಸ್ಯವ್ರತವೂ ಈ ದಿನದಿಂದಲೇ ಪ್ರಾರಂಭವಾಗುತ್ತದೆ. ಇದೆಲ್ಲವನ್ನು ಕೇಳಿದ ಯುಧಿಷ್ಠಿರನು - "ಹೇ ಶ್ರೀಕೃಷ್ಣ, ಶ್ರೀವಿಷ್ಣುವಿನ ಶಯನವ್ರತವನ್ನು ಹೇಗೆ ಆಚರಿಸಬೇಕು? ||೪೩|| ದಯಮಾಡಿ ಇದನ್ನೂ ಹಾಗೂ ಚಾತುರ್ಮಾಸ್ಯದಲ್ಲಿ ಮಾಡಬೇಕಾದ ಇನ್ನಿತರ ವ್ರತಗಳನ್ನೂ ತಿಳಿಸಬೇಕು" ಎಂದು ಪ್ರಾರ್ಥಿಸಲು ಶ್ರೀಕೃಷ್ಣನು ಹೇಳುತ್ತಾನೆ - "ಹೇ ಯುಧಿಷ್ಠಿರಾ ಕೇಳು. ಶ್ರೀವಿಷ್ಣುಶಯನ ವ್ರತವನ್ನು ಹಾಗೂ ||೪೪|| ಚಾತುರ್ಮಾಸದಲಿ ಹೇಳಿದ ಇನ್ನಿತರ ವ್ರತಗಳನ್ನು ಕುರಿತು

ಚಾತುರ್ಮಾಸ್ಯೇ ಚ ಯಾನ್ಯುಕ್ತಾನ್ಯಾಸಂಸ್ತಾನಿ ವ್ರತಾನಿ ಚ ।

ಶ್ರೀಕೃಷ್ಣ ಉವಾಚ

ಕರ್ಕರಾಶಿಗತೇ ಸೂರ್ಯೇ ಶುಚೌ ಶುಕ್ಲೇ ತು ಪಕ್ಷಕೇ ||೪೫||

ಏಕಾದಶ್ಯಾಂ ಜಗನ್ನಾಥಂ ಸ್ವಾಪಯೇತ್ ಮಧುಸೂದನಮ್ ।
ತುಲಾರಾಶಿಸ್ಥಿತೇ ತಸ್ಮಿನ್ ಪುನರುತ್ಥಾಪಯೇದ್ಧರಿಮ್ ||೪೬||

ಅಧಿಮಾಸೇಽಪಿ ಪತಿತೇ ಏಷ ಏವ ವಿಧಿಃ ಕ್ರಮಾತ್ ।
ನಾನ್ಯದಾ ಸ್ವಾಪಯೇದ್ದೇವಂ ತಥೈವೋತ್ಥಾಪಯೇದ್ಧರಿಮ್ ||೪೭||

ಆಷಾಢಸ್ಯ ಸಿತೇ ಪಕ್ಷೇ ಏಕಾದಶ್ಯಾಮುಪೋಷಿತಃ ।
ಚಾತುರ್ಮಾಸ್ಯವ್ರತಾನಾಂ ತು ಕುರ್ವೀತ ಪರಿಕಲ್ಪನಮ್ ||೪೮||

ಏವಂ ಚ ಪ್ರತಿಮಾಂ ವಿಷ್ಣೋಃ ಸ್ಥಾಪಯಿತ್ವಾ ಯುಧಿಷ್ಠಿರ ।
ಸ್ನಾಪಯೇತ್ ಪ್ರತಿಮಾಂ ವಿಷ್ಣೋಃ ಶಂಖಚಕ್ರಗದಾಧರಮ್ ||೪೯||

ಪೀತಾಂಬರಧರಾಂ ಸೌಮ್ಯಾಂ ಪರ್ಯಂಕೇ ವೈ ಸಿತೇ ಶುಭೇ ।
ಸಿತವಸ್ತ್ರಸಮಾಚ್ಛನ್ನೇ ಸೋಪಧಾನೇ ಯುಧಿಷ್ಠಿರ ||೫೦||

ಇತಿಹಾಸಪುರಾಣಜ್ಞೋ ಬ್ರಾಹ್ಮಣೋ ವೇದಪಾರಗಃ ।
ಸ್ನಾಪಯಿತ್ವಾ ದಧಿಕ್ಷೀರಘೃತಕ್ಷೌದ್ರಸಿತಾದಿಭಿಃ ||೫೧||

---

ತಿಳಿಸುವೆನು. ಸೂರ್ಯನು ಕರ್ಕರಾಶಿಯಲ್ಲಿ ಪ್ರವೇಶ ಮಾಡುವ ಆಷಾಢಶುಕ್ಲಪಕ್ಷದಲ್ಲಿ ||೪೫|| ಏಕಾದಶಿಯ ದಿನ ಶ್ರೀಹರಿ ಜಗನ್ನಾಥ ಮಧುಸೂದನನನ್ನು ಮಲಗಿಸಬೇಕು. ಸೂರ್ಯನು ತುಲಾರಾಶಿಗೆ ಬಂದಾಗ ಶ್ರೀಹರಿಯನ್ನು ಎಚ್ಚರಿಸಬೇಕು. (ಪ್ರಬೋಧೋತ್ಸವ) ||೪೬|| ಈ ಮಾಸದಲ್ಲಿ ಅಧಿಕಮಾಸವು ಬಂದಾಗಲೂ ಇದೇ ಪ್ರಕಾರದ ವಿಧಾನವನ್ನು ಅನುಸರಿಸಬೇಕು. ಇದಕ್ಕೆ ಹೊರತಾಗಿ ಇತರ ಯಾವ ದಿನದಲ್ಲೂ ಶ್ರೀಹರಿಯ ಶಯನೋತ್ಸವ ಮತ್ತು ಪ್ರಬೋಧೋತ್ಸವಗಳನ್ನು ಆಚರಿಸಕೂಡದು. ||೪೭|| ಆಷಾಢ ಶುದ್ಧ ಏಕಾದಶಿಯ ದಿನ ಉಪವಾಸದಿಂದ ಇದ್ದು ಚಾತುರ್ಮಾಸ್ಯ ವ್ರತಗಳ ಆಚರಣೆಗಾಗಿ ಸಂಕಲ್ಪವನ್ನು ಮಾಡಬೇಕು. ||೪೮|| ಹೇ ಯುಧಿಷ್ಠಿರಾ, ವಿಷ್ಣುವಿನ ಪ್ರತಿಮೆಯನ್ನು ಯಥಾವಿಧಿ ಸ್ಥಾಪಿಸಿ ಅಭಿಷೇಕ ಮಾಡಬೇಕು. ಶಂಖಚಕ್ರಗದಾಧಾರಿಯಾದ ||೪೯|| ಪೀತಾಂಬರಧಾರಿಯಾದ, ಸೌಮ್ಯವಾದ, ಶ್ರೀವಿಷ್ಣುಪ್ರತಿಮೆಯನ್ನು ಶುದ್ಧವಾದ, ಶುಭ್ರವಸ್ತ್ರಗಳಿಂದ ಆಚ್ಛಾದಿಸಲ್ಪಟ್ಟ, ತಲೆದಿಂಬಿನಿಂದ ಯುಕ್ತವಾದ ಮಂಚದ ಮೇಲೆ ಸ್ಥಾಪಿಸಿ ||೫೦|| ಇತಿಹಾಸ ಪುರಾಣಗಳನ್ನು ಬಲ್ಲ ವೇದಪಂಡಿತನಾದ ಬ್ರಾಹ್ಮಣನು, ಹಾಲು, ಮೊಸರು, ಘೃತ, ಮಧು, ಶರ್ಕರಾ ಮೊದಲಾದ ಪಂಚಾಮೃತಗಳಿಂದ ಸ್ನಾನಮಾಡಿಸಬೇಕು. ||೫೧|| ಶುದ್ಧೋದಕ ಅಭಿಷೇಕ ಸ್ನಾನವಾದ ನಂತರ

ಸಮಾಲೇಪ್ಯ ಶುಭೈರ್ಗಂಧೈರ್ಧೂಪೈರ್ದೀಪೈಶ್ಚ ಭೂರಿಶಃ ।
ಪೂಜಯೇತ್ ಕುಸುಮೈಃ ಶಸ್ತೈರ್ಮಂತ್ರೇಣಾನೇನ ಪಾಂಡವ ॥೫೨॥

ಶಾಯಿತಸ್ತ್ವಂ ಹೃಷೀಕೇಶ ಪೂಜಯಿತ್ವಾ ಶ್ರಿಯಾ ಸಹ ।
ಪ್ರಸಾದಂ ಕುರು ದೇವೇಶ ಲಕ್ಷ್ಮ್ಯಾ ಸಹ ಜನಾರ್ದನ ॥೫೩॥

ಸುಪ್ತೇ ತ್ವಯಿ ಜಗನ್ನಾಥೇ ಜಗತ್ಸುಪ್ತಂ ಚರಾಚರಮ್ ।
ವಿಬುದ್ಧೇ ತ್ವಯಿ ಬುದ್ಧ್ಯೇತ ಜಗತ್ಸರ್ವಂ ಚರಾಚರಮ್ ॥೫೪॥

ಏವಂ ತಾಂ ಪ್ರತಿಮಾಂ ವಿಷ್ಣೋಃ ಸ್ಥಾಪಯಿತ್ವಾ ಯುಧಿಷ್ಠಿರ ।
ತಸ್ಯಾ ಏವಾಗ್ರತಃ ಸ್ಥಿತ್ವಾ ಗೃಹ್ಣೀಯಾನ್ನಿಯಮಾನ್ನರಃ ॥೫೫॥

ಚತುರೋ ವಾರ್ಷಿಕಾನ್ ಮಾಸಾನ್ ದೇವಸ್ಯೋತ್ಥಾಪನಾವಧಿ ।
ಪ್ರಾತಃಸಂಧ್ಯಾದಿಕಂ ಸರ್ವಂ ನಿತ್ಯಕರ್ಮ ಸಮಾಪ್ಯ ಚ ॥೫೬॥

ಗೃಹೀಷ್ಯೇ ನಿಯಮಾನ್ ಶುದ್ಧಾನ್ ನಿರ್ವಿಘ್ನಾನ್ ಕುರು ಮೇ ಪ್ರಭೋ ।
ಇತಿಸಂಪ್ರಾರ್ಥ್ಯ ದೇವೇಶಂ ಪ್ರಹ್ವಃ ಸಂಶುದ್ಧಮಾನಸಃ ॥೫೭॥

---

ಉತ್ತಮ ಗಂಧ ಹಾಗೂ ಸುಗಂಧ ದ್ರವ್ಯಗಳನ್ನು ಲೇಪಿಸಿ, ಧೂಪಾರತಿ ದೀಪಾರತಿಗಳನ್ನು ಮಾಡಿ ನಂತರ ಯೋಗ್ಯವಾದ ಸುವಾಸಿತ ಪುಷ್ಪಗಳನ್ನು ಸಮರ್ಪಿಸಿ ಪೂಜೆ ಮಾಡಬೇಕು. ಹೇ ಯುಧಿಷ್ಠಿರ, ಪೂಜಾಸಮಯದಲ್ಲಿ ಹೇಳಬೇಕಾದ ಮಂತ್ರವೆಂದರೆ ॥೫೨॥ "ಹೇ ಹೃಷೀಕೇಶನೇ, ಸಿರಿಯಿಂದ ಸಹಿತನಾದ ನೀನು ನನ್ನಿಂದ ಪೂಜಿಸಲ್ಪಟ್ಟು ಮಲಗಿಸಲ್ಪಟ್ಟಿರುವೆ. ಹೇ ದೇವೇಶಾ, ಜನಾರ್ದನಾ, ಲಕ್ಷ್ಮೀದೇವಿಯಿಂದ ಸಹಿತನಾಗಿರುವ ನೀನು ನನ್ನಲ್ಲಿ ಪೂರ್ಣಾನುಗ್ರಹ ಮಾಡುವವನಾಗು ॥೫೩॥ ಹೇ ಜಗನ್ನಾಥ, ನೀನು ಮಲಗಿದರೆ ಚರಾಚರ ಪ್ರಪಂಚವೆಲ್ಲ ಮಲಗುವದು. ಹಾಗೂ ನೀನು ಎಚ್ಚೆತ್ತರೆ ಈ ಪ್ರಪಂಚವೆಲ್ಲ ಎಚ್ಚರವಾಗುವದು". ॥೫೪॥ ಎಂದು ಪ್ರಾರ್ಥಿಸಿ ಶ್ರೀವಿಷ್ಣುವಿನ ಪ್ರತಿಮೆಯನ್ನು ಅಲ್ಲಿಯೇ ಪ್ರತಿಷ್ಠಾಪಿಸಬೇಕು ಮತ್ತು ಅದೇ ಪ್ರತಿಮೆಯ ಸಮ್ಮುಖದಲ್ಲಿ ನಿಂತು ಚಾತುರ್ಮಾಸ್ಯದ ನಿಯಮಗಳನ್ನು ಸಂಕಲ್ಪಪೂರ್ವಕ ಸ್ವೀಕರಿಸಬೇಕು. ॥೫೫॥ "ಇಂದಿನಿಂದ ಶ್ರೀಹರಿಯ ಪ್ರಬೋಧೋತ್ಸವದ ವರೆಗಿನ ನಾಲ್ಕು ತಿಂಗಳು ಪ್ರತಿದಿನ ಪ್ರಾತಃಸಂಧ್ಯಾ ಮೊದಲಾದ ನಿತ್ಯ ಕರ್ಮಗಳನ್ನು ಮಾಡಿ ॥೫೬॥ ಅನಂತರ ಚಾತುರ್ಮಾಸ್ಯದ ಶುದ್ಧವಾದ ನಿಯಮಗಳನ್ನು ಆಚರಿಸುವೆನು. ಹೇ ಪ್ರಭೋ, ಇವೆಲ್ಲವೂ ನಿರ್ವಿಘ್ನವಾಗಿ ನಡೆಯುವಂತೆ ಅನುಗ್ರಹಿಸು" ಎಂದು ಅತಿ ವಿನಮ್ರನಾಗಿ (ಪ್ರಹ್ವಃ) ಶುದ್ಧ ಮನಸ್ಸಿನಿಂದ ವಿಷ್ಣುವನ್ನು ಪುನಃ ಪ್ರಾರ್ಥಿಸಬೇಕು. ॥೫೭॥ ಸ್ತ್ರೀಯೇ ಆಗಲೀ ಪುರುಷನೇ ಆಗಲೀ ನನ್ನ ಭಕ್ತರು ಯಾರಿದ್ದರೂ ಪುಣ್ಯ ಸಂಪಾದನೆಗಾಗಿ ಅಥವಾ ಧರ್ಮನಾಮಕ ಪರಮಾತ್ಮನ ಪ್ರೀತ್ಯರ್ಥವಾಗಿ ವ್ರತಧಾರಣಮಾಡಿದವನಾಗಿ ದಂತಧಾವನ ಮಾಡಿಕೊಂಡು

ಸ್ತ್ರೀ ವಾ ನರೋ ವಾ ಮದ್ಭಕ್ತೋ ಧರ್ಮಾರ್ಥಂ ಚ ಧೃತವ್ರತ: |
ಗೃಹ್ಣೀಯಾನ್ನಿಯಮಾನೇತಾನ್ ದಂತಧಾವನಪೂರ್ವಕಮ್ ||೫೮||

ವ್ರತಪ್ರಾರಂಭಕಾಲಾಸ್ತು ಪ್ರೋಕ್ತಾ: ಪಂಚೈವ ವಿಷ್ಣುನಾ |
ಉಪಕ್ರಮಂ ಚತುರ್ಮಾಸವ್ರತಾನಾಂ ಚ ನರ: ಶುಚೌ ||೫೯||

ಏಕಾದಶೀ ದ್ವಾದಶೀ ಚ ಪೂರ್ಣಿಮಾ ಚ ತಥಾಷ್ಟಮೀ |
ಕರ್ಕಟಾಖ್ಯಾ ಚ ಸಂಕ್ರಾಂತಿಸ್ತಾಸು ಕುರ್ಯಾದ್ಯಥಾವಿಧಿ ||೬೦||

ಚತುರ್ಧಾ ಗೃಹ್ಯ ವೈ ಚೀರ್ಣಂ ಚಾತುರ್ಮಾಸ್ಯವ್ರತಂ ನರ: |
ಕಾರ್ತಿಕೇ ಶುಕ್ಲಪಕ್ಷೇ ತು ದ್ವಾದಶ್ಯಾಂ ತತ್ಸಮಾಪಯೇತ್ ||೬೧||

ತೇಷಾಂ ಫಲಾನಿ ವಕ್ಷ್ಯಾಮಿ ಕರ್ತೃಣಾಂ ತೇ ಪೃಥಕ್ ಪೃಥಕ್ |
ಆಷಾಢೇ ಶುಕ್ಲಪಕ್ಷೇ ತು ಏಕಾದಶ್ಯಾಮುಪೋಷಿತ: ||೬೨||

ಚಾತುರ್ಮಾಸ್ಯವ್ರತಂ ಕುರ್ಯಾದ್ಯತ್ಕಿಂಚಿದವನೀಪತೇ |
ನಾನ್ಯಥಾ ಚಾಬ್ದಿಕಂ ಪಾಪಂ ವಿನಿಹಂತಿ ಪ್ರಯತ್ನತ: ||೬೩||

ನ ಶೈಶವಂ ಚ ಮೌಢ್ಯಂ ಚ ಶುಕ್ರಗುರ್ವೋರ್ನ ಬಾಧಕಮ್ |
ಖಂಡತ್ವಂ ಚಿಂತಯೇದಾದೌ ಚಾತುರ್ಮಾಸ್ಯವಿಧೌ ನರ: ||೬೪||

ಶುದ್ಧನಾಗಿ ಚಾತುರ್ಮಾಸ್ಯದ ನಿಯಮಗಳನ್ನು ಹಿಡಿಯಬೇಕು. ||೫೮|| ಈ ವ್ರತವನ್ನು ಪ್ರಾರಂಭಿಸಲು ವಿಷ್ಣುವಿನಿಂದ ಐದೇ ಮುಹೂರ್ತಗಳು ಹೇಳಲ್ಪಟ್ಟಿವೆ. ಆಷಾಢ ಮಾಸದಲ್ಲಿ ನರನು ಚಾತುರ್ಮಾಸ್ಯ ವ್ರತಗಳನ್ನು ಏಕಾದಶೀ, ದ್ವಾದಶೀ, ಪೂರ್ಣಿಮಾ, ಅಷ್ಟಮೀ ಮತ್ತು ಕರ್ಕಸಂಕ್ರಾಂತಿ ಈ ಐದು ದಿನಗಳಲ್ಲಿ ಯಾವುದಾದರೂ ಒಂದು ದಿನ ಯಥಾವಿಧಿ ಗ್ರಹಣಮಾಡಿ ಪ್ರಾರಂಭಿಸಬೇಕು. ||೬೦|| ಮನುಷ್ಯನು ನಾಲ್ಕು ಪ್ರಕಾರಗಳಿಂದ ಗ್ರಹಣ ಮಾಡಿ ಆಚರಿಸಿದ ಚಾತುರ್ಮಾಸ್ಯ ವ್ರತವನ್ನು ಕಾರ್ತಿಕಶುಕ್ಲಪಕ್ಷದ ದ್ವಾದಶಿಯ ದಿನ ಸಮಾಪ್ತಿಗೊಳಿಸಬೇಕು. ||೬೧|| ಹೇ ಯುಧಿಷ್ಠಿರ, ಈಗ ವ್ರತಾಚರಣೆ ಮಾಡುವವರಿಗೆ ಬೇರೆ ಬೇರೆಯಾದ ಫಲಗಳೇನಿರುವವೋ ಅವುಗಳನ್ನು ನಿನಗೆ ತಿಳಿಸುವೆನು. ಆಷಾಢ ಮಾಸದ ಶುದ್ಧ ಏಕಾದಶಿಯ ದಿನ ಉಪವಾಸ ಮಾಡಿ ||೬೨|| ಕಿಂಚಿತ್ ಚಾತುರ್ಮಾಸ್ಯದ ವ್ರತವನ್ನೂ ಆಚರಿಸಬೇಕು. ಹೀಗೆ ಮಾಡದಿದ್ದರೆ ಕೇವಲ ಆಷಾಢ ಶುದ್ಧ ಏಕಾದಶಿಯಂದು ಮಾಡಿದ ಉಪವಾಸ ವ್ರತವು ಇಡೀ ವರ್ಷದಲ್ಲಿ ಘಟಿಸಿದ ಪಾಪಗಳನ್ನು ಕಳೆಯುವದಿಲ್ಲ. ||೬೩|| ಶುಕ್ರ ಮತ್ತು ಗುರು ಈ ಗ್ರಹಗಳ ಅದೇ ಉದಯವಾಗಿರೋಣ ಅಥವಾ ಅಸ್ತವಾಗಿರೋಣವು ಈ ಚಾತುರ್ಮಾಸ್ಯ ವ್ರತದ ಸ್ವೀಕಾರಕ್ಕೆ ಮತ್ತು ಅನುಷ್ಠಾನಕ್ಕೆ ಯಾವರೀತಿಯಿಂದಲೂ ಬಾಧಕವಾಗುವದಿಲ್ಲ. ಚಾತುರ್ಮಾಸ್ಯ ವಿಧಿಯಲ್ಲಿ ಮೊದಲು ಈ ಗ್ರಹಗಳ ಖಂಡತ್ವದ (ಸ್ವಲ್ಪಾದರೂ ಇರುವ ಬಗ್ಗೆ) ಬಗ್ಗೆ ಆಲೋಚಿಸಬೇಕು. ||೬೪|| ಪವಿತ್ರನಾಗಿರಲೀ ಅಥವಾ ಅಪವಿತ್ರನಾಗಿರಲೀ,

**ಖಂಡಾಂಗವ್ಯಾಪಿಮಾರ್ತಂಡೋ ಯದ್ಯಖಂಡಾ ಭವೇತ್ತಿಥಿಃ ।**
**ಅಶುಚಿರ್ವಾಶುಚಿರ್ವಾಪಿ ಯದಿ ಸ್ತ್ರೀ ಯದಿ ವಾ ಪುಮಾನ್ ॥೬೫॥**

**ವ್ರತಮೇಕಂ ನರಃ ಕೃತ್ವಾ ಮುಚ್ಯತೇ ಸರ್ವಪಾತಕೈಃ ।**
**ಅಸಂಕ್ರಾಂತಂ ತಥಾ ಮಾಸಂ ದೈವೇ ಪಿತ್ರ್ಯೇ ಚ ಕರ್ಮಣಿ ॥೬೬॥**

**ಮಲರೂಪಮಶೌಚಂ ಚ ವರ್ಜಯೇನ್ಮತಿಮಾನ್ನರಃ ।**
**ಪ್ರತಿವರ್ಷಂ ತು ಯಃ ಕುರ್ಯಾತ್ ವ್ರತಂ ವೈ ಸಂಸ್ಮರನ್ ಹರಿಮ್ ॥೬೭॥**

**ದೇಹಾಂತೇಽತಿಪ್ರದೀಪ್ತೇನ ವಿಮಾನೇನಾರ್ಕತೇಜಸಾ ।**
**ಮೋದತೇ ವಿಷ್ಣುಲೋಕೇಽಸೌ ಯಾವದಾಭೂತಸಂಪ್ಲವಮ್ ॥೬೮॥**

**ದೇವತಾಯತನೇ ನಿತ್ಯಂ ಮಾರ್ಜನಂ ಜಲಸೇಚನಮ್ ।**
**ಪ್ರಲೇಪನಂ ಗೋಮಯೇನ ರಂಗವಲ್ಲ್ಯಾದಿಕಂ ತಥಾ ॥೬೯॥**

**ಯಃ ಕರೋತಿ ನರಶ್ರೇಷ್ಠ ಚಾತುರ್ಮಾಸ್ಯಮತಂದ್ರಿತಃ ।**
**ಸಮಾಪ್ತೌ ಚ ಯಥಾಶಕ್ತ್ಯಾ ಕೃತ್ವಾ ಬ್ರಾಹ್ಮಣಭೋಜನಮ್ ॥೭೦॥**

**ಸಪ್ತಜನ್ಮಸು ವಿಪ್ರೇಂದ್ರ ಸತ್ಯಧರ್ಮಪರೋ ಭವೇತ್ ।**
**ದಧ್ನಾ ಕ್ಷೀರೇಣ ಚಾಜ್ಯೇನ ಕ್ಷೌದ್ರೇಣ ಸಿತಯಾ ತಥಾ ॥೭೧॥**

ಸ್ತ್ರೀಯಾಗಲೀ ಅಥವಾ ಪುರುಷನಾಗಲೀ ಯಾರೇ ಇದ್ದರೂ ಅವರು, ಸೂರ್ಯನು ಖಂಡವ್ಯಾಪಿಯಾಗಿದ್ದು ತಿಥಿಯು ಅಖಂಡವಾಗಿದ್ದರೆ ಚಾತುರ್ಮಾಸ್ಯ ವ್ರತವನ್ನು ಪ್ರಾರಂಭಿಸಬೇಕು. ॥೬೫॥ ಇದೊಂದು ವ್ರತವನ್ನು ಮಾಡುವವನು ಸರ್ವಪಾಪಗಳಿಂದ ಮುಕ್ತನಾಗುತ್ತಾನೆ. ಸಂಕ್ರಾಂತಿ ಇಲ್ಲದ ಮಾಸವು ಮಲರೂಪವಾಗಿದ್ದು ಅಪವಿತ್ರವಾಗಿರುವುದರಿಂದ ॥೬೬॥ ಬುದ್ಧಿವಂತನಾದವನು ದೇವಕಾರ್ಯ ಹಾಗೂ ಪಿತೃಕಾರ್ಯಗಳಲ್ಲಿ ಇಂಥ ಮಾಸವನ್ನು ವರ್ಜಿಸಬೇಕು. ಶ್ರೀಹರಿಯನ್ನು ಭಕ್ತಿಯಿಂದ ಸ್ಮರಿಸುತ್ತ ಪ್ರತಿವರ್ಷ ಈ ವ್ರತವನ್ನು ಆಚರಿಸುವವನು ॥೬೭॥ ಮರಣಾನಂತರ ಸೂರ್ಯಕಾಂತಿಯಿಂದ ಜಾಜ್ವಲ್ಯಮಾನವಾದ ವಿಮಾನದಲ್ಲಿ ಕುಳಿತು ವಿಷ್ಣುಲೋಕಕ್ಕೆ ಹೋಗಿ ಅಲ್ಲಿ ಮಹಾಪ್ರಳಯದ ವರೆಗೆ ಮುದದಿಂದ ಇರುವನು. ॥೬೮॥ ಹೇ ಯುಧಿಷ್ಠಿರ, ಚಾತುರ್ಮಾಸ್ಯದಲ್ಲಿ ಪ್ರತಿದಿನ ಆಲಸ್ಯವಿಲ್ಲದೇ ಯಾವನು ದೇವಮಂದಿರದಲ್ಲಿ ಕಸಗುಡಿಸಿ, ನೀರಿನಿಂದ ತೊಳೆದು, ಗೋಮಯದಿಂದ ಸಾರಿಸಿ, ರಂಗವಲ್ಲ್ಯಾದಿಗಳಿಂದ ಅಲಂಕರಿಸುವನೋ ಮತ್ತು ವ್ರತಸಮಾಪ್ತಿಯ ನಂತರ ತನ್ನ ಶಕ್ತ್ಯನುಸಾರ ಬ್ರಾಹ್ಮಣ ಭೋಜನ ಮಾಡಿಸುವನೋ ॥೬೯॥ ॥೭೦॥ ಅವನು ಮುಂದಿನ ಏಳು ಜನ್ಮಗಳಲ್ಲಿ ಸತ್ಯಧರ್ಮಪರಾಯಣನಾಗುವನು ಮತ್ತು ವಿಷ್ಣು ಭಕ್ತನಾಗುವನು. ಚಾತುರ್ಮಾಸ್ಯದಲ್ಲಿ ಹಾಲು, ಮೊಸರು, ತುಪ್ಪ, ಜೇನುತುಪ್ಪ ಮತ್ತು ಸಕ್ಕರೆ ಇವುಗಳಿಂದ ॥೭೧॥ ಶ್ರೀಹರಿಗೆ ಪಂಚಾಮೃತಾಭಿಷೇಕ ಮಾಡುವವನು ಮರಣಾನಂತರ

ಸ್ನಾಪಯೇದ್ವಿಧಿನಾ ದೇವಂ ಚಾತುರ್ಮಾಸ್ಯೇ ಜನಾಧಿಪ ।
ಸ ಯಾತಿ ವಿಷ್ಣುಸಾರೂಪ್ಯಂ ಸುಖಮಕ್ಷಯಮಶ್ನುತೇ ॥೭೨॥

ನೃಪೇಣ ಭೂಮಿರ್ದಾತವ್ಯಾ ಯಥಾಶಕ್ತ್ಯಾ ಚ ಕಾಂಚನಮ್ ।
ವಿಪ್ರಾಯ ದೇವಮುದ್ದಿಶ್ಯ ಸಫಲಂ ಚ ಸದಕ್ಷಿಣಮ್ ॥೭೩॥

ಅಕ್ಷಯಾಲ್ಲಭತೇ ಭೋಗಾನ್ ಸ್ವರ್ಗ ಇಂದ್ರ ಇವಾಪರಃ ।
ಲೋಕಂ ಚ ಸಮವಾಪ್ನೋತಿ ವಿಷ್ಣೋರತ್ರ ನ ಸಂಶಯಃ ॥೭೪॥

ದೇವಾಯ ಹೇಮಪದ್ಮಂ ತು ದದ್ಯಾನ್ನೈವೇದ್ಯಸಂಯುತಂ ।
ಗಂಧಪುಷ್ಪಾಕ್ಷತಾದ್ಯೈರ್ಯೋ ದೇವಬ್ರಾಹ್ಮಣಯೋರಪಿ ॥೭೫॥

ಪೂಜಾಂ ಯಃ ಕುರುತೇ ನಿತ್ಯಂ ಚಾತುರ್ಮಾಸ್ಯೇ ವ್ರತೀ ನರಃ ।
ಅಕ್ಷಯಂ ಸುಖಮಾಪ್ನೋತಿ ಪುರಂದರಪುರಂ ವ್ರಜೇತ್ ॥೭೬॥

ಯಸ್ತು ವೈ ಚತುರೋ ಮಾಸಾಂಸ್ತುಲಸ್ಯಾ ಹರಿಮರ್ಚಯೇತ್ ।
ತುಲಸೀಂ ಕಾಂಚನೀಂ ಕೃತ್ವಾ ಬ್ರಾಹ್ಮಣಾಯ ನಿವೇದಯೇತ್ ॥೭೭॥

ಕಾಂಚನೇನ ವಿಮಾನೇನ ವೈಷ್ಣವೀಂ ಲಭತೇ ಗತಿಮ್ ।
ದೇವಾಯ ಗುಗ್ಗುಲಂ ಯೋ ವೈ ದೀಪಂ ಚಾರ್ಪಯತೇ ನರಃ ॥೭೮॥

ವಿಷ್ಣುಸಾರೂಪ್ಯವನ್ನು ಹೊಂದಿ ಅಕ್ಷಯವಾದ ಸುಖವನ್ನು ಪಡೆಯುವನು. ॥೭೨॥ ರಾಜನಾದವನು ಪರಮಾತ್ಮನ ಪ್ರೀತ್ಯರ್ಥವಾಗಿ ಸತ್ಪಾತ್ರನಾದ ಬ್ರಾಹ್ಮಣನಿಗೆ ಯಥಾಶಕ್ತಿ ಭೂಮಿಯನ್ನು, ಸುವರ್ಣವನ್ನು ಪೂರ್ಣಫಲ ಮತ್ತು ದಕ್ಷಿಣೆಯೊಂದಿಗೆ ದಾನಮಾಡಬೇಕು. ॥೭೩॥ ಹೀಗೆ ಮಾಡುವುದರಿಂದ ಆ ರಾಜನು ಇಹದಲ್ಲಿ ಸ್ವರ್ಗದಲ್ಲಿಯ ಇಂದ್ರನಂತೆ ಅಕ್ಷಯವಾದ ಭೋಗಗಳನ್ನು ಪಡೆಯುವನು ಮತ್ತು ಮರಣಾನಂತರ ನಿಶ್ಚಿತವಾಗಿ ವಿಷ್ಣುಲೋಕವನ್ನು ಸೇರುವನು. ॥೭೪॥ ಚಾತುರ್ಮಾಸ್ಯದಲ್ಲಿ ಯಾವನು ಬಂಗಾರದ ಕಮಲದೆಲೆಯ ಮೇಲೆ ನೈವೇದ್ಯ ಪದಾರ್ಥಗಳನ್ನು ಬಡಿಸಿ ಶ್ರೀಹರಿಗೆ ಸಮರ್ಪಿಸುವನೋ ಮತ್ತು ಗಂಧ, ಪುಷ್ಪ, ಅಕ್ಷತಾದಿಗಳಿಂದ ಶ್ರೀಹರಿಯನ್ನು ನಿತ್ಯಪೂಜಿಸಿ ಅದರಂತೆ ದೇವಬ್ರಾಹ್ಮಣರನ್ನೂ ॥೭೫॥ ನಿತ್ಯ ಪೂಜಿಸುವನೋ ಅಂಥ ವ್ರತೀ ನರನು ಅಕ್ಷಯವಾದ ಸುಖವನ್ನು ಪಡೆದು ಮರಣಾನಂತರ ಶ್ರೀಹರಿ ಪುರಂದರನ ಪುರವನ್ನು ಸೇರುವನು. ॥೭೬॥ ಇನ್ನು ನಾಲ್ಕು ತಿಂಗಳು ಪ್ರತಿದಿನ ಶ್ರೀಹರಿಗೆ ತುಳಸೀ ಅರ್ಚನೆಯನ್ನು ಸಮರ್ಪಿಸಿ ಕೊನೆಯ ದಿನ ಸುವರ್ಣದಿಂದ ಮಾಡಿದ ಒಂದು ತುಳಸೀ ದಳವನ್ನು ಬ್ರಾಹ್ಮಣನಿಗೆ ದಾನಮಾಡುವವನು ॥೭೭॥ ಸುವರ್ಣನಿರ್ಮಿತ ದೇವವಿಮಾನವಲ್ಲಿ ಕುಳಿತು ವಿಷ್ಣುಲೋಕವನ್ನು ಹೊಂದುವನು. ದೇವರಿಗೆ ನಿತ್ಯ ಗುಗ್ಗುಳದ ಧೂಪವನ್ನು ಮತ್ತು ದೀಪವನ್ನು ಸಮರ್ಪಿಸಿ ॥೭೮॥ ಕೊನೆಯ

ಸ ಭೋಗೀ ಜಾಯತೇ ಶ್ರೀಮಾಂಸ್ತಥಾ ಸೌಭಾಗ್ಯವಾನಪಿ ।
ಸಮಾಪ್ತೌ ಧೂಪಿಕಾಂ ದದ್ಯಾದ್ದೀಪಿಕಾಂ ಚ ವಿಶೇಷತಃ ||೭೯||

ಪ್ರದಕ್ಷಿಣಾಂ ತು ಯಃ ಕುರ್ಯಾನ್ನಮಸ್ಕಾರಂ ವಿಶೇಷತಃ ।
ಅಶ್ವತ್ಥಸ್ಯಾಥವಾ ವಿಷ್ಣೋಃ ಕಾರ್ತಿಕ್ಯವಧಿ ಸ ಧ್ರುವಮ್ ||೮೦||

ಪಾದಂ ಪಾದಾಂತರೇ ನ್ಯಸ್ಯ ಕರೌ ಕೃತ್ವಾ ತು ಸಂಯತೌ ।
ಸ್ತುತಿಂ ವಾಚಿ ಹೃದಿ ಜ್ಞಾನಂ ಚತುರಂಗಾ ಪ್ರದಕ್ಷಿಣಾ ||೮೧||

ಸಂಧ್ಯಾದೀಪಪ್ರದೋ ಯಸ್ತು ಪ್ರಾಂಗಣೇ ದ್ವಿಜದೇವಯೋಃ ।
ಸಮಾಪ್ತೌ ದೀಪಿಕಾಂ ದದ್ಯಾದ್ವಸ್ತ್ರತೈಲಂ ಸಕಾಂಚನಮ್ ||೮೨||

ವಾಯುಮಾಲಭತೇ ಯಸ್ತು ತೇಜಸ್ವೀ ಸ ಭವೇದಿಹ ।
ವೈಮಾನಿಕೋ ಭವೇದ್ದೇವೋ ಗಂಧರ್ವಾಪ್ಸರಸೇವಿತಃ ||೮೩||

ವಿಷ್ಣುಪಾದೋದಕಂ ಯಸ್ತು ಪಿಬೇತ್ ಕೃಚ್ಛ್ರಾತ್ಸ ಮುಚ್ಯತೇ ।
ವಿಷ್ಣೋರ್ಲೋಕಮವಾಪ್ನೋತಿ ನ ಚಾಸ್ಮಿನ್ ಜಾಯತೇ ನರಃ ||೮೪||

---

ದಿನ ಬ್ರಾಹ್ಮಣನಿಗೆ ಧೂಪಾರತಿ ಮತ್ತು ದೀಪಾರತಿಯನ್ನು ದಾನಮಾಡುವವನು ವಿವಿಧ ಭೋಗಗಳು, ಸಂಪತ್ತು ಸೌಭಾಗ್ಯಗಳನ್ನು ಪಡೆಯುವನು. ||೭೯|| ಚಾತುರ್ಮಾಸ್ಯವ್ರತದ ಕೊನೆಯ ಅವಧಿಯಾದ ಪ್ರಬೋಧೋತ್ಸವದ ವರೆಗೆ ಪ್ರತಿದಿನ ಅಶ್ವತ್ಥವೃಕ್ಷ ಅಥವಾ ವಿಷ್ಣುವಿಗೆ ಪ್ರದಕ್ಷಿಣೆ - ನಮಸ್ಕಾರಗಳನ್ನು ಸಮರ್ಪಿಸುವವನು ಇಹದಲ್ಲಿ ಸುಖದಿಂದ ಇದ್ದು ಕೊನೆಗೆ ವಿಷ್ಣುಲೋಕವನ್ನು ಸೇರುವನು. ||೮೦|| ಇನ್ನು ಪ್ರತಿದಿನ ತನ್ನೆರಡು ಕೈಗಳನ್ನು ಜೋಡಿಸಿಕೊಂಡು ಮುಖದಿಂದ ಶ್ರೀಹರಿಯನ್ನು ಸ್ತುತಿಸುತ್ತ, ಮನದಲ್ಲಿ ಶ್ರೀಹರಿಯ ಮಹಿಮೆಗಳನ್ನು ಚಿಂತಿಸುತ್ತ ಹೆಜ್ಜೆ ನಮಸ್ಕಾರ ರೂಪವಾದ ಚತುರಂಗ ಪ್ರದಕ್ಷಿಣೆ ಹಾಕುತ್ತ ||೮೧|| ಸಂಧ್ಯಾಕಾಲಕ್ಕೆ ದ್ವಿಜರ ಮನೆಯ ಹಾಗೂ ದೇವಮಂದಿರದ ಅಂಗಳದಲ್ಲಿ ದೇವತೆಗಳನ್ನು ಉದ್ದೇಶಿಸಿ ದೀಪಗಳನ್ನು ಹಚ್ಚಿ, ಬ್ರಾಹ್ಮಣರಿಗೆ ದೀಪದಾನವನ್ನು ಕೊಟ್ಟು, ಕೊನೆಯ ದಿನ ಯೋಗ್ಯನಾದ ಬ್ರಾಹ್ಮಣನಿಗೆ ಯಥಾಶಕ್ತಿ ವಸ್ತ್ರ, ಸುವರ್ಣ, ಎಣ್ಣೆ ಹಾಗೂ ದೀಪಗಳನ್ನು ದಾನಮಾಡುವವನು ||೮೨|| ಶ್ರೀಹರಿವಾಯುದೇವರ ಪ್ರೀತಿಗೆ ಪಾತ್ರನಾಗಿ ದಿವ್ಯವಾದ ಕಾಂತಿಯಿಂದ ಶೋಭಿಸುವನು. ಮುಂದೆ ದೇವವಿಮಾನದಲ್ಲಿ ಕುಳಿತು ಗಂಧರ್ವ ಅಪ್ಸರೆಯರಿಂದ ಸೇವಿತನಾಗಿ ದೇವತ್ವವನ್ನು ಹೊಂದುವನು. ||೮೩|| ನಿತ್ಯ ವಿಷ್ಣುಪಾದೋದಕವನ್ನು ಪಾನಮಾಡುವವನು ಸಕಲ ಆಪತ್ತು, ಕಷ್ಟಗಳಿಂದ ಮುಕ್ತನಾಗಿ ಪುನರ್ಜನ್ಮವರ್ಜಿತವಾದ ವಿಷ್ಣುಲೋಕವನ್ನು ಪಡೆಯುವನು. ||೮೪|| ಚಾತುರ್ಮಾಸ್ಯದಲ್ಲಿ ಪ್ರತಿದಿನ ವಿಷ್ಣುಮಂದಿರದಲ್ಲಿ ಕುಳಿತು ತ್ರಿಕಾಲದಲ್ಲಿ ೧೦೮ ಸಲ ಗಾಯತ್ರೀಮಂತ್ರವನ್ನು ಜಪಿಸುವವನಿಗೆ ಯಾವ ಪಾಪಗಳೂ

ಶತಮಷ್ಟೋತ್ತರಂ ಯಸ್ತು ಗಾಯತ್ರೀಜಪಮಾಚರೇತ್ ।
ತ್ರಿಕಾಲಂ ವೈಷ್ಣವೇ ಹರ್ಮ್ಯೇ ನ ಸ ಪಾಪೇನ ಲಿಪ್ಯತೇ ॥೮೫॥

ಅಕ್ಷಸೂತ್ರಂ ಪುಸ್ತಕಂ ಚ ಧತ್ತೇ ಪದ್ಮಂ ಕಮಂಡಲುಮ್ ।
ಚತುರ್ವಕ್ತ್ರಾ ತು ಗಾಯತ್ರೀ ಶ್ರೋತ್ರಿಯಾಣಾಂ ಗೃಹೇ ಸ್ಥಿತಾ ॥೮೬॥

ಸರ್ವಲೋಕಮಯೀ ದೇವೀ ಗಾಯತ್ರೀ ಯಾ ತ್ರಯೀಮಯೀ ।
ನಿತ್ಯಾ ಶಾಸ್ತ್ರಸಮಾಖ್ಯಾತಾ ಲೋಕಾನ್ ಯಾ ತು ಪ್ರಬೋಧಯೇತ್ ॥೮೭॥

ವ್ಯಾಸಸ್ತುಷ್ಯತಿ ತಸ್ಯಾಶು ವಿಷ್ಣುಲೋಕಂ ಸ ಗಚ್ಛತಿ ।
ಅತ್ರ ಚೋದ್ಯಾಪನೇ ಶಾಸ್ತ್ರಪುಸ್ತಕಂ ದಾನಮೇವ ಚ ॥೮೮॥

ಸರ್ವವಿದ್ಯಾಸಮಂ ಶಾಂತಿಕರಣಂ ಲಲಿತಾಕ್ಷರಮ್ ।
ಪುಸ್ತಕಂ ಸಂಪ್ರಯಚ್ಛಾಮಿ ಪ್ರೀತಾ ಭವತು ಭಾರತೀ ॥೮೯॥

ಪುರಾಣಂ ಶೃಣುಯಾನ್ನಿತ್ಯಂ ಧರ್ಮಶಾಸ್ತ್ರಮಥಾಪಿ ವಾ ।
ಪುಣ್ಯವಾನ್ ಧನವಾನ್ ಭೋಗೀ ಸತ್ಯಶೌಚಪರಾಯಣಃ ॥೯೦॥

---

ಲೇಪಿಸುವದಿಲ್ಲ. ॥೮೫॥ ಮತ್ತು ಅಂಥವನ ಮನೆಯಲ್ಲಿ ತನ್ನ ನಾಲ್ಕು ಕೈಗಳಲ್ಲಿ ಅಕ್ಷಸೂತ್ರ, ಪುಸ್ತಕ, ಪದ್ಮ ಮತ್ತು ಕಮಂಡಲುಗಳನ್ನು ಧರಿಸಿದ ನಾಲ್ಕು ಮುಖಗಳ ಗಾಯತ್ರೀ ದೇವಿಯು ನಿತ್ಯ ಸನ್ನಿಹಿತಳಾಗಿರುವಳು. ॥೮೬॥ ಸರ್ವಲೋಕಗಳಲ್ಲಿ ವ್ಯಾಪ್ತಳಾದ, ವೇದಪ್ರತಿಪಾದ್ಯಳಾದ, ನಿತ್ಯಳಾದ, ಶಾಸ್ತ್ರಪ್ರಸಿದ್ಧಳಾದ ಯಾವ ಗಾಯತ್ರೀದೇವಿಯು ಜನರನ್ನು ಅಜ್ಞಾನನಿದ್ರೆಯಿಂದ ಎಚ್ಚರಿಸುವಳೋ ಅಂಥ ದೇವಿಯು ತ್ರಿಕಾಲಗಳಲ್ಲಿ ಗಾಯತ್ರೀಜಪ ಮಾಡುವ ಶ್ರೋತ್ರಿಯನ ಮನೆಯಲ್ಲಿ ವಾಸಿಸುವಳು. ॥೮೭॥ ಇಂಥ ಶ್ರೋತ್ರಿಯನಲ್ಲಿ ಶ್ರೀವೇದವ್ಯಾಸರ ಅನುಗ್ರಹವು ಶೀಘ್ರದಲ್ಲಿ ಆಗುವದು ಮತ್ತು ಅವನು ನಿಶ್ಚಿತವಾಗಿ ವಿಷ್ಣುಲೋಕವನ್ನು ಪಡೆಯುವನು. ವ್ರತೋದ್ಯಾಪನೆಯ ದಿನ ॥೮೮॥ "ಹೇ ದೇವಿ ಭಾರತಿ, ಸರ್ವವಿದ್ಯೆಗಳಿಗೆ ಸಮನಾದ, ಶಾಂತಿಪ್ರದವಾದ, ಲಲಿತಾಕ್ಷರಗಳಿಂದ (ಸುಂದರವಾದ ಅಕ್ಷರ) ಬರೆಯಲ್ಪಟ್ಟಿರುವ ಈ ಪುಸ್ತಕವನ್ನು ಶಾಸ್ತ್ರಜ್ಞನಾದ ಈ ಬ್ರಾಹ್ಮಣನಿಗೆ ಶ್ರದ್ಧೆಯಿಂದ ಕೊಡುತ್ತಿದ್ದೇನೆ. ನೀನು ಪ್ರೀತಳಾಗು" ಎಂದು ಪ್ರಾರ್ಥಿಸುತ್ತ ಒಂದು ಶಾಸ್ತ್ರಗ್ರಂಥವನ್ನು ದಾನಮಾಡಬೇಕು. ॥೮೯॥ ಪ್ರತಿದಿನ ಯಾವನು ಪುರಾಣ ಅಥವಾ ಧರ್ಮಶಾಸ್ತ್ರಗಳ ಶ್ರವಣ ಮಾಡುವನೋ ಅವನು ಪುಣ್ಯವಂತನೂ, ಧನವಂತನೂ, ಭೋಗಿಯೂ, ಸತ್ಯಶೌಚಪರಾಯಣನೂ ಆಗುವನು. ॥೯೦॥ ಜ್ಞಾನಿಯೂ, ಲೋಕದಲ್ಲಿ ಕೀರ್ತಿವಂತನೂ, ಬಹುಶಿಷ್ಯರಿಂದ ಯುಕ್ತನೂ, ಸುಧಾರ್ಮಿಕನೂ ಆದ ದ್ವಿಜಶ್ರೇಷ್ಠನಿಗೆ ಉದ್ಯಾಪನೆಯ ದಿನ ಸುವರ್ಣವಸ್ತ್ರಗಳೊಂದಿಗೆ ಶಾಸ್ತ್ರಗ್ರಂಥವನ್ನು

ಜ್ಞಾನವಾನ್ ಲೋಕವಿಖ್ಯಾತೋ ಬಹುಶಿಷ್ಯಃ ಸುಧಾರ್ಮಿಕಃ ।
ಕಾಂಚನೇನ ಯುತಂ ವಸ್ತ್ರಂ ಪುಸ್ತಕಂ ಚ ನಿವೇದಯೇತ್ ||೯೧||

ನಾಮಮಂತ್ರವ್ರತಪರಃ ಶಂಭೋರ್ವಾ ಕೇಶವಸ್ಯ ಚ ।
ಸಮಾಪ್ತೌ ಪ್ರತಿಮಾಂ ದದ್ಯಾತ್ತಸ್ಯ ದೇವಸ್ಯ ಕಾಂಚನೀಮ್ ||೯೨||

ಪಂಚವಕ್ತ್ರೋ ವೃಷಾರೂಢಃ ಪ್ರತಿವಕ್ತ್ರಂ ತ್ರಿಲೋಚನಃ ।
ಕಪಾಲಶೂಲಖಟ್ವಾಂಗೀ ಚಂದ್ರಮೌಲಿಃ ಸದಾಶಿವಃ ||೯೩||

ತ್ವಯಾ ಸುರಾಣಾಮಮೃತಂ ವಿಹಾಯ ಹಾಲಾಹಲಂ ಸಂಹೃತಮೇವ ಯಸ್ಮಾತ್ ।
ತಥಾಽಸುರಾಣಾಂ ತ್ರಿಪುರಂ ಚ ದಗ್ಧಮೇಕೇಷುಣಾ ಲೋಕಹಿತಾರ್ಥಮೀಶ ||೯೪||

ತದ್ರೂಪದಾತಾ ಬಹುಪುಣ್ಯವಾಂಶ್ಚ ದೋಷೈರ್ವಿಮುಕ್ತಶ್ಚ ಗುಣಾಲಯೋಽಹಮ್ ।
ತಥಾ ಕುರು ತ್ವಾಂ ಶರಣಂ ಪ್ರಪದ್ಯೇ ಮಮ ಪ್ರಭೋ ದೇವವರ ಪ್ರಸೀದ ||೯೫||

ಕೃತನಿತ್ಯಕ್ರಿಯೋ ಭೂತ್ವಾ ಸೂರ್ಯಾಯಾರ್ಘ್ಯಂ ನಿವೇದಯೇತ್ ।
ಸೂರ್ಯಮಂಡಲಮಧ್ಯಸ್ಥಂ ದೇವಂ ಧ್ಯಾತ್ವಾ ಜನಾರ್ದನಮ್ ||೯೬||

---

ದಾನ ಮಾಡಬೇಕು. ||೯೧|| ಪ್ರತಿದಿನ ಶ್ರೀಹರಿಯ ಅಥವಾ ಶಂಭುವಿನ ನಾಮಗಳನ್ನು ಜಪಿಸುವವನು ಕೊನೆಯ ದಿನ ಆ ಆ ದೇವತೆಯ ಸುವರ್ಣಪ್ರತಿಮೆಯನ್ನು ದಾನ ಮಾಡಬೇಕು. ||೯೨|| "ವೃಷಭಾರೂಢನಾದ, ಪಂಚಮುಖಗಳಿಂದ ಕೂಡಿದ, ಒಂದೊಂದು ಮುಖದಲ್ಲಿಯೂ ಮೂರು ಕಣ್ಣುಗಳುಳ್ಳ, ಕೈಯಲ್ಲಿ ಕಪಾಲ, ಶೂಲ, ಖಟ್ವಾಂಗಗಳನ್ನು (ಖಟ್ವಾಂಗಂ = ಶಿವನ ಆಯುಧ - ಬಡಿಗಿಗೆ ಬುರುಡಿ ಹಾಕಿದ್ದು) ಧರಿಸಿದ, ಚಂದ್ರಮೌಳಿಯಾದ ಈಶ್ವರನು ಸದಾಶಿವನಾಗಿದ್ದಾನೆ. ||೯೩|| ಹೇ ಈಶ್ವರಾ, ನೀನು ದೇವತೆಗಳಿಗೋಸ್ಕರ ಅಮೃತವನ್ನು ಕೊಟ್ಟು, ಹಾಲಾಹಲವಿಷವನ್ನು ಸ್ವೀಕರಿಸಿದಿ ಮತ್ತು ಲೋಕಹಿತಕ್ಕಾಗಿ ತ್ರಿಪುರನಾಮಕ ಅಸುರನನ್ನು ಒಂದೇ ಒಂದು ಬಾಣಪ್ರಯೋಗದಿಂದ ಸಂಹರಿಸಿದಿ. ಈ ಕಾರಣದಿಂದ ನೀನು ಸದಾಶಿವನಾಗಿರುವಿ. ||೯೪|| ಇಂಥ ಶಿವನಿಗೆ ಶಿವತ್ವವನ್ನು ಕೊಡುವ, ಸಕಲಗುಣಪರಿಪೂರ್ಣನಾದ, ಸರ್ವದೋಷದೂರನಾದ ಶ್ರೀಹರೇ, ನಾನೂ ಕೂಡ ಪಾಪಗಳಿಂದ ದೂರನಾಗಿ, ಸದ್ಗುಣಗಳನ್ನು ಹೊಂದಿ, ಪುಣ್ಯ ಸಂಪಾದಿಸುವಂತೆ ಅನುಗ್ರಹಿಸು, ಹೇ ಪ್ರಭೋ, ದೇವದೇವೋತ್ತಮಾ, ನಿನಗೆ ಶರಣು ಬಂದಿದ್ದೇನೆ ಪ್ರಸನ್ನನಾಗು" ಎಂದು ಪ್ರಾರ್ಥಿಸಬೇಕು. ||೯೫|| ಚಾತುರ್ಮಾಸ್ಯದಲ್ಲಿ ಪ್ರತಿದಿನ ನಿತ್ಯಕರ್ಮಗಳನ್ನು ಮಾಡಿ ಮುಗಿಸಿ ನಂತರ ಸೂರ್ಯಮಂಡಲದ ಮಧ್ಯದಲ್ಲಿರುವ ಶ್ರೀಹರಿ ಜನಾರ್ದನನನ್ನು ಧ್ಯಾನಿಸುತ್ತ ಸೂರ್ಯನಾರಾಯಣನಿಗೆ ಅರ್ಘ್ಯಗಳನ್ನು ಸಮರ್ಪಿಸಬೇಕು. ||೯೬|| ವ್ರತಸಮಾಪ್ತಿಯ ದಿನ

ಸಮಾಪ್ತೌ ಕಾಂಚನಂ ದದ್ಯಾದ್ರಕ್ತವಸ್ತ್ರಂ ಚ ಗಾಂ ತಥಾ ।
ಆರೋಗ್ಯಂ ಪೂರ್ಣಮಾಯುಶ್ಚ ಕೀರ್ತಿರ್ಲಕ್ಷ್ಮೀರ್ಬಲಂ ಭವೇತ್ ॥೯೭॥

ತಿಲಹೋಮಂ ಚ ಯಃ ಕುರ್ಯಾಚ್ಚಾತುರ್ಮಾಸ್ಯೇ ದಿನೇ ದಿನೇ ।
ಭಕ್ತ್ಯಾ ವ್ಯಾಹೃತಿಭಿರ್ಮಂತ್ರೈರ್ಗಾಯತ್ರ್ಯಾ ವಾ ವ್ರತಾನ್ವಿತಃ ॥೯೮॥

ಅಷ್ಟೋತ್ತರಶತಂ ಚಾಥ ಅಷ್ಟಾವಿಂಶತಿರೇವ ವಾ ।
ತಿಲಪಾತ್ರಂ ಸಮಾಪ್ತೌ ತು ದದ್ಯಾದ್ವಿಪ್ರಾಯ ಧೀಮತೇ ॥೯೯॥

ವಾಙ್ಮನಃಕಾಯಜನಿತೈಃ ಪಾಪೈರ್ಮುಚ್ಯೇತ ಸಂಚಿತೈಃ ।
ನ ರೋಗೈರಭಿಭೂಯೇತ ಲಭೇತ್ ಸಂತತಿಮುತ್ತಮಾಮ್ ॥೧೦೦॥

ದೇವದೇವ ಜಗನ್ನಾಥ ವಾಂಛಿತಾರ್ಥಫಲಪ್ರದ ।
ತಿಲಪಾತ್ರಂ ಪ್ರದಾಸ್ಯಾಮಿ ತೇನ ಪಾಪಂ ವ್ಯಪೋಹತು ॥೧೦೧॥

ಅನ್ನಹೋಮಂ ತು ಯಃ ಕುರ್ಯಾಚ್ಚಾತುರ್ಮಾಸ್ಯಮತಂದ್ರಿತಃ ।
ಸಮಾಪ್ತೌ ಘೃತಕುಂಭಂ ತು ವಸ್ತ್ರಕಾಂಚನಸಂಯುತಮ್ ॥೧೦೨॥

---

ಸುವರ್ಣ, ರಕ್ತವಸ್ತ್ರ ಮತ್ತು ಗೋವನ್ನು ಯೋಗ್ಯಬ್ರಾಹ್ಮಣನಿಗೆ ದಾನಮಾಡಬೇಕು. ಹೀಗೆ ಮಾಡುವುದರಿಂದ ಆರೋಗ್ಯ, ಪೂರ್ಣಾಯುಷ್ಯ, ಕೀರ್ತಿ, ಸಂಪತ್ತು ಮತ್ತು ಬಲ ಇವು ಪ್ರಾಪ್ತವಾಗುತ್ತವೆ. ॥೯೭॥ ಚಾತುರ್ಮಾಸ್ಯದಲ್ಲಿ ಪ್ರತಿದಿನ ವ್ಯಾಹೃತಿ ಮಂತ್ರಗಳಿಂದ (ಪ್ರತ್ಯೇಕ) ಅಥವಾ ಗಾಯತ್ರೀಮಂತ್ರದಿಂದ (ಅಖಂಡ) ಭಕ್ತಿಯಿಂದ ॥೯೮॥ ೧೦೮ ಸಲವಾಗಲೀ ಅಥವಾ ೨೮ ಸಲವಾಗಲೀ ಆಹುತಿಗಳನ್ನು ಹಾಕಿ ತಿಲಹೋಮ ಮಾಡಿ ಸಮಾಪ್ತಿಯ ದಿನ ವಿಪ್ರನಿಗೆ ತಿಲಪಾತ್ರವನ್ನು ದಾನಮಾಡುವ ಧೀಮಂತ ವ್ರತಿಯು ॥೯೯॥ ಕಾಯಾ ವಾಚಾ ಮನಸಾ ಘಟಿಸಿದ ಸಕಲ ಸಂಚಿತಪಾಪಗಳಿಂದ ಮುಕ್ತನಾಗುವನು. ಅವನೆಂದಿಗೂ ಯಾವ ರೋಗದಿಂದಲೂ ಪೀಡಿತನಾಗುವದಿಲ್ಲ ಮತ್ತು ಉತ್ತಮವಾದ ಸಂತತಿಯನ್ನು ಪಡೆಯುವನು. ॥೧೦೦॥ "ಹೇ ದೇವದೇವಾ, ಜಗನ್ನಾಥಾ, ಅಪೇಕ್ಷಿತಾರ್ಥಪ್ರದನಾದ ಶ್ರೀಹರೇ, ತಿಲಪಾತ್ರವನ್ನು ದಾನಮಾಡುತ್ತಿದ್ದೇನೆ. ಇದರಿಂದ ನನ್ನ ಪಾಪಗಳೆಲ್ಲ ನಾಶವಾಗಲಿ" ಎಂದು ಪ್ರಾರ್ಥಿಸುತ್ತ ತಿಲಪಾತ್ರೆಯನ್ನು ದಾನಮಾಡಬೇಕು. ॥೧೦೧॥ ಚಾತುರ್ಮಾಸ್ಯದಲ್ಲಿ ನಿತ್ಯ ಬೇಸರದೇ ಯಾವನು ಅನ್ನದಾನವನ್ನು ಮಾಡುವನೋ ಮತ್ತು ಅನ್ನದಿಂದ ಹೋಮಿಸುವನೋ, ಕೊನೆಯ ದಿನ ಸುವರ್ಣ ಹಾಗೂ ವಸ್ತ್ರಗಳಿಂದ ಸಹಿತವಾಗಿರುವ ಘೃತಕುಂಭವನ್ನು (ತುಪ್ಪದ ಕೊಡ) ದಾನಮಾಡುವನೋ ॥೧೦೨॥ ಅವನು ಆರೋಗ್ಯವನ್ನು, ಅಸದೃಶವಾದ ಕಾಂತಿಯನ್ನು, ಪುತ್ರಸೌಭಾಗ್ಯಸಂಪತ್ತನ್ನು ಪಡೆಯುವನು. ಅವನ ಸರ್ವಶತ್ರುಗಳು ನಾಶವಾಗುವರು ಹಾಗೂ

ಆರೋಗ್ಯಂ ಕಾಂತಿಮತುಲಾಂ ಪುತ್ರಸೌಭಾಗ್ಯಸಂಪದಃ ।
ಶತ್ರುಕ್ಷಯಂ ಚ ಲಭತೇ ಬ್ರಹ್ಮಣಃ ಪ್ರತಿಮೋ ಭವೇತ್ ॥೧೦೩॥

ಅಶ್ವತ್ಥಸೇವಾಂ ಯಃ ಕುರ್ಯಾತ್ ಸರ್ವಪಾಪೈಃ ಪ್ರಮುಚ್ಯತೇ ।
ವಿಷ್ಣುಭಕ್ತೋ ಭವೇತ್ಪಶ್ಚಾದಂತೇ ವಸ್ತ್ರಂ ಪ್ರದಾಪಯೇತ್ ॥೧೦೪॥

ಸಕಾಂಚನಂ ಬ್ರಾಹ್ಮಣಾಯ ನೈವ ರೋಗಾನ್ ಸ ವಿಂದತೇ ।
ತುಲಸೀಂ ಧಾರಯೇದ್ಯಸ್ತು ವಿಷ್ಣುಪ್ರೀತಿಕರಾಂ ಶುಭಾಮ್ ॥೧೦೫॥

ವಿಷ್ಣುಲೋಕಮವಾಪ್ನೋತಿ ಸರ್ವಪಾಪೈಃ ಪ್ರಮುಚ್ಯತೇ ।
ಬ್ರಾಹ್ಮಣಾನ್ ಭೋಜಯೇತ್ಪಶ್ಚಾದ್ವಿಷ್ಣುಮುದ್ದಿಶ್ಯ ಪಾಂಡವ ॥೧೦೬॥

ಯಸ್ತು ಸುಪ್ತೇ ಹೃಷೀಕೇಶೇ ದೂರ್ವಾಮಮೃತಸಂಭವಾಮ್ ।
ಸದಾ ಪ್ರಾತರ್ವಹನ್ಮೂರ್ಧ್ನಿ ಶುದ್ಧಾತ್ಮಾ ಚ ಋತುದ್ವಯೇ ॥೧೦೭॥

ಮಂತ್ರೇಣಾನೇನ ರಾಜೇಂದ್ರ ಲಕ್ಷ್ಮೀನಾಥಸ್ಯ ತುಷ್ಟಯೇ ।
ತ್ವಂ ದೂರ್ವೇಽಮೃತಜನ್ಮಾಸಿ ವಂದಿತಾಸಿ ಸುರಾಸುರೈಃ ॥೧೦೮॥

ಸೌಭಾಗ್ಯಂ ಸಂತತಿಂ ದತ್ವಾ ಸದ್ಯಃ ಕಾರ್ಯಕರೀ ಭವ ।
ವ್ರತಾಂತೇ ಚ ಕುರುಶ್ರೇಷ್ಠ ದೂರ್ವಾಂ ಸ್ವರ್ಣವಿನಿರ್ಮಿತಾಮ್ ॥೧೦೯॥

---

ಅವನು ಬ್ರಹ್ಮನಂತೆ ವಿರಾಜಿಸುವನು. ॥೧೦೩॥ ಪ್ರತಿದಿನ ಅಶ್ವತ್ಥವೃಕ್ಷದ ಸೇವೆಯನ್ನು ಮಾಡುವವನು ಸಕಲ ಪಾಪಗಳಿಂದ ಮುಕ್ತನಾಗಿ ವಿಷ್ಣು ಭಕ್ತನಾಗುವನು. ॥೧೦೪॥ ಕೊನೆಯದಿನ ಯೋಗ್ಯ ಬ್ರಾಹ್ಮಣನಿಗೆ ಸುವರ್ಣಸಹಿತವಾದ ವಸ್ತ್ರವನ್ನು ದಾನಮಾಡುವವನು ಯಾವ ರೋಗವನ್ನೂ ಹೊಂದುವದಿಲ್ಲ. ವಿಷ್ಣು ಪ್ರೀತಿಕರವಾದ ಒಳ್ಳೆಯ ತುಳಸೀಮಣಿ ಮಾಲೆಯನ್ನು ಧರಿಸುವವನು ॥೧೦೫॥ ಹೇ ಧರ್ಮರಾಜಾ, ಉದ್ಯಾಪನೆಯ ದಿನ ವಿಷ್ಣುವನ್ನುದ್ದೇಶಿಸಿ ಬ್ರಾಹ್ಮಣರಿಗೆ ಭೋಜನ ಮಾಡಿಸುವವನು ಸರ್ವಪಾಪಗಳಿಂದ ಮುಕ್ತನಾಗಿ ವಿಷ್ಣುಲೋಕವನ್ನು ಸೇರುವನು. ॥೧೦೬॥ ಹೃಷೀಕೇಶನಾದ ಶ್ರೀಹರಿಯು ಮಲಗಿಕೊಂಡ ದಿನದಿಂದ, ಅಮೃತದಿಂದ ಉತ್ಪನ್ನವಾದ ದೂರ್ವಾವನ್ನು ಪ್ರತಿದಿನ ಪ್ರಾತಃಕಾಲದಲ್ಲಿ ತಲೆಯ ಮೇಲೆ ಧರಿಸಬೇಕು. ಹೇ ರಾಜೇಂದ್ರ, ಶುದ್ಧಾತ್ಮನಾದವನು ಚಾತುರ್ಮಾಸ್ಯದ ಎರಡು ಋತುಗಳಲ್ಲಿ ಅಂದರೆ ನಾಲ್ಕೂ ತಿಂಗಳು ॥೧೦೭॥ ಶ್ರೀಲಕ್ಷ್ಮೀಪತಿಯ ಪ್ರೀತ್ಯರ್ಥವಾಗಿ ತಲೆಯ ಮೇಲೆ ದೂರ್ವಾವನ್ನು ಧರಿಸುವಾಗ ಈ ಮಂತ್ರವನ್ನು ಹೇಳಬೇಕು - "ಹೇ ದೂರ್ವೆ, ನೀನು ಅಮೃತದಿಂದ ಉತ್ಪನ್ನಳಾಗಿರುವಿ. ಸುರಾಸುರರಿಂದ ವಂದಿತಳಾಗಿರುವಿ. ॥೧೦೮॥ ನನಗೆ ಸೌಭಾಗ್ಯ-ಸಂತತಿಗಳನ್ನು ಕೊಟ್ಟು ನನ್ನ ಕಾರ್ಯಗಳನ್ನೆಲ್ಲ ಈಡೇರಿಸಿಕೊಡುವವಳಾಗು". ಹೇ ಧರ್ಮರಾಜಾ, ಚಾತುರ್ಮಾಸ್ಯವ್ರತದ ಕೊನೆಯ ದಿನ ಸುವರ್ಣದಿಂದ ನಿರ್ಮಿತವಾದ ॥೧೦೯॥ ಅಗ್ರಭಾಗದಿಂದ ಸಹಿತವಾದ (ತುದಿಯುಳ್ಳ), ಎಲ್ಲ ದಲಗಳಿಂದ ಕೂಡಿದ ದೂರ್ವಾವನ್ನು

ಸಾಗ್ರಾಂ ಸರ್ವದಲೋಪೇತಾಂ ಸವಸ್ತ್ರಾಂ ದ್ವಿಜಪುಂಗವೇ ।
ದದ್ಯಾದ್ದಕ್ಷಿಣಯಾ ಸಾರ್ಧಂ ಮಂತ್ರೇಣಾನೇನ ಸುವ್ರತ ||೧೧೦||

ಯಥಾ ಶಾಖಾಪ್ರಶಾಖಾಭಿರ್ವಿಸ್ತೃತಾಸಿ ಮಹೀತಲೇ ।
ತಥಾ ಮಮಾಪಿ ಸಂತಾನಂ ದೇಹಿ ತ್ವಮಜರಾಮರಮ್ ||೧೧೧||

ಏವಂ ವ್ರತಂ ಯಃ ಕುರುತೇ ಚಾತುರ್ಮಾಸ್ಯಮತಂದ್ರಿತಃ ।
ನ ಚ ದುಃಖಭಯಂ ತಸ್ಯ ನ ಚ ರೋಗಭಯಂ ಭವೇತ್ ||೧೧೨||

ನಾಶುಭಂ ಪ್ರಾಪ್ನುಯಾಜ್ಞಾತು ಪಾಪೇಭ್ಯಃ ಪ್ರವಿಮುಚ್ಯತೇ ।
ಭುಕ್ತ್ವಾ ತು ಸಕಲಾನ್ ಭೋಗಾನ್ ಸ್ವರ್ಗೇ ಲೋಕೇ ಮಹೀಯತೇ ||೧೧೩||

ಗೀತಂ ತು ದೇವದೇವಸ್ಯ ಕೇಶವಸ್ಯ ಶಿವಸ್ಯ ವಾ ।
ಕರೋತಿ ನಿತ್ಯಮಾಪ್ನೋತಿ ನರೋ ಜಾಗರಣೇ ಫಲಮ್ ||೧೧೪||

ವ್ರತಾಂತೇ ಚ ವ್ರತೀ ದದ್ಯಾತ್ ಘಂಟಾಂ ದೇವಾಯ ಸುಸ್ವರಾಮ್ ।
ಗುರೋರವಜ್ಞಯಾ ಯಚ್ಚ ನಾಧ್ಯಾಯೇಽಧ್ಯಯನಂ ಕೃತಮ್ ||೧೧೫||

---

ಒಬ್ಬ ದ್ವಿಜಶ್ರೇಷ್ಠನಿಗೆ ದಕ್ಷಿಣಾ ಸಹಿತವಾಗಿ ಕೊಡಬೇಕು. ಹೀಗೆ ದಾನಮಾಡುವಾಗ ||೧೧೦|| - "ಹೇ ದೂರ್ವೆ, ಯಾವ ರೀತಿ ನೀನು ಭೂಮಿಯ ಮೇಲೆ ಶಾಖೋಪಶಾಖೆಗಳಿಂದ ವಿಸ್ತಾರವಾಗಿ ಬೆಳೆದಿರುವಿಯೋ ಅದರಂತೆ ನನಗೂ ಕೂಡ ಅಜರಾಮರವಾದ (ಮುಪ್ಪು ಹಾಗೂ ಸಾವುಗಳಿಲ್ಲದ) ಸಂತಾನವನ್ನು ದಯಪಾಲಿಸು". ಎಂಬ ಮಂತ್ರವನ್ನು ಹೇಳಬೇಕು. ||೧೧೧|| ಈ ಪ್ರಕಾರವಾದ ವ್ರತವನ್ನು ಚಾತುರ್ಮಾಸ್ಯದಲ್ಲಿ ಯಾವನು ಬೇಸರದೇ ಮಾಡುವನೋ ಅಂಥವನಿಗೆ ಯಾವ ದುಃಖ ಹಾಗೂ ರೋಗಗಳ ಭಯವಿರುವದಿಲ್ಲ. ||೧೧೨|| ಅವನಿಗೆ ಎಳ್ಳಷ್ಟೂ ಅಶುಭವೆಂಬುದು ಆಗುವದಿಲ್ಲ ಹಾಗೂ ಅವನು ಎಲ್ಲ ಪಾಪಗಳಿಂದ ಮುಕ್ತನಾಗುವನು. ಇಹಲೋಕದಲ್ಲಿ ಸಕಲಭೋಗಗಳನ್ನು ಭೋಗಿಸಿ ಮರಣಾನಂತರ ಸ್ವರ್ಗಲೋಕವನ್ನು ಸೇರುವನು. ||೧೧೩|| ನಿತ್ಯದಲ್ಲಿ ಶ್ರೀಹರಿಕೇಶವನ ಅಥವಾ ಶಿವನ ಮೇಲಿನ ಕೀರ್ತನೆಗಳನ್ನು ಸುಶ್ರಾವ್ಯವಾಗಿ ಹೇಳುವವನು ಜಾಗರಣೆಯ ಫಲವನ್ನು ಪಡೆಯುವನು. ||೧೧೪|| ವ್ರತಾಂತದಲ್ಲಿ ವ್ರತಿಯು ದೇವರಿಗೆ ಸುಸ್ವರವಾದ ಒಂದು ಘಂಟೆಯನ್ನು ಸಮರ್ಪಿಸಬೇಕು. "ಗುರುಗಳ ಅವಜ್ಞೆಯಿಂದ ಮತ್ತು ಅನಧ್ಯಯನ ದಿನಗಳಲ್ಲಿ ಅಧ್ಯಯನ ಮಾಡುವದರಿಂದ ನಾನೇನು ಪಾಪವನ್ನು ಮಾಡಿರುವೆನೋ ||೧೧೫|| ಹೇ ಸರಸ್ವತೀದೇವಿ, ಜಗನ್ಮಾತೆ, ಜಗತ್ತಿನಲ್ಲಿಯ ಅಜ್ಞಾನವನ್ನು ನಾಶಮಾಡುವವಳೇ, ಸಾಕ್ಷಾತ್ ಬ್ರಹ್ಮನ ರಾಣಿಯೇ,

ಸರಸ್ವತಿ ಜಗನ್ನಾಥೇ ಜಗಜ್ಜಾಡ್ಯಾಪಹಾರಿಣಿ ।
ಸಾಕ್ಷಾತ್ ಬ್ರಹ್ಮಕಲತ್ರಂ ಚ ವಿಷ್ಣುರುದ್ರಾದಿಭಿಃ ಸ್ತುತೇ ॥೧೧೬॥

ವಿಪ್ರಪಾದವಿನಿರ್ಮುಕ್ತಂ ಜಾಡ್ಯಂ ಹರ ವರಾನನೇ ।
ಘಂಟಾನಾದೇನ ತುಷ್ಟಾ ತ್ವಂ ಬ್ರಹ್ಮಣೇ ಲೋಕಪಾವನೀ ॥೧೧೭॥

ವಿಪ್ರಪಾದವಿನಿರ್ಮುಕ್ತಂ ತೋಯಂ ಯಃ ಪ್ರತ್ಯಹಂ ಪಿಬೇತ್ ।
ಚಾತುರ್ಮಾಸ್ಯೇ ನರೋ ಭಕ್ತ್ಯಾ ಮದ್ರೂಪಂ ಬ್ರಾಹ್ಮಣಂ ಸ್ಮರನ್ ॥೧೧೮॥

ಮನೋವಾಕ್ಕಾಯಜನಿತೈರ್ಮುಕ್ತೋ ಭವತಿ ಕಿಲ್ಬಿಷೈಃ ।
ವ್ಯಾಧಿಭಿರ್ನಾಭಿಭೂಯೇತ ಶ್ರೀರಾಯುಸ್ತಸ್ಯ ವರ್ಧತೇ ॥೧೧೯॥

ಸಮಾಪ್ತೌ ಗೋಯುಗಂ ದದ್ಯಾದ್ಗವಾಮೇಕಾಂ ಪಯಸ್ವಿನೀಮ್ ।
ತತ್ರಾಪ್ಯಶಕ್ತೌ ರಾಜೇಂದ್ರ ದದ್ಯಾದ್ವಾಸೋಯುಗಂ ವ್ರತೀ ॥೧೨೦॥

ಬ್ರಾಹ್ಮಣಂ ವಂದತೇ ಯಸ್ತು ಸರ್ವದೇವಮಯಂ ಸ್ಮೃತಮ್ ।
ಕೃತಕೃತ್ಯೋ ಭವೇತ್ಸದ್ಯಃ ಸರ್ವಪಾಪೈಃ ಪ್ರಮುಚ್ಯತೇ ॥೧೨೧॥

ಅಕ್ಷಯಂ ಸುಖಮಾಪ್ನೋತಿ ಪಿತೃಭಕ್ತಿಪರೋ ನರಃ ।
ಸಮಾಪ್ತೌ ಭೋಜಯೇದ್ವಿಪ್ರಾನಾಯುರ್ವಿತ್ತಂ ಚ ವಿಂದತಿ ॥೧೨೨॥

---

ವಿಷ್ಣುವಿನಿಂದ ಮಾನ್ಯಳಾದವಳೇ, ರುದ್ರನಿಂದ ಸ್ತುತಳೇ, ॥೧೧೬॥ ಹೇ ವರಾನನೇ, ಆ ನನ್ನ ಪಾಪವನ್ನೆಲ್ಲ ದೂರಮಾಡು, ಅಜ್ಞಾನವನ್ನು ಕಳೆ. ಹೇ ಬ್ರಹ್ಮಪ್ರಿಯೇ, ಲೋಕಪಾವನಿ, ನಾನು ಕೊಡುತ್ತಿರುವ ಈ ಘಂಟೆಯ ನಾದದಿಂದ ಸುಪ್ರೀತಳಾಗು. ॥೧೧೭॥ ಚಾತುರ್ಮಾಸ್ಯದಲ್ಲಿ ಪ್ರತಿದಿನ ಯಾವನು ಬ್ರಾಹ್ಮಣನನ್ನು ನನ್ನ ರೂಪವೆಂದು ಸ್ಮರಿಸುತ್ತ ಆ ಬ್ರಾಹ್ಮಣನ ಪಾದಪ್ರಕ್ಷಾಲನೆ ಮಾಡಿದ ನೀರನ್ನು ಭಕ್ತಿಯಿಂದ ಸೇವಿಸುವನೋ ॥೧೧೮॥ ಅವನು ಕಾಯಾ ವಾಚಾ ಮನಸಾ ಘಟಿಸಿದ ಸಕಲ ಪಾಪಗಳಿಂದ ಮುಕ್ತನಾಗುವನು. ಅವನೆಂದಿಗೂ ವ್ಯಾಧಿಗಳಿಂದ ಪೀಡಿತನಾಗುವದಿಲ್ಲ. ಅಲ್ಲದೇ ಅವನ ಆಯುಸ್ಸು ವರ್ಧಿಸುವದು. ॥೧೧೯॥ ಹೇ ಧರ್ಮರಾಜ, ವ್ರತಿಯು ಚಾತುರ್ಮಾಸ್ಯದ ಸಮಾಪ್ತಿಯ ದಿನ ದ್ವಿಜಶ್ರೇಷ್ಠನಿಗೆ ಹಾಲು ಕರೆಯುವ ಎರಡು ಗೋವುಗಳನ್ನಾಗಲೀ ಸಾಧ್ಯವಾಗದಿದ್ದರೆ ಒಂದು ಗೋವನ್ನಾಗಲೀ ದಾನ ಮಾಡಬೇಕು. ಇದೂ ಸಾಧ್ಯವಾಗದಿದ್ದರೆ ಒಂದು ಜತೆ ವಸ್ತ್ರವನ್ನು ದಾನ ಮಾಡಬೇಕು. ॥೧೨೦॥ ಸರ್ವದೇವತೆಗಳ ಸ್ವರೂಪವೆಂದು ತಿಳಿಯಲ್ಪಟ್ಟಿರುವ ಬ್ರಾಹ್ಮಣನನ್ನು ಭಕ್ತಿಯಿಂದ ನಮಸ್ಕರಿಸುವವನು ತತ್ಕಾಲದಲ್ಲಿಯೇ ಸರ್ವಪಾಪಗಳಿಂದ ಮುಕ್ತನಾಗಿ ಕೃತಕೃತ್ಯನಾಗುವನು. ॥೧೨೧॥ ಭಕ್ತಿಯಿಂದ ತನ್ನ ಪಿತೃಗಳ ಸೇವೆಯನ್ನು ಮಾಡುವವನು ಅಕ್ಷಯವಾದ ಸುಖವನ್ನು ಪಡೆಯುವನು ಮತ್ತು ವ್ರತದ ಕೊನೆಯದಿನ ಬ್ರಾಹ್ಮಣಭೋಜನ ಮಾಡಿಸುವವನು ಆಯುಷ್ಯ ಹಾಗೂ ಸಂಪತ್ತನ್ನು ಹೊಂದುವನು. ॥೧೨೨॥ ನಿತ್ಯ ಪ್ರಾತಃಕಾಲ ಸಂಧ್ಯಾವಂದನೆಯನ್ನು ಮಾಡಿ ಚಾತುರ್ಮಾಸ್ಯದ

ಸಂಧ್ಯಾಂ ಪ್ರಾತರ್ನರಃ ಕೃತ್ವಾ ಸಮಾಪ್ತೌ ಘೃತಕುಂಭದಃ ।
ವಸ್ತ್ರಯುಗ್ಮಂ ತಿಲಾನ್ ಘಂಟಾಂ ಬ್ರಾಹ್ಮಣಾಯ ನಿವೇದಯೇತ್ ॥೧೨೩॥

ಸಾರಸ್ವತಂ ಯಾತಿ ಸತ್ತ್ವಂ ವಿದ್ಯಾವಾಂಸ್ತು ಭವೇದಿತಿ ।
ಸಂಸ್ಪೃಶೇತ್ಕಪಿಲಾಂ ಯೋ ವೈ ನಿತ್ಯಂ ಸ ಚ ಭವೇದ್ಧನೀ ॥೧೨೪॥

ತಾಮೇವಾಲಂಕೃತಾಂ ದದ್ಯಾತ್ ಸರ್ವಾಂ ಭೂಮಿಮಥಾಪಿ ವಾ ।
ಸಾರ್ವಭೌಮೋ ಭವೇದ್ರಾಜಾ ದೀರ್ಘಾಯುಶ್ಚ ಪ್ರತಾಪವಾನ್ ॥೧೨೫॥

ದಾನಶೀಲಃ ಸದಾರಂಭಃ ಸರ್ವಸಂಕಟವರ್ಜಿತಃ ।
ರೂಪವಾನ್ ಭಾಗ್ಯಸಂಪನ್ನೋ ಲಭತೇ ಸುಖಮಕ್ಷಯಮ್ ॥೧೨೬॥

ಸ ವಸೇದಿಂದ್ರವತ್ ಸ್ವರ್ಗೇ ವತ್ಸರಾನ್ ರೋಮಸಮ್ಮಿತಾನ್ ।
ನಮಸ್ಕರೋತಿ ಯಃ ಸೂರ್ಯಂ ಗಣೇಶಂ ವಾಪಿ ನಿತ್ಯಶಃ ॥೧೨೭॥

ಆಯುರಾರೋಗ್ಯಮೈಶ್ವರ್ಯಂ ಲಭತೇ ಕಾಂತಿಮುತ್ತಮಾಮ್ ।
ವಿಘ್ನರಾಜಪ್ರಸಾದೇನ ಪ್ರಾಪ್ನುಯಾದೀಪ್ಸಿತಂ ಫಲಮ್ ॥೧೨೮॥

ಸರ್ವತ್ರ ವಿಜಯಂ ಚೈವ ನಾತ್ರ ಕಾರ್ಯಾ ವಿಚಾರಣಾ ।
ರವಿಃ ಕಾರ್ಯಃ ಸುವರ್ಣಸ್ಯ ಸಿಂಧೂರಾರುಣಸನ್ನಿಭಃ ॥೧೨೯॥

---

ಕೊನೆಯ ದಿನ ಘೃತಕುಂಭ, ಜೋಡುವಸ್ತ್ರ, ತಿಲ ಹಾಗೂ ಘಂಟಾ ಇವುಗಳನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು. ॥೧೨೩॥ ಹೀಗೆ ದಾನಕೊಡುವವನು ವೇದಜ್ಞನೂ, ವಿದ್ಯಾವಂತನೂ ಆಗುವನು. ನಿತ್ಯ ಕಪಿಲಾಗೋವನ್ನು ಸ್ಪರ್ಶ ಮಾಡುವ ಮಾತ್ರದಿಂದ ಸ್ಪರ್ಶಮಾಡುವವನು ಧನವಂತನಾಗುತ್ತಾನೆ. ॥೧೨೪॥ ನಿತ್ಯಸ್ಪರ್ಶಮಾಡುತ್ತಿದ್ದ ಗೋವನ್ನೇ ವಸ್ತ್ರಾಭರಣಗಳಿಂದ ಅಲಂಕರಿಸಿ ದಾನ ಮಾಡಿದರೆ ಅಥವಾ ಭೂದಾನ ಮಾಡಿದರೆ ಜನ್ಮಾಂತರದಲ್ಲಿ ಸಾರ್ವಭೌಮರಾಜನಾಗುವನು. ಅವನು ದೀರ್ಘಾಯುಷಿಯೂ, ಪ್ರತಾಪಿಯೂ ॥೧೨೫॥ ದಾನಶೀಲನೂ, ಸರ್ವಸಂಕಟಗಳಿಂದ ವರ್ಜಿತನೂ, ಸುರೂಪಿಯೂ, ಭಾಗ್ಯವಂತನೂ ಆಗಿ ಅಕ್ಷಯವಾದ ಸುಖವನ್ನು ಹೊಂದುವನು. ॥೧೨೬॥ ಅವನು ತನ್ನ ಶರೀರದ ಮೇಲಿರುವ ರೋಮಗಳ ಸಂಖ್ಯೆಯ ವರ್ಷಗಳವರೆಗೆ ಸ್ವರ್ಗಲೋಕದಲ್ಲಿ ಇಂದ್ರನಂತಿರುವನು. ಯಾವನು ನಿತ್ಯ ಸೂರ್ಯನನ್ನು ಅಥವಾ ಗಣೇಶನನ್ನು ನಮಸ್ಕರಿಸುವನೋ ॥೧೨೭॥ ಅವನು ಆಯುರಾರೋಗ್ಯ ಐಶ್ವರ್ಯಗಳನ್ನು ಹೊಂದಿ ಉತ್ತಮವಾದ ಕಾಂತಿಯಿಂದ ಯುಕ್ತನಾಗಿರುವನು. ವಿಘ್ನರಾಜನ ಪ್ರಸಾದದಿಂದ ಅಪೇಕ್ಷಿತ ಫಲಗಳನ್ನೆಲ್ಲ ಪಡೆಯುವನು. ॥೧೨೮॥ ಮತ್ತು ಸರ್ವತ್ರ ವಿಜಯಿಯಾಗುವನು. ಈ ವಿಷಯದಲ್ಲಿ ಸಂದೇಹಕ್ಕೆ ಆಸ್ಪದವೇ ಇಲ್ಲ. ಸಿಂಧೂರದಂತೆ ಅರುಣವರ್ಣದ ಕಾಂತಿಯಿಂದ ಶೋಭಿಸುವ ಸೂರ್ಯನನ್ನು ಸುವರ್ಣದಿಂದ ನಿರ್ಮಿಸಿ ॥೧೨೯॥ ಆ ಸೂರ್ಯನ ಪ್ರತಿಮೆಯನ್ನು

ನಿವೇದಯೇದ್ಬ್ರಾಹ್ಮಣಾಯ ಸರ್ವಕಾಮಾರ್ಥಸಿದ್ಧಯೇ ।
ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ ॥೧೩೦॥

ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಉಚ್ಯತೇ ।
ಅಷ್ಟಾಂಗಸಹಿತಂ ಭೂಮೌ ನಮಸ್ಕಾರೇಣ ಯೋಽರ್ಚಯೇತ್ ॥೧೩೧॥

ಯಾಂ ಗತಿಂ ಸಮವಾಪ್ನೋತಿ ನ ತಾಂ ಕ್ರತುಶತೈರಪಿ ।
ಯಸ್ತು ರೌಪ್ಯಂ ಶಿವಪ್ರೀತ್ಯೈ ದದ್ಯಾಚ್ಛಕ್ತ್ಯಾ ಽಯತುದ್ವಯೇ ॥೧೩೨॥

ತಾಮ್ರಂ ವಾ ಪ್ರತ್ಯಹಂ ದದ್ಯಾತ್ ಸ್ವಶಕ್ತ್ಯಾ ಶಿವತುಷ್ಟಯೇ ।
ಸುರೂಪಾಂಲ್ಲಭತೇ ಪುತ್ರಾನ್ ರುದ್ರಭಕ್ತಿಪರಾಯಣಾನ್ ॥೧೩೩॥

ಸಮಾಪ್ತೌ ಮಧುಪೂರ್ಣಂ ತು ಪಾತ್ರಂ ರಾಜತಮುತ್ತಮಮ್ ।
ಪ್ರದದ್ಯಾತ್ತಾಮ್ರದಾನೇ ತು ತಾಮ್ರಪಾತ್ರಂ ಗುಡಾನ್ವಿತಮ್ ॥೧೩೪॥

ತಾಮ್ರಂ ಪುಷ್ಟಿಕರಂ ಸರ್ವಂ ದೇವಪ್ರಿಯಕರಂ ಶುಭಮ್ ।
ಸರ್ವರಕ್ಷಾಕರಂ ನಿತ್ಯಮತಃ ಶಾಂತಿಂ ಪ್ರಯಚ್ಛ ಮೇ ॥೧೩೫॥

ಯಸ್ತು ಸುಪ್ತೇ ಹೃಷೀಕೇಶೇ ಸ್ವರ್ಣದಾನಂ ಸ್ವಶಕ್ತಿತಃ ।
ವಸ್ತ್ರಯುಗ್ಮಂ ತಿಲೈಃ ಸಾರ್ಧಂ ದತ್ತ್ವಾ ದೋಷೈಃ ಪ್ರಮುಚ್ಯತೇ ॥೧೩೬॥

---

ಸರ್ವಕಾಮಾರ್ಥಸಿದ್ಧಿಗೋಸ್ಕರವಾಗಿ ದ್ವಿಜಶ್ರೇಷ್ಠನಿಗೆ ದಾನ ಮಾಡಬೇಕು. ಉರಸ್ಸು, ಶಿರಸ್ಸು, ದೃಷ್ಟಿ, ಮನಸ್ಸು, ವಚಸ್ಸು (ಮಾತು), ॥೧೩೦॥ ೨ ಪಾದಗಳು, ೨ ಕೈಗಳು ಹಾಗೂ ೨ ಮೊಣಕಾಲು ಈ ಎಂಟುಅಂಗಗಳಿಂದ ಮಾಡುವ ಪ್ರಣಾಮವೇ ಅಷ್ಟಾಂಗ ಪ್ರಣಾಮವೆಂದು ಕರೆಯಲ್ಪಡುತ್ತದೆ. ಇಂಥ ಸಾಷ್ಟಾಂಗ ನಮಸ್ಕಾರಗಳಿಂದ ಪ್ರತಿದಿನ ಪರಮಾತ್ಮನ ಆರಾಧನೆ ಮಾಡುವವನು ॥೧೩೧॥ ಯಾವ ಉತ್ತಮವಾದ ಗತಿಯನ್ನು ಹೊಂದುವನೋ ಅದನ್ನು ನೂರುಯಜ್ಞ ಮಾಡಿದರೂ ಪಡೆಯಲು ಸಾಧ್ಯವಿಲ್ಲ. ಚಾತುರ್ಮಾಸ್ಯದಲ್ಲಿ ಶಿವಪ್ರೀತಿಗಾಗಿ ಪ್ರತಿದಿನ ಯಥಾಶಕ್ತಿ ಬೆಳ್ಳಿ ॥೧೩೨॥ ಅಥವಾ ತಾಮ್ರವನ್ನು ಕೊಡುವವನು ರುದ್ರಭಕ್ತರಾದ ಸುರೂಪಿಗಳಾದ ಪುತ್ರರನ್ನು ಪಡೆಯುವನು. ॥೧೩೩॥ ವ್ರತಸಮಾಪ್ತಿಯ ದಿನ ಶ್ರೇಷ್ಠವಾದ ರಜತಪಾತ್ರೆಯಲ್ಲಿ ಜೇನುತುಪ್ಪವನ್ನು ತುಂಬಿ, ತಾಮ್ರಪಾತ್ರೆಯಾದರೆ ಗುಡವನ್ನು (ಬೆಲ್ಲ) ತುಂಬಿ ದಾನಮಾಡಬೇಕು. ॥೧೩೪॥ "ಹೇ ತಾಮ್ರವೇ, ನಿನ್ನ ಪಾತ್ರೆಯ ದಾನವು ಪುಷ್ಟಿಯನ್ನು ಕೊಡುವಂಥದಾಗಿದೆ. ದೇವರಿಗೆ ಪ್ರಿಯವನ್ನು ಹಾಗೂ ದೇವರ ಅನುಗ್ರಹವನ್ನುಂಟುಮಾಡುವಂಥದಾಗಿದೆ. ನಿತ್ಯ ಸರ್ವರೀತಿಯಿಂದ ರಕ್ಷೆಯನ್ನು ಕೊಡುವ ನೀನು ನನಗೆ ಮನಶ್ಶಾಂತಿಯನ್ನು ಕೊಡು" ಎಂದು ಪ್ರಾರ್ಥಿಸಬೇಕು. ॥೧೩೫॥ ಶ್ರೀಹೃಷೀಕೇಶನು ಮಲಗಿದ ಮೇಲೆ ತನ್ನ ಶಕ್ತ್ಯನುಸಾರ ತಿಲಸಹಿತ ಸ್ವರ್ಣದಾನ ಮಾಡುವವನು ಹಾಗೂ ಜೋಡುವಸ್ತ್ರಗಳನ್ನು ಕೊಡುವವನು ಎಲ್ಲದೋಷಗಳಿಂದ ಮುಕ್ತನಾಗುತ್ತಾನೆ. ॥೧೩೬॥

ಇಹ ಭುಕ್ತ್ವಾ ಮಹಾಭೋಗಾನಂತೇ ಶಿವಪುರಂ ವ್ರಜೇತ್ ।
ಸುವರ್ಣಂ ರಜತಂ ತಾಮ್ರಂ ನಿತ್ಯದಾನಂ ಚ ಧಾನ್ಯಕಮ್ ||೧೩೭||

ನಿತ್ಯಶ್ರಾದ್ಧಂ ದೇವಪೂಜಾ ಸರ್ವಮೇತತ್ಸದಕ್ಷಿಣಮ್ ।
ವಸ್ತ್ರದಾನಂ ತು ಯಃ ಕುರ್ಯಾಚ್ಚಾತುರ್ಮಾಸ್ಯೇ ದ್ವಿಜಾತಯೇ ||೧೩೮||

ಅಭ್ಯರ್ಚ್ಯ ಗಂಧಪುಷ್ಪಾದ್ಯೈಃ ಸ ವಿಷ್ಣುಃ ಪ್ರೀಯತಾಮಿತಿ ।
ಶಯ್ಯಾಂ ದದ್ಯಾತ್ಸಮಾಪ್ತೌ ತು ವಾಸಃ ಕಾಂಚನಪಟ್ಟಿಕಾಮ್ ||೧೩೯||

ಅಕ್ಷಯಂ ಸುಖಮಾಪ್ನೋತಿ ಧನಂ ಚ ಧನದೋಪಮಮ್ ।
ಯೋ ಗೋಪೀಚಂದನಂ ದದ್ಯಾನ್ನಿತ್ಯಂ ವರ್ಷಾಸು ಮಾನವಃ ||೧೪೦||

ಶ್ರೀಪತಿಸ್ತಸ್ಯ ಸಂತುಷ್ಟೋ ಮುಕ್ತಿಂ ಭುಕ್ತಿಂ ದದಾತಿ ಚ ।
ಯದ್ದೈ ದೇವಾಂಗಸಲ್ಲಗ್ನಂ ಕುಂಕುಮಾದಿವಿಲೇಪನಮ್ ||೧೪೧||

ಜಲಕ್ರೀಡಾಸು ಗೋಪೀನಾಂ ದ್ವಾರಾವತ್ಯಾಂ ಮೃದಾನ್ವಿತಮ್ ।
ಗೋಪೀಚಂದನಮಿತ್ಯುಕ್ತಂ ಮುನೀಂದ್ರೈಃ ಕಿಲ್ಬಿಷಾಪಹಮ್ ||೧೪೨||

ತಸ್ಮಾದ್ದೇಯಂ ಪ್ರಯತ್ನೇನ ವಿಷ್ಣುರ್ದಿಶತಿ ವಾಂಛಿತಮ್ ।
ಸಮಾಪ್ತಾವಪಿ ತದ್ದದ್ಯಾತ್ತುಲಾ ಪರಿಮಿತಂ ಶುಭಮ್ ||೧೪೩||

ಹಾಗೂ ಇಹಲೋಕದಲ್ಲಿ ಶ್ರೇಷ್ಠ ಭೋಗಗಳನ್ನು ಭೋಗಿಸಿ ಮರಣಾನಂತರ ಶಿವಲೋಕವನ್ನು ಸೇರುತ್ತಾನೆ. ಚಾತುರ್ಮಾಸ್ಯದಲ್ಲಿ ಪ್ರತಿದಿನ ದ್ವಿಜಶ್ರೇಷ್ಠನಿಗೆ ಕೊಡುವ ಸುವರ್ಣ, ರಜತ, ತಾಮ್ರ, ಧಾನ್ಯ, ವಸ್ತ್ರ ಇವೇ ಮೊದಲಾದವುಗಳ ದಾನಗಳು ದಕ್ಷಿಣಾಸಹಿತವಾಗಿರಬೇಕು. ಅದರಂತೆ ನಿತ್ಯಶ್ರಾದ್ಧ, ದೇವಪೂಜೆಗಳ ನಂತರವೂ ದ್ವಿಜಶ್ರೇಷ್ಠನಿಗೆ ದಕ್ಷಿಣೆಯನ್ನು ಕೊಡಬೇಕು. ||೧೩೮|| ಗಂಧ ಪುಷ್ಪಾದಿಗಳಿಂದ ಬ್ರಾಹ್ಮಣನನ್ನು ಪೂಜಿಸಿ "ನಾನು ಕೊಡುವ ದಾನದಿಂದ ವಿಷ್ಣುವು ಪ್ರೀತನಾಗಲೀ" ಎಂದು ಪ್ರಾರ್ಥಿಸುತ್ತ ಮೇಲಿನ ದಾನಗಳನ್ನು ಕೊಡಬೇಕು. ಸಮಾಪ್ತಿಯ ದಿನ ವಸ್ತ್ರ ಮತ್ತು ಸುವರ್ಣದ ಪಟ್ಟಿಯಿಂದ ಕೂಡಿದ ಶಯ್ಯಾವನ್ನು ದಾನ ಮಾಡಿದರೆ ||೧೩೯|| ಅಕ್ಷಯವಾದ ಸುಖವೂ ಮತ್ತು ಕುಬೇರನಿಗಿರುವಷ್ಟು ಧನವೂ ಪ್ರಾಪ್ತವಾಗುವದು. ಮಳೆಗಾಲದ ದಿನಗಳಲ್ಲಿ ನಿತ್ಯಗೋಪಿಚಂದನ ದಾನಮಾಡಿದರೆ ||೧೪೦|| ಅದರಿಂದ ಶ್ರೀಪತಿಯು ಪ್ರಸನ್ನನಾಗಿ ಭುಕ್ತಿ ಹಾಗೂ ಮುಕ್ತಿಗಳನ್ನು ದಯಪಾಲಿಸುವನು. ದೇವರ ಅಂಗಗಳಿಗೆ ಹತ್ತಿದ ಕುಂಕುಮಾದಿ ವಿಲೇಪನವನ್ನು ಹಾಗೂ ||೧೪೧|| ದ್ವಾರಕೆಯಲ್ಲಿ ಶ್ರೀಕೃಷ್ಣನೊಂದಿಗೆ ನಡೆದ ಜಲಕ್ರೀಡೆಗಳಲ್ಲಿ ಗೋಪಿಯರು ತುಳಿದ ಮಣ್ಣನ್ನು "ಗೋಪೀಚಂಡನ"ವೆಂದು ಮುನೀಂದ್ರರು ಕರೆದಿದ್ದಾರೆ. ಆದ್ದರಿಂದ ಸಕಲ ಪಾಪಗಳನ್ನು ಕಳೆಯುವ ||೧೪೨|| ಈ ಗೋಪೀಚಂಡನವನ್ನು ಪ್ರಯತ್ನಪೂರ್ವಕ ದಾನಮಾಡಬೇಕು. ಹೀಗೆ ದಾನಮಾಡುವದರಿಂದ ವಿಷ್ಣುವು ಇಷ್ಟಾರ್ಥವನ್ನು ಪೂರ್ಣಗೊಳಿಸುವನು. ಚಾತುರ್ಮಾಸ್ಯದ ಕೊನೆಯದಿನವೂ ಕೂಡ ೪೦೦ ತೊಲೆ ಭಾರದಷ್ಟು ||೧೪೩|| ಅಥವಾ ೨೦೦ ತೊಲೆ ಅಥವಾ

ತದರ್ಧಂ ವಾ ತದರ್ಧಂ ವಾ ಸವಸ್ತ್ರಂ ಚ ಸದಕ್ಷಿಣಮ್ ।
ಯಸ್ತು ಸುಪ್ತೇ ಹೃಷೀಕೇಶೇ ಪ್ರತ್ಯಹಂ ತು ವ್ರತಾನ್ವಿತಃ ॥೧೪೪॥

ದದ್ಯಾದ್ದಕ್ಷಿಣಯಾ ಸಾರ್ಧಂ ಶರ್ಕರಾಮಪಿ ವಾ ಗುಡಮ್ ।
ಅಮೃತಸ್ಯ ಕಲಾ ಪ್ರೋಕ್ತಾ ಇಕ್ಷುಸಾರಜಶರ್ಕರಾ ॥೧೪೫॥

ತಸ್ಯಾ ದಾನೇನ ಸಂತುಷ್ಟೋ ಭಾನುರ್ದಿಶತಿ ವಾಂಛಿತಮ್ ।
ಏವಂ ವ್ರತೇ ತು ಸಂಪೂರ್ಣೇ ಕುರ್ಯಾದುದ್ಯಾಪನಂ ಬುಧಃ ॥೧೪೬॥

ಕಾರಯೇತ್ತಾಮ್ರಪಾತ್ರಾಣಿ ಪ್ರತ್ಯೇಕಂ ತು ಪಲಾಷ್ಟಕಮ್ ।
ವಿತ್ತಶಾಠ್ಯಮಕುರ್ವಾಣೋ ಯದ್ವಾ ಪಲಚತುಷ್ಟಯಮ್ ॥೧೪೭॥

ಅಷ್ಟೌ ಚತ್ವಾರ್ಯಥೈಕೈಕಂ ಪ್ರತ್ಯೇಕಂ ಚ ಸಶರ್ಕರಾಮ್ ।
ದಕ್ಷಿಣಾಫಲವಸ್ತ್ರೇಣ ಪ್ರತ್ಯೇಕಂ ವೇಷ್ಟಿತಾನಿ ಚ ॥೧೪೮॥

ಸಹ ಧಾನ್ಯಾನಿ ವಿಪ್ರೇಭ್ಯಃ ಶ್ರದ್ಧಯಾ ಪ್ರತಿಪಾದಯೇತ್ ।
ತಾಮ್ರಪಾತ್ರಂ ಸವಸ್ತ್ರಂ ಚ ಶರ್ಕರಾಹೇಮಸಂಯುತಮ್ ॥೧೪೯॥

ಸೂರ್ಯಪ್ರೀತಿಕರಂ ಯಸ್ಮಾದ್ಗೋಘ್ನಂ ಪಾಪವಿನಾಶನಮ್ ।
ಪುಷ್ಟಿದಂ ಕೀರ್ತಿದಂ ನೃಣಾಂ ನಿತ್ಯಂ ಸಂತಾನಕಾರಕಮ್ ॥೧೫೦॥

---

೧೦೦ ತೊಲೆ ಭಾರದಷ್ಟಾದರೂ ಗೋರೋಚಂದನವನ್ನು ವಸ್ತ್ರ ಹಾಗೂ ದಕ್ಷಿಣೆಸಹಿತ ಬ್ರಾಹ್ಮಣನಿಗೆ ದಾನಮಾಡಬೇಕು. ಶ್ರೀಹರಿ ಹೃಷೀಕೇಶನು ಮಲಗಿದ ನಂತರ ವ್ರತಾನ್ವಿತನಾದ ಯಾವನು ಪ್ರತಿದಿನ ॥೧೪೪॥ ದಕ್ಷಿಣೆಯೊಂದಿಗೆ ಸಕ್ಕರೆ ಅಥವಾ ಬೆಲ್ಲ ಅಥವಾ ಕಬ್ಬಿನರಸದಿಂದಾದ ಸಕ್ಕರೆ ಎಂಬ "ಅಮೃತಕಲೆ" ಇವುಗಳನ್ನು ॥೧೪೫॥ ದಾನಮಾಡುವನೋ ಆ ದಾನದಿಂದ ಪ್ರೀತನಾದ ಸೂರ್ಯನು ದಾನಿಗೆ ವಾಂಛಿತಾರ್ಥವನ್ನು ಕೊಡುವನು. ಈ ಪ್ರಕಾರ ವ್ರತವು ಸಂಪೂರ್ಣವಾಗಲು ವ್ರತಿಯು ಉದ್ಯಾಪನೆಯನ್ನು ಮಾಡಬೇಕು. ॥೧೪೬॥ ಯಾವ ವಿತ್ತಶಾಠ್ಯವಿಲ್ಲದವನಾಗಿ ೮ ಪಲ ತೂಕದ ಅಥವಾ ೪ ಪಲ ಭಾರದ ತಾಮ್ರದ ಪಾತ್ರೆಗಳನ್ನು ಮಾಡಿಸಬೇಕು. ॥೧೪೭॥ ಪ್ರತಿಯೊಂದು ಇಷ್ಟು ತೂಕದ ಒಟ್ಟು ೮ ಪಾತ್ರೆಗಳನ್ನಾಗಲೀ ಅಥವಾ ೪ ಪಾತ್ರೆಗಳನ್ನಾಗಲೀ ಅಥವಾ ಕೊನೆಗೆ ಒಂದು ಪಾತ್ರೆಯನ್ನಾದರೂ ಮಾಡಿಸಿ ಪ್ರತಿಯೊಂದು ಪಾತ್ರೆಯಲ್ಲಿ ಶರ್ಕರಾ, ದಕ್ಷಿಣೆ, ಫಲಗಳನ್ನಿಟ್ಟು ಮೇಲೆ ವಸ್ತ್ರಗಳಿಂದ ಹೊದಿಸಿ ॥೧೪೮॥ ವಿವಿಧ ಧಾನ್ಯಗಳೊಂದಿಗೆ ಬ್ರಾಹ್ಮಣರಿಗೆ ಶ್ರದ್ಧೆಯಿಂದ ದಾನಮಾಡಬೇಕು. "ಶರ್ಕರಾ, ಸುವರ್ಣ ಹಾಗೂ ವಸ್ತ್ರಗಳಿಂದ ಕೂಡಿದ ತಾಮ್ರಪಾತ್ರೆಯ ದಾನವು ಸೂರ್ಯನಿಗೆ ಪ್ರೀತಿಯನ್ನುಂಟು ಮಾಡುವುದಾಗಿದೆ. ಗೋಹತ್ಯೆಯ ಪಾಪನಾಶಕವಾಗಿದೆ, ದಾನಿಗೆ ಪುಷ್ಟಿ, ಕೀರ್ತಿ ಹಾಗೂ ಸಂತಾನಗಳನ್ನು ಕೊಡುವಂಥದಾಗಿದೆ. ॥೧೪೯॥ ॥೧೫೦॥ ಸರ್ವಕಾಮನೆಗಳನ್ನು ಪೂರ್ತಿಮಾಡುವಂಥದೂ, ಸ್ವರ್ಗಲೋಕಪ್ರದವೂ, ಆಯುಷ್ಯನ್ನು ವರ್ಧಿಸುವಂಥದೂ ಆಗಿ[illegible]ವ

ಸರ್ವಕಾಮಪ್ರದಂ ಸ್ವರ್ಗ್ಯಮಾಯುರ್ವರ್ಧನಮುತ್ತಮಮ್ ।
ತಸ್ಮಾದಸ್ಯ ಪ್ರದಾನೇನ ಕೀರ್ತಿರಸ್ತು ಸದಾ ಮಮ ॥೧೫೧॥

ಏವಂ ವ್ರತಂ ತು ಯಃ ಕುರ್ಯಾತ್ತಸ್ಯ ಪುಣ್ಯಫಲಂ ಶೃಣು ।
ಗಂಧರ್ವವಿದ್ಯಾಸಂಪನ್ನಃ ಸರ್ವಯೋಷಿತ್ಪ್ರಿಯೋ ಭವೇತ್ ॥೧೫೨॥

ರಾಜಾಪಿ ಲಭತೇ ರಾಜ್ಯಂ ಪುತ್ರಾರ್ಥಿ ಲಭತೇ ಸುತಾನ್ ।
ಅರ್ಥಾರ್ಥೀ ಪ್ರಾಪ್ನುಯಾದರ್ಥಂ ನಿಷ್ಕಾಮೋ ಮೋಕ್ಷಮಾಪ್ನುಯಾತ್ ॥೧೫೩॥

ಯಸ್ತು ವೈ ಚತುರೋ ಮಾಸಾನ್ ಶಾಕಮೂಲಫಲಾದಿಕಮ್ ।
ನಿತ್ಯಂ ದದಾತಿ ವಿಪ್ರೇಭ್ಯಃ ಶಕ್ತ್ಯಾ ಯತ್ಸಂಭವೇನ್ನೃಪ ॥೧೫೪॥

ವ್ರತಾಂತೇ ವಸ್ತ್ರಯುಗ್ಮಂ ಚ ಶಕ್ತ್ಯಾ ದದ್ಯಾತ್ಸದಕ್ಷಿಣಮ್ ।
ಸುಖೀ ಭೂತ್ವಾ ಚಿರಂ ಕಾಲಂ ರಾಜಯೋಗೀ ಭವೇನ್ನರಃ ॥೧೫೫॥

ಸರ್ವದೇವಪ್ರಿಯಂ ಯಸ್ಮಾಚ್ಛಾಕಂ ತೃಪ್ತಿಕರಂ ನೃಣಾಮ್ ।
ದೇವರ್ಷಿಪ್ರೀತಿದಂ ಕಂದಮೂಲಪತ್ರಸಪುಷ್ಪಕಮ್ ॥೧೫೬॥

ದದಾಮಿ ತೇನ ದೇವಾದ್ಯಾಃ ಸದಾ ಕುರ್ವಂತು ಮಂಗಲಮ್ ।
ಯಸ್ತು ಸುಪ್ತೇ ಹೃಷೀಕೇಶೇ ಪ್ರತ್ಯಹಂ ತು ಋತುದ್ವಯೇ ॥೧೫೭॥

---

ಅತಿಶ್ರೇಷ್ಠವಾದ ವ್ರತವಾಗಿದೆ. ಆದ್ದರಿಂದ ಈ ತಾಮ್ರಪಾತ್ರೆಯ ದಾನದಿಂದ ನನಗೆ ಸದಾ ಕೀರ್ತಿಯು ಲಭಿಸಲಿ" ಎಂದು ಪ್ರಾರ್ಥಿಸುತ್ತ ದಾನವನ್ನು ಕೊಡಬೇಕು. ॥೧೫೧॥ ಹೇ ಧರ್ಮರಾಜಾ, ಈ ಪ್ರಕಾರ ಚಾತುರ್ಮಾಸ್ಯವ್ರತವನ್ನು ಯಾವನು ಆಚರಿಸುವನೋ ಅವನ ಪುಣ್ಯಫಲವನ್ನು ತಿಳಿಸುವೆನು ಕೇಳು. ಅವನು ಗಂಧರ್ವವಿದ್ಯೆಯನ್ನು ಪಡೆದು ಸರ್ವಕನ್ಯೆಯರಿಗೆ ಪ್ರಿಯನಾಗುವನು. ॥೧೫೨॥ ರಾಜನಾಗಿದ್ದವನು ಅಧಿಕವಾದ ರಾಜ್ಯವನ್ನು ಹೊಂದುವನು. ಪುತ್ರಾರ್ಥಿಯು ಮಕ್ಕಳನ್ನು ಪಡೆಯುವನು. ದ್ರವ್ಯಾರ್ಥಿಯು ದ್ರವ್ಯವನ್ನೂ, ನಿಷ್ಕಾಮಿಯು ಮೋಕ್ಷವನ್ನೂ ಪಡೆಯುವರು. ॥೧೫೩॥ ಚಾತುರ್ಮಾಸ್ಯದಲ್ಲಿ ಯಾವನು ನಿತ್ಯ ಬ್ರಾಹ್ಮಣರಿಗೆ ಯಥಾಶಕ್ತಿ ಶಾಖ, ಮೂಲ, ಫಲಾದಿಗಳನ್ನು ಕೊಡುವನೋ ಮತ್ತು ॥೧೫೪॥ ವ್ರತಾಂತದಲ್ಲಿ ದಕ್ಷಿಣಾಸಹಿತವಾಗಿ ಜೋಡುವಸ್ತ್ರಗಳನ್ನು ಕೊಡುವನೋ ಅವನು ಚಿರಕಾಲ ಸುಖಿಯಾಗಿದ್ದು ರಾಜಯೋಗಿಯಾಗುವನು. ॥೧೫೫॥ "ಸರ್ವದೇವತೆಗಳಿಗೆ ಪ್ರಿಯವಾದ, ಮನುಷ್ಯರಿಗೆ ತೃಪ್ತಿಯನ್ನು ಕೊಡುವ, ದೇವರ್ಷಿಗಳಿಗೆ ಪ್ರೀತಿಯನ್ನುಂಟು ಮಾಡುವ ಕಂದ, ಮೂಲ, ಪತ್ರ ಹಾಗೂ ಪುಷ್ಪಗಳನ್ನು ಬ್ರಾಹ್ಮಣರಿಗೆ ॥೧೫೬॥ ದಾನವಾಗಿ ಕೊಡುವೆನು. ಇದರಿಂದ ದೇವಾದಿಗಳೆಲ್ಲರೂ ಸದಾಕಾಲ ನನಗೆ ಮಂಗಳವನ್ನುಂಟು ಮಾಡಲಿ. ಚಾತುರ್ಮಾಸ್ಯದ ಎರಡು ಋತುಗಳಲ್ಲಿ (ವರ್ಷಾಋತು, ಶರದೃತು) ಶ್ರೀಹೃಷೀಕೇಶನು ಮಲಗಿಕೊಂಡಾಗ ॥೧೫೭॥

ದದ್ಯಾತ್ಕಟುತ್ರಯಂ ಮರ್ತ್ಯೋ ಗೃಹಪರ್ಯಾಪ್ತಮಾದರಾತ್ ।
ಬ್ರಾಹ್ಮಣಾಯ ಸುಶೀಲಾಯ ದಿನೇಶಪ್ರೀತಯೇऽನಘ ॥೧೫೮॥

ದಕ್ಷಿಣಾಸಹಿತಂ ವಿಪ್ರಂ ಮಂತ್ರೇಣಾನೇನ ಸುವ್ರತ ।
ಕಟುತ್ರಯಮಿದಂ ಯಸ್ಮಾದ್ರೋಗಘ್ನಂ ಸರ್ವದೇಹಿನಾಮ್ ॥೧೫೯॥

ತಸ್ಮಾದಸ್ಯ ಪ್ರದಾನೇನ ಪ್ರೀತೋ ಭವತು ಭಾಸ್ಕರಃ ।
ಏವಂ ಕೃತ್ವಾ ವ್ರತಂ ಸಮ್ಯಕ್ ಕುರ್ಯಾದುದ್ಯಾಪನಂ ಬುಧಃ ॥೧೬೦॥

ಕೃತ್ವಾ ಸ್ವರ್ಣಮಯೀಂ ಶುಂಠೀಂ ಮರೀಚಂ ಮಾಗಧೀಮಪಿ ।
ಸವಸ್ತ್ರಾಂ ದಕ್ಷಿಣಾಯುಕ್ತಾಂ ದದ್ಯಾದ್ವಿಪ್ರಾಯ ಧೀಮತೇ ॥೧೬೧॥

ಏವಂ ವ್ರತಂ ಯಃ ಕುರುತೇ ಸ ಜೀವೇಚ್ಛರದಾಂ ಶತಮ್ ।
ಪ್ರಾಪ್ನುಯಾದೀಪ್ಸಿತಾನರ್ಥಾನಂತೇ ಸ್ವರ್ಗಂ ವ್ರಜೇದಿತಿ ॥೧೬೨॥

ಮುಕ್ತಾಫಲಾನಿ ಯೋ ದದ್ಯಾನ್ನಿತ್ಯಂ ವಿಪ್ರಾಯ ಸನ್ಮತಿಃ ।
ಅನ್ನವಾನ್ ಕೀರ್ತಿಮಾನ್ ಶ್ರೀಮಾನ್ ಜಾಯತೇ ವಸುಧಾಧಿಪ ॥೧೬೩॥

ಚಾತುರ್ಮಾಸ್ಯೇ ಪ್ರತ್ಯಹಂ ತಂ ಕ್ಷೀರಕುಂಭಂ ಪ್ರದಾಪಯೇತ್ ।
ವೇಷ್ಟಯಿತ್ವಾ ಸುವಸ್ತ್ರೇಣ ಫಲೈರ್ದಕ್ಷಿಣಯಾ ಸಹ ॥೧೬೪॥

---

ಶ್ರೀಹರಿಯ ಪ್ರೀತ್ಯರ್ಥವಾಗಿ ಸುಶೀಲನಾದ ಬ್ರಾಹ್ಮಣನಿಗೆ ನಿತ್ಯ ಅವನ ಅಡಿಗೆಗೆ ಬೇಕಾಗುವಷ್ಟು ಕಟುತ್ರಯವನ್ನು (ಶುಂಠಿ, ಮೆಣಸು ಮತ್ತು ಹಿಪ್ಪಲಿ) ಆದರದಿಂದ ॥೧೫೮॥ ದಕ್ಷಿಣಾ ಸಹಿತವಾಗಿ - "ಈ ಕಟುತ್ರಯವೇನಿದೆಯೋ ಇದು ಎಲ್ಲ ಪ್ರಾಣಿಗಳ ರೋಗಗಳನ್ನು ಕಳೆಯುವಂಥದಾಗಿದೆ. ॥೧೫೯॥ ಆದ್ದರಿಂದ ಇದರ ದಾನದಿಂದ ಭಾಸ್ಕರನು ಪ್ರೀತನಾಗಲಿ" ಎಂದು ಪ್ರಾರ್ಥಿಸುತ್ತ ದಾನ ಮಾಡಬೇಕು. ಈ ಪ್ರಕಾರ ವ್ರತವನ್ನು ಮಾಡಿ ಉದ್ಯಾಪನೆಯನ್ನು ಮಾಡಬೇಕು. ॥೧೬೦॥ ಉದ್ಯಾಪನೆಯ ದಿನ ಸುವರ್ಣದಿಂದ ಶುಂಠಿ, ಮೆಣಸು, ಹಿಪ್ಪಲಿ ಇವುಗಳನ್ನು ಮಾಡಿ ವಸ್ತ್ರ ಹಾಗೂ ದಕ್ಷಿಣೆಗಳೊಂದಿಗೆ ಜ್ಞಾನಿಯಾದ ಬ್ರಾಹ್ಮಣನಿಗೆ ದಾನವಾಗಿ ಕೊಡಬೇಕು. ॥೧೬೧॥ ಈ ಪ್ರಕಾರ ವ್ರತವನ್ನು ಆಚರಿಸುವವನು ೧೦೦ ವರ್ಷಗಳ ವರೆಗೆ ಜೀವಿಸುವನು ಮತ್ತು ಇಷ್ಟಾರ್ಥಗಳನ್ನು ಪಡೆದು ಕೊನೆಗೆ ಸ್ವರ್ಗಲೋಕವನ್ನು ಸೇರುವನು. ॥೧೬೨॥ ಇನ್ನು ಚಾತುರ್ಮಾಸ್ಯದಲ್ಲಿ ನಿತ್ಯ ಬ್ರಾಹ್ಮಣನಿಗೆ ಮುತ್ತಿನದಾನ ಮಾಡುವ ಸುಮತಿಯು ಅನ್ನ ಉಳ್ಳವನೂ, ಕೀರ್ತಿವಂತನೂ, ಶ್ರೀಮಂತನೂ ಆಗುವನಲ್ಲದೇ ಮರುಜನ್ಮದಲ್ಲಿ ಭೂಪಾಲನಾಗುವನು. ॥೧೬೩॥ ಚಾತುರ್ಮಾಸ್ಯದಲ್ಲಿ ಪ್ರತಿದಿನ ಒಂದು ಕ್ಷೀರಕುಂಭಕ್ಕೆ (ಹಾಲಿನ ಕೊಡ) ಉತ್ತಮವಾದ ವಸ್ತ್ರವನ್ನು ಸುತ್ತಿ ಫಲಗಳು ಹಾಗೂ ದಕ್ಷಿಣೆಯೊಂದಿಗೆ ದಾನಮಾಡಬೇಕು. ॥೧೬೪॥ ಒಬ್ಬ ಮುತ್ತೈದೆಯನ್ನು ಲಕ್ಷ್ಮೀ ಎಂದು ತಿಳಿದು

ಸುವಾಸಿನೀಂ ಶ್ರಿಯಂ ಮತ್ವಾ ಗಂಧಪುಷ್ಪೈರಥಾರ್ಚಯೇತ್ ।
ತಾಂಬೂಲಂ ಫಲಮೇಕಂ ವಾ ದದ್ಯಾಚ್ಛ್ರೀಪತಯೇ ನಮಃ ॥೧೬೫॥

ಸಮಾಪ್ತೌ ಯೋಷಿತಂ ವಿಪ್ರಂ ಸೂಕ್ಷ್ಮವಸ್ತ್ರವಿಭೂಷಣೈಃ ।
ಮಿಥುನಂ ಪೂಜಯಿತ್ವಾ ತು ಜಾತಿಪುಷ್ಪೈಃ ಸುಶೋಭನೈಃ ॥೧೬೬॥

ಪುಮಾಂಸ್ತು ಸ್ತ್ರಿಯಮಾಪ್ನೋತಿ ನಾರೀ ಭರ್ತಾರಮಾಪ್ನುಯಾತ್ ।
ಪುಮಾಂಸ್ತು ಶ್ರಿಯಮಾಪ್ನೋತಿ ಸಕಲಾಮಿವ ಮಾಧವಃ ॥೧೬೭॥

ತಾಂಬೂಲದಾನಂ ಯಃ ಕುರ್ಯಾದ್ಧ್ವರ್ಜಯೇದ್ವಾ ಜಿತೇಂದ್ರಿಯಃ ।
ರಕ್ತವಸ್ತ್ರದ್ವಯಂ ದದ್ಯಾತ್ ಕರಕಂ ಚ ಸದಕ್ಷಿಣಮ್ ॥೧೬೮॥

ಮಹಾಲಾವಣ್ಯಮಾಪ್ನೋತಿ ಸರ್ವರೋಗವಿವರ್ಜಿತಃ ।
ಮೇಧಾವೀ ಸುಭಗಃ ಪ್ರಾಜ್ಞೋ ರಕ್ತಕಂಠಶ್ಚ ಜಾಯತೇ ॥೧೬೯॥

ಗಂಧರ್ವತ್ವಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ।
ತಾಂಬೂಲಂ ಶ್ರೀಕರಂ ಭದ್ರಂ ಬ್ರಹ್ಮವಿಷ್ಣುಶಿವಾತ್ಮಕಮ್ ॥೧೭೦॥

---

ಅವಳಿಗೆ ಗಂಧವನ್ನು ಹಚ್ಚಿ ಹೂವುಗಳನ್ನು ಮುಡಿಸಿ ಪೂಜಿಸಬೇಕು. "ಶ್ರೀಪತಯೇ ನಮಃ" ಎಂದು ಹೇಳುತ್ತ ತಾಂಬೂಲ ಅಥವಾ ಒಂದು ಫಲ(ಟೆಂಗಿನಕಾಯಿ)ವನ್ನು ದಂಪತಿಗಳಿಬ್ಬರಿಗೂ ಕೊಡಬೇಕು. ॥೧೬೫॥ ಕೊನೆಯದಿನ ಆ ದಂಪತಿಗಳಿಗೆ ರೇಷ್ಮೆವಸ್ತ್ರ ಆಭರಣಾದಿಗಳನ್ನು ಕೊಟ್ಟು ಘಮಘಮಿಸುವ ಜಾತಿಪುಷ್ಪಗಳಿಂದ ಅವರನ್ನು ಪೂಜಿಸಬೇಕು. ॥೧೬೬॥ ಹೀಗ ಮಾಡುವುದರಿಂದ ಪುರುಷನು ಕನ್ಯೆಯನ್ನೂ, ಕನ್ಯೆಯು ಪತಿಯನ್ನೂ ಪಡೆಯುವರು ಮತ್ತು ಶ್ರೀಹರಿ ಮಾಧವನು ಕಲಾಸಹಿತ ಲಕ್ಷ್ಮೀಯನ್ನು ಹೊಂದುವಂತೆ ಪುರುಷನು ಅಧಿಕವಾದ ಸಂಪತ್ತನ್ನು ಪಡೆಯುವನು. ॥೧೬೭॥ ಇನ್ನು ನಿತ್ಯ ತಾಂಬೂಲದಾನವನ್ನು ಮಾಡುವವನು ಮತ್ತು ಜಿತೇಂದ್ರಿಯನಾಗಿ ತಾಂಬೂಲಸೇವನೆಯನ್ನು ಬಿಟ್ಟಿರುವವನು ಕೊನೆಯದಿನ ಕೆಂಪು ಬಣ್ಣದ ಎರಡು ವಸ್ತ್ರಗಳನ್ನು, ದಾಳಿಂಬ (ಕರಕಃ) ಹಣ್ಣುಗಳನ್ನು ದಕ್ಷಿಣಾಸಹಿತ ಕೊಟ್ಟರೆ ॥೧೬೮॥ ಅವನು ಸರ್ವರೋಗಗಳಿಂದ ಮುಕ್ತನಾಗುವನು, ಅತಿಯಾದ ಸೌಂದರ್ಯವನ್ನು ಹೊಂದುವನು. ಮೇಧಾವಿಯೂ, ಸುಭಗನೂ, ಪ್ರಾಜ್ಞನೂ, ರಕ್ತಕಂಠನೂ (ರಕ್ತವರ್ಣದಿಂದ ಕಾಂತಿಯುತವಾದ ಕಂಠವುಳ್ಳವನೂ) ಆಗುವನು. ॥೧೬೯॥ ಮುಂದಿನ ಜನ್ಮದಲ್ಲಿ ಗಂಧರ್ವತ್ವವನ್ನು ಹೊಂದಿ ಸ್ವರ್ಗಲೋಕದಲ್ಲಿ ವಾಸಿಸುವನು. "ಸಂಪತನ್ನು ಕೊಡುವ ಈ ತಾಂಬೂಲವು ಕ್ಷೇಮಕಾರಿಯಾಗಿದೆ, ಬ್ರಹ್ಮವಿಷ್ಣುಮಹೇಶ್ವರರ ಪ್ರತಿನಿಧಿಯಾಗಿದೆ. ॥೧೭೦॥ ಇದನ್ನು ದಾನಮಾಡುವದರಿಂದ ಬ್ರಹ್ಮಾದಿ ದೇವತೆಗಳು ನನಗೆ ಬಹಳವಾದ ಸಂಪತ್ತನ್ನು

ಅಸ್ಯ ಪ್ರದಾನಾತ್‌ಬ್ರಹ್ಮಾದ್ಯಾಃ ಶ್ರಿಯಂ ದದತು ಪುಷ್ಕಲಾಮ್
ಪೂಗೇ ಬ್ರಹ್ಮಾ ಹರಿಃ ಪತ್ರೇ ಚೂರ್ಣೇ ಸಾಕ್ಷಾನ್ಮಹೇಶ್ವರಃ ॥೧೭೧॥

ಏತೇಷಾಂ ಸಂಪ್ರದಾನೇನ ಸಂತು ಮೇ ಭಾಗ್ಯಸಂಪದಃ ।
ಪೂಜಿತಂ ಪೂಗಚೂರ್ಣೇನ ನಾಗವಲ್ಲೀ ದಲಾನ್ವಿತಮ್ ॥೧೭೨॥

ಸಚೂರ್ಣಂ ಖಾದಿರಂ ಚೈವ ಪತ್ರೀಫಲಸಮನ್ವಿತಮ್ ।
ಏಲಾಲವಂಗಸಂಮಿಶ್ರಂ ಗಂಧರ್ವಾಪ್ಸರಸಾಂ ಪ್ರಿಯಮ್ ॥೧೭೩॥

ಕನಕಾಢ್ಯಂ ನಿರಾತಂಕಂ ತ್ವಂ ಪ್ರಸಾದಾತ್ಕುರುಷ್ವ ಮಾಮ್ ।
ಚಾತುರ್ಮಾಸ್ಯವ್ರತೋಪೇತಃ ಸುವಾಸಿನ್ಯೈ ದ್ವಿಜಾಯ ಚ ॥೧೭೪॥

ನಾರೀ ವಾ ಪುರುಷೋ ವಾಪಿ ಹರಿದ್ರಾಂ ಸಂಪ್ರಯಚ್ಛತಿ ।
ಲಕ್ಷ್ಮೀಮುದ್ದಿಶ್ಯ ಗೌರೀಂ ವಾ ತತ್ಪಾತ್ರೇ ದಕ್ಷಿಣಾನ್ವಿತಮ್ ॥೧೭೫॥

ಪ್ರದದ್ಯಾದ್ಭಕ್ತಿಸಂಯುಕ್ತೋ ದೇವೀ ಮೇ ಪ್ರೀಯತಾಮಿತಿ ।
ಭರ್ತ್ರಾ ಸಹ ಸುಖಂ ಭುಂಕ್ತೇ ನಾರೀ ನಾರ್ಯಾ ತಥಾ ಪುಮಾನ್ ॥೧೭೬॥

ಸೌಭಾಗ್ಯಮಕ್ಷಯಂ ಧಾನ್ಯಂ ಧನಂ ಪುತ್ರಸಮುನ್ನತಿಮ್ ।
ಸಂಪ್ರಾಪ್ಯ ರೂಪಲಾವಣ್ಯಂ ದೇವಲೋಕೇ ಮಹೀಯತೇ ॥೧೭೭॥

---

ಕೊಡಲಿ. ಅಡಿಕೆಯಲ್ಲಿ ಬ್ರಹ್ಮನೂ, ವೀಳ್ಯದೆಲೆಯಲ್ಲಿ ವಿಷ್ಣುವೂ ಹಾಗೂ ಸುಣ್ಣದಲ್ಲಿ ಸಾಕ್ಷಾತ್ ಶಿವನೂ ವಾಸವಾಗಿರುವರು. ॥೧೭೧॥ ಇವರ ಸಂಪ್ರದಾನದಿಂದ ನನಗೆ ಸೌಭಾಗ್ಯ ಸಂಪತ್ತುಗಳು ಲಭಿಸಲಿ. ಅಡಿಕೆಯ ಪುಡಿ, ಸುಣ್ಣ, ಕಾಚು (ಖಾದಿರ) ಪತ್ರೀಫಲ (ಜಾಜಿಕಾಯಿ, ಪತ್ರಿ), ಏಲಕ್ಕಿ ಹಾಗೂ ಲವಂಗ ಇವುಗಳನ್ನು ಹಾಕಿದ ಎರಡು ವೀಳ್ಯದೆಲೆಗಳನ್ನು ನಾನು ಪೂಜಿಸಿದ್ದೇನೆ. ಇವೆಲ್ಲ ಗಂಧರ್ವ ಹಾಗೂ ಅಪ್ಸರೆಯರಿಗೆ ಅತ್ಯಂತ ಪ್ರಿಯವಾಗಿವೆ. ॥೧೭೨॥ ॥೧೭೩॥ ಹೇ ಶ್ರೀಹರೇ, ಇದರಿಂದ ಪ್ರೀತನಾಗಿ ನನಗೆ ವಿಪುಲವಾದ ಸುವರ್ಣವನ್ನು ಕೊಟ್ಟು, ನನಗಾವ ಆಪತ್ತುಗಳೂ ಬಾರದಂತೆ ಅನುಗ್ರಹಿಸು" ಎಂದು ಪ್ರಾರ್ಥಿಸಬೇಕು. ಚಾತುರ್ಮಾಸ್ಯವ್ರತವನ್ನು ಧಾರಣಮಾಡಿದವನು ಬ್ರಾಹ್ಮಣಸುವಾಸಿನಿಯರಲ್ಲಿ ಲಕ್ಷ್ಮೀನಾರಾಯಣರನ್ನು ಅಥವಾ ಶಿವಪಾರ್ವತಿಯರನ್ನು ಅನುಸಂಧಾನ ಮಾಡಿಕೊಂಡು ದಕ್ಷಿಣಾಸಹಿತ ಕುಂಕುಮ ದಾನಮಾಡಬೇಕು. ॥೧೭೪॥ ॥೧೭೫॥ "ದೇವಿಯು ನನ್ನಲ್ಲಿ ಪ್ರೀತಳಾಗಲಿ" ಎಂದು ಪ್ರಾರ್ಥಿಸುತ್ತ ಪುರುಷನೇ ಆಗಲೀ, ಸ್ತ್ರೀಯೇ ಆಗಲೀ ಬ್ರಾಹ್ಮಣ ಸುವಾಸಿನಿಯರಿಗೆ ಭಕ್ತಿಯಿಂದ ಕುಂಕುಮ ದಾನಮಾಡಿದರೆ ಸ್ತ್ರೀಯಾಗಿದ್ದರೆ ಪತಿಸುಖವನ್ನೂ, ಪುರುಷನಾಗಿದ್ದರೆ ಪತ್ನೀಸುಖವನ್ನೂ ಪಡೆಯುವರು. ॥೧೭೬॥ ಹಾಗೂ ಅಕ್ಷಯವಾದ ಸೌಭಾಗ್ಯ, ಧನ, ಧಾನ್ಯ, ಲಾವಣ್ಯ, ಪುತ್ರರ ಅಭಿವೃದ್ಧಿ ಅಥವಾ ಸಂತಾನಾಭಿವೃದ್ಧಿಗಳನ್ನು ಹೊಂದಿ ದೇವಲೋಕದಲ್ಲಿ ಶೋಭಿಸುವರು. ॥೧೭೭॥ ಚಾತುರ್ಮಾಸ್ಯದಲ್ಲಿ ಉಮಾಮಹೇಶ್ವರರನ್ನು ಉದ್ದೇಶಿಸಿ ಪ್ರತಿದಿನ

ಉಮಾಮಹೇಶಮುದ್ದಿಶ್ಯ ಚಾತುರ್ಮಾಸ್ಯೇ ದಿನೇ ದಿನೇ ।
ಸಂಪೂಜ್ಯ ವಿಪ್ರಮಿಥುನಂ ತಸ್ಮೈ ವಿಪ್ರಾಯ ಶಕ್ತಿತಃ ॥೧೭೮॥

ದದ್ಯಾತ್ಸದಕ್ಷಿಣಂ ಹೇಮಮುಮೇಶಃ ಪ್ರೀಯತಾಮಿತಿ ।
ಉಮೇಶಪ್ರತಿಮಾಂ ಹೈಮೀಂ ದದ್ಯಾದುದ್ಯಾಪನೇ ಬುಧಃ ॥೧೭೯॥

ಪಂಚೋಪಚಾರೈಃ ಸಂಪೂಜ್ಯ ಧೇನುಂ ಸವೃಷಭಾಂ ನರಃ ।
ಭೋಜಯೇದಪಿ ಮಿಷ್ಟಾನ್ನಂ ತಸ್ಯ ಪುಣ್ಯಫಲಂ ಶೃಣು ॥೧೮೦॥

ಸೌಭಾಗ್ಯಂ ಪೂರ್ಣಮಾಯುಷ್ಯಂ ಸಂಪತ್ತಿಶ್ಚಾನಪಾಯಿನೀ ।
ಸಂತತಿಶ್ಚಾಕ್ಷಯಾ ಕೀರ್ತಿರ್ಜಾಯತೇ ವ್ರತವೈಭವಾತ್ ॥೧೮೧॥

ಇಹ ಭುಕ್ತ್ವಾಽಖಿಲಾನ್ಕಾಮಾನಂತೇ ಶಿವಪುರಂ ವ್ರಜೇತ್ ।
ತತ್ರ ಸ್ಥಿತ್ವಾ ಚಿರಂ ಕಾಲಮುಪಭುಜ್ಯ ಸುಖಂ ಮಹತ್ ॥೧೮೨॥

ಪುಣ್ಯಶೇಷಾದಿಹಾಗತ್ಯ ಜಾಯತೇ ಧರಣೀಪತಿಃ ।
ಫಲದಾನಂ ತು ಯಃ ಕುರ್ಯಾಚ್ಚಾತುರ್ಮಾಸ್ಯಮತಂದ್ರಿತಃ ॥೧೮೩॥

ಸಮಾಪ್ತೌ ಕಲಧೌತಾನಿ ತಾನಿ ದದ್ಯಾದ್ದ್ವಿಜಾತಯೇ ।
ಸರ್ವಾನ್ಮನೋರಥಾನ್ ಪ್ರಾಪ್ಯ ಸಂತತಿಂ ಚಾನಪಾಯಿನೀಮ್ ॥೧೮೪॥

---

ಬ್ರಾಹ್ಮಣದಂಪತಿಗಳನ್ನು ಪೂಜಿಸಿ ॥೧೭೮॥ "ಉಮೇಶನು ಪ್ರೀತನಾಗಲಿ" ಎಂದು ಪ್ರಾರ್ಥಿಸುತ್ತ ಆ ದಂಪತಿಗೆ ತನ್ನ ಶಕ್ತ್ಯನುಸಾರ ಸುವರ್ಣವನ್ನು ದಕ್ಷಿಣಾಸಹಿತ ದಾನಮಾಡಬೇಕು. ಉದ್ಯಾಪನೆಯ ದಿನ ಸುವರ್ಣದಿಂದ ನಿರ್ಮಿತವಾದ ಉಮೇಶನ ಪ್ರತಿಮೆಯನ್ನು ಕೊಡಬೇಕು. ॥೧೭೯॥ ಮತ್ತು ಎತ್ತಿನಿಂದ ಸಹಿತವಾದ ಗೋವನ್ನು ಪಂಚೋಪಚಾರಗಳಿಂದ ಪೂಜಿಸಿ ಬ್ರಾಹ್ಮಣನಿಗೆ ಕೊಡಬೇಕು. ಹಾಗೂ ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನ ಮಾಡಿಸಬೇಕು. ಹೇ ಧರ್ಮರಾಜ, ಈ ರೀತಿ ಮಾಡುವವನ ಪುಣ್ಯ ಫಲವನ್ನು ತಿಳಿಸುವೆನು ಕೇಳು. ॥೧೮೦॥ ಸೌಭಾಗ್ಯ, ಪೂರ್ಣಾಯುಷ್ಯ, ಅಕ್ಷಯವಾದ ಸಂಪತ್ತು ಹಾಗೂ ಸಂತತಿ ಹಾಗೂ ಕೀರ್ತಿಗಳು ಈ ವ್ರತದ ಪ್ರಭಾವದಿಂದ ಪ್ರಾಪ್ತವಾಗುವವು. ॥೧೮೧॥ ಇಹಲೋಕದಲ್ಲಿ ಅಖಿಲಭೋಗಗಳನ್ನು ಭೋಗಿಸಿ ಅಂತದಲ್ಲಿ ಶಿವಲೋಕವನ್ನು ಹೊಂದುವನು. ಕೈಲಾಸದಲ್ಲಿ ಚಿರಕಾಲದವರೆಗಿದ್ದು ಉತ್ತಮವಾದ ಸುಖವನ್ನು ಹೊಂದಿ ॥೧೮೨॥ ಪುಣ್ಯಶೇಷದಿಂದ ಭೂಮಿಯಲ್ಲಿ ಜನಿಸಿ ರಾಜನಾಗುವನು. ಚಾತುರ್ಮಾಸ್ಯದಲ್ಲಿ ಬೇಸರವಿಲ್ಲದೇ ನಿತ್ಯಫಲದಾನ ಮಾಡುವವನು ॥೧೮೩॥ ಮತ್ತು ಸಮಾಪ್ತಿಯ ದಿನ ಬ್ರಾಹ್ಮಣರಿಗೆ ಸುವರ್ಣದಾನಮಾಡುವವನು ಸಕಲ ಮನೋರಥಗಳ ಸಿದ್ಧಿಯನ್ನು ಹಾಗೂ ಅಖಂಡವಾದ ಸತ್ಸಂತಾನವನ್ನು ಪಡೆಯುವನು. ॥೧೮೪॥ ಫಲದಾನದ ಮಹಾತ್ಮ್ಯೆಯಿಂದ ನಂದನವನದಲ್ಲಿ

ಫಲದಾನಸ್ಯ ಮಾಹಾತ್ಮ್ಯಾನ್ಮೋದತೇ ನಂದನೇ ವನೇ ।
ಪುಷ್ಪದಾನವ್ರತೇನಾಪಿ ಸ್ವರ್ಣಪುಷ್ಪಾದಿ ದಾಪಯೇತ್ ॥೧೮೫॥

ಸ ಸೌಭಾಗ್ಯಂ ಪರಂ ಪ್ರಾಪ್ಯ ಗಂಧರ್ವಪದಮಾಪ್ನುಯಾತ್ ।
ವಾಸುದೇವಪ್ರಸುಪ್ತೇ ತು ಚಾತುರ್ಮಾಸ್ಯಮತಂದ್ರಿತಃ ॥೧೮೬॥

ನಿತ್ಯಂ ವಾಮನಮುದ್ದಿಶ್ಯ ದಧ್ಯನ್ನಂ ಸ್ವಾದು ಷಡ್ರಸಮ್ ।
ಭೋಜಯೇದಥವಾ ದದ್ಯಾದೇಕಾದಶ್ಯಾಂ ನ ಭೋಜಯೇತ್ ॥೧೮೭॥

ದಾನಮೇವ ಪ್ರಕುರ್ವೀತ ಗ್ರಹಣಾದೌ ತಥೈವ ಚ ।
ಅಶಕ್ತೌ ನಿತ್ಯದಾನೇ ತು ಕುರ್ಯಾತ್ ಪಂಚಸು ಪರ್ವಸು ॥೧೮೮॥

ಭೂತಾಷ್ಟಮ್ಯಾಮಮಾಯಾಂ ಚ ಪೂರ್ಣಿಮಾಯಾಂ ತಥಾಪಿ ಚ ।
ಪ್ರತ್ಯರ್ಕವಾರಮಥವಾ ಪ್ರತಿಭಾರ್ಗವವಾಸರಮ್ ॥೧೮೯॥

ಪಕ್ಷದ್ವಯೇಽಪಿ ದ್ವಾದಶ್ಯಾಮವಶ್ಯಂ ದಾನಮೇವ ಚ ।
ಏವಂ ಕೃತ್ವಾ ಸಮಾಪ್ತೌ ತು ಯಥಾಶಕ್ತಿ ಮಹೀಂ ದದೇತ್ ॥೧೯೦॥

ಅಶಕ್ತೌ ಭೂಮಿದಾನೇ ತು ಧೇನುಂ ದದ್ಯಾದಲಂಕೃತಾಮ್ ।
ತತ್ರಾಪ್ಯಶಕ್ತೌ ವಾಸಶ್ಚ ಸರುಕ್ಮಂ ಪಾದುಕೇ ತಥಾ ॥೧೯೧॥

---

ಮೋದದಿಂದ ಇರುವನು. ಪುಷ್ಪದಾನದ ನಿಯಮವನ್ನು ಹಿಡಿದವರು ಉದ್ಯಾಪನೆಯ ದಿನ ಸುವರ್ಣಪುಷ್ಪವನ್ನು ಕೊಡುವುದರಿಂದ ॥೧೮೫॥ ಶ್ರೇಷ್ಠವಾದ ಸೌಭಾಗ್ಯವನ್ನು ಹೊಂದಿ ಮುಂದೆ ಗಂಧರ್ವಪದವಿಯನ್ನು ಪಡೆಯುವರು. ಚಾತುರ್ಮಾಸ್ಯದಲ್ಲಿ ಶ್ರೀಹರಿವಾಸುದೇವನು ಮಲಗಿದ ದಿನದಿಂದ ಏಕಾದಶಿಯನ್ನು ಬಿಟ್ಟು ಪ್ರತಿದಿನ ಬೇಸರವಿಲ್ಲದೇ ॥೧೮೬॥ ಭಗವಾನ್ ವಾಮನನನ್ನು ಉದ್ದೇಶಿಸಿ ಬ್ರಾಹ್ಮಣರಿಗೆ ಮೊಸರನ್ನ ಮತ್ತು ಷಡ್ರಸಗಳಿಂದ ಯುಕ್ತವಾದ ಸುಸ್ವಾದಭೋಜನವನ್ನು ಮಾಡಿಸಬೇಕು ಅಥವಾ ಬಡಿಸಿಕೊಡಬೇಕು. ॥೧೮೭॥ ಗ್ರಹಣಾದಿಗಳು ಬಂದರೆ ಆಗ ದಾನಮಾಡಬೇಕು. ನಿತ್ಯದಲ್ಲಿ ಈ ರೀತಿಮಾಡಲು ಸಾಧ್ಯವಾಗದಿದ್ದರೆ ಕೊನೆಗೆ ೫ ಪರ್ವದಿನಗಳಲ್ಲಿ ಆದರೂ ಬ್ರಾಹ್ಮಣಭೋಜನ ಮಾಡಿಸಬೇಕು. ॥೧೮೮॥ ಕೃಷ್ಣಪಕ್ಷದ ಅಷ್ಟಮಿ, ಅಮಾವಾಸ್ಯೆ, ಪೂರ್ಣಿಮಾ, ಪ್ರತಿ ರವಿವಾರ ಅಥವಾ ಶುಕ್ರವಾರ, ॥೧೮೯॥ ಎರಡೂ ಪಕ್ಷಗಳಲ್ಲಿ ಬರುವ ದ್ವಾದಶಿ ಈ ಐದು ಪರ್ವದಿನಗಳಲ್ಲಿ ತಪ್ಪದೇ (ಅನ್ನ)ದಾನವನ್ನು ಮಾಡಬೇಕು. ಈ ಪ್ರಕಾರಮಾಡಿ ಸಮಾಪ್ತಿಯ ದಿನ ಯಥಾಶಕ್ತಿ ಭೂದಾನವನ್ನು ಮಾಡಬೇಕು. ಭೂದಾನಕೊಡಲು ಸಾಮರ್ಥ್ಯವಿರದಿದ್ದರೆ ಅಥವಾ ಸಾಧ್ಯವಾಗದಿದ್ದರೆ ಸಾಲಂಕೃತ ಗೋದಾನವನ್ನು ಕೊಡಬೇಕು. ಇದೂ ಸಾಧ್ಯವಿರದಿದ್ದರೆ ಅಲ್ಪಸುವರ್ಣದೊಂದಿಗೆ ವಸ್ತ್ರವನ್ನು ಮತ್ತು ಪಾದರಕ್ಷೆಗಳನ್ನು ಕೊಡಬೇಕು. ॥೧೯೧॥ ವಸ್ತ್ರಸಹಿತ ಛತ್ರ ಹಾಗೂ ಪಾದತ್ರಾಣಗಳ

ಛತ್ರೋಪಾನದ್ವಸ್ತ್ರಯುಕ್ತಂ ದಾನಂ ಸರ್ವಂ ಪ್ರಶಸ್ಯತೇ ।
ದ್ವಿಜಾನಾಂ ಭೋಜನಂ ಚೈವ ಕ್ಷತ್ರಿಯಸ್ಯ ಯಥಾ ಸುಖಮ್ ॥೧೯೨॥

ಭೂಮ್ಯಾದಿ ಮುನಿಶಾರ್ದೂಲ ವೈಶ್ಯಸ್ಯ ವಸುಧಾಂ ವಿನಾ ।
ಬ್ರಾಹ್ಮಣಸ್ಯಾಪಿ ಶಕ್ತಸ್ಯ ಶೂದ್ರಸ್ಯಾಪಿ ತಥಾ ಮತಮ್ ॥೧೯೩॥

ಕುಬೇರೇಣ ಪುರಾ ಚೀರ್ಣಂ ಶಂಕರಸ್ಯೋಪದೇಶತಃ ।
ಜಹ್ನುನಾ ಗೌತಮೇನಾಪಿ ಶಕ್ರೇಣಾಪಿ ಕೃತಂ ಪುರಾ ॥೧೯೪॥

ಅಕ್ಷಯ್ಯಮನ್ನಮಾಪ್ನೋತಿ ಪುತ್ರಪೌತ್ರಾದಿ ಸಂಪದಮ್ ।
ದೃಢಾಂಗಃ ಪೂರ್ಣಮಾಯುಷ್ಯಂ ಲಭತೇ ವೈರಿನಾಶನಮ್ ॥೧೯೫॥

ಸುಸ್ಥಿರಾಂ ವಿಷ್ಣುಭಕ್ತಿಂ ಚ ಪ್ರಯಾತಿ ಹರಿಮಂದಿರಮ್ ।
ಆರೋಗ್ಯಂ ಸೌಖ್ಯಮತುಲಂ ರೂಪಂ ಸಂಪತ್ತಿಮೇವ ಚ ॥೧೯೬॥

ನ ವಂಧ್ಯಾ ಜಾಯತೇ ಚೇದಮನಂತಫಲದಾಯಕಮ್ ।
ನಿತ್ಯಂ ಪಯಸ್ವಿನೀಂ ದದ್ಯಾತ್ ಸಾಲಂಕಾರಾಂ ಶುಭಾವಹಾಮ್ ॥೧೯೭॥

ದತ್ವಾ ತು ದಕ್ಷಿಣಾಂ ಶಕ್ತ್ಯಾ ಸ ಸರ್ವಜ್ಞಾನವಾನ್ ಭವೇತ್ ।
ನ ಪರಪ್ರೇಷ್ಯತಾಂ ಯಾತಿ ಬ್ರಹ್ಮಲೋಕಂ ಚ ಗಚ್ಛತಿ ॥೧೯೮॥

---

ದಾನವು ಅತಿಶ್ರೇಷ್ಠವಾಗಿದೆ. ಬ್ರಾಹ್ಮಣರು ಅನ್ನದಾನವನ್ನು, ಕ್ಷತ್ರಿಯರು ಭೂದಾನವನ್ನು, ॥೧೯೨॥ ವೈಶ್ಯರು ಭೂದಾನವನ್ನು ಬಿಟ್ಟು ಉಳಿದ ದಾನವನ್ನು ಮಾಡುವದು ಅತಿ ವಿಹಿತವಾಗಿದೆ. ಶೂದ್ರರೂ ಕೂಡ ಯೋಗ್ಯವಾದ ದಾನವನ್ನು ಕೊಡಬೇಕು. ॥೧೯೩॥ ಹಿಂದಕ್ಕೆ ಶಂಕರನ ಉಪದೇಶದಂತೆ ಕುಬೇರನು ಚಾತುರ್ಮಾಸ್ಯವ್ರತವನ್ನು ಆಚರಿಸಿದನು. ಅದರಂತೆ ಜಹ್ನುರಾಜ, ಗೌತಮ ಋಷಿ ಹಾಗೂ ಇಂದ್ರರೂ ಕೂಡ ಈ ವ್ರತವನ್ನಾಚರಿಸಿದರು. ॥೧೯೪॥ ಈ ಪ್ರಕಾರ ಬ್ರಾಹ್ಮಣಭೋಜನ ಮಾಡಿಸುವ ವ್ರತಿಯು ಮುಂದೆ ಅಕ್ಷಯವಾದ ಅನ್ನವನ್ನೂ, ಪುತ್ರಪೌತ್ರಾದಿ ಸಂತಾನವನ್ನೂ, ದೃಢಾಂಗನಾಗಿದ್ದು ಪೂರ್ಣಾಯುಸ್ಸನ್ನೂ ಪಡೆಯುವನು. ಅವನ ಶತ್ರುಗಳ ನಾಶವಾಗುವದು. ॥೧೯೫॥ ಸುಸ್ಥಿರವಾದ ವಿಷ್ಣುಭಕ್ತಿಯನ್ನು ಪಡೆದು ಕೊನೆಗೆ ವಿಷ್ಣುಲೋಕವನ್ನು ಸೇರುವನು. ಆರೋಗ್ಯ, ಅತುಲವಾದ ಸೌಖ್ಯ, ರೂಪ, ಸಂಪತ್ತು ಎಲ್ಲವೂ ದೊರಕುವವು. ॥೧೯೬॥ ಸ್ತ್ರೀಯು ಬಂಜೆಯಾಗುವದಿಲ್ಲ. ಇದು ಅನಂತವಾದ ಫಲವನ್ನು ಕೊಡುವಂಥದಾಗಿದೆ. ಹಾಲು ಕರೆಯುವ ಸಾಲಂಕೃತ ಗೋವನ್ನು ದಕ್ಷಿಣಾಸಹಿತ ನಿತ್ಯವೂ ದಾನಮಾಡುವವನು ॥೧೯೭॥ ಸರ್ವಜ್ಞನಾಗುವನು. ಅವನು ಎಂದಿಗೂ ಇನ್ನೊಬ್ಬರ ಅಧೀನನಾಗದೇ ಮರಣಾನಂತರ ಬ್ರಹ್ಮಲೋಕವನ್ನು ಸೇರುವನು. ॥೧೯೮॥ ಅಲ್ಲಿ ಪಿತೃಗಳಿಂದ

ಅಕ್ಷಯಂ ಸುಖಮಾಪ್ನೋತಿ ಪಿತೃಭಿಃ ಸಹಿತೋ ನರಃ |
ವಾರ್ಷಿಕಾಂಶ್ಚತುರೋ ಮಾಸಾನ್ ಪ್ರಾಜಾಪತ್ಯಂ ಚರೇನ್ನರಃ ||೧೯೯||

ಸಮಾಪ್ತೌ ಗೋಯುಗಂ ದದ್ಯಾತ್ ಕೃತ್ವಾ ಬ್ರಾಹ್ಮಣಭೋಜನಮ್ |
ಸರ್ವಪಾಪವಿಶುದ್ಧಾತ್ಮಾ ಯಾತಿ ಬ್ರಹ್ಮ ಸನಾತನಮ್ ||೨೦೦||

ಏಕಾಂತರಸ್ಯೋಪವಾಸೇ ತು ದೀಪಾನಷ್ಟೌ ಪ್ರದಾಪಯೇತ್ |
ವಸ್ತ್ರಕಾಂಚನಯುಕ್ತಾಂಶ್ಚ ಶಯ್ಯಯಾ ಸಹ ಭಾಮಿನೀಮ್ ||೨೦೧||

ಅನುಡುದ್ದ್ವಯ ಸಂಯುಕ್ತಾಂ ದದಾತಿ ಪ್ರೀಯತಾಂ ಹರಿಃ ||೨೦೨||

ಶಾಕಮೂಲಫಲೈರ್ವಾಪಿ ಚಾತುರ್ಮಾಸ್ಯಂ ನಯೇನ್ನರಃ |
ಸಮಾಪ್ತೌ ಗೋಪ್ರದಾನೇನ ಸ ಗಚ್ಛೇದ್ವಿಷ್ಣುಮಂದಿರಮ್ ||೨೦೩||

ಪಯೋವ್ರತೀ ತಥಾಪ್ನೋತಿ ಬ್ರಹ್ಮಲೋಕಂ ಸನಾತನಮ್ |
ವ್ರತಾಂತೇ ಚ ತಥಾ ದದ್ಯಾದ್ಗಾಮೇಕಾಂ ಚ ಪಯಸ್ವಿನೀಮ್ ||೨೦೪||

ರಂಭಾಫಲಪಲಾಶೇಷು ಯೋ ಭುಂಕ್ತೇ ಚ ಋತುದ್ವಯೇ |
ವಸ್ತ್ರಯುಗ್ಮಂ ಚ ಕಾಂಸ್ಯಂ ಚ ಶಕ್ತ್ಯಾ ದದ್ಯಾತ್ಸುಖೀ ಭವೇತ್ ||೨೦೫||

ಕೂಡಿಕೊಂಡು ಅಕ್ಷಯವಾದ ಸುಖವನ್ನು ಪಡೆಯುವನು. ವರ್ಷದಲ್ಲಿಯ ಈ ಚಾತುರ್ಮಾಸ್ಯದ ನಾಲ್ಕು ತಿಂಗಳು ಪ್ರಾಜಾಪತ್ಯ ವ್ರತವನ್ನಾಚರಿಸಿ (ಮೂರು ದಿನ ಬೆಳಿಗ್ಗೆ ಭೋಜನ, ಮೂರು ದಿನ ಸಾಯಂಕಾಲ ಭೋಜನ, ಮೂರು ದಿನ ಅಯಾಚಿತ ವೃತ್ತಿ, ಮತ್ತೆ ಮೂರು ದಿನ ಉಪವಾಸ ಈ ಕ್ರಮದಿಂದ ಮಾಡುವದೇ ಪ್ರಾಜಾಪತ್ಯವ್ರತ) ||೧೯೯|| ಸಮಾಪ್ತಿಯ ದಿನ ಬ್ರಾಹ್ಮಣಭೋಜನ ಮಾಡಿಸಿ ಅವರಿಗೆ ಎರಡು ಗೋವುಗಳನ್ನು ದಾನವಾಗಿ ಕೊಡುವವನು ಸಕಲಪಾಪಗಳಿಂದ ಮುಕ್ತನಾಗಿ ಮುಂದೆ ಬ್ರಹ್ಮದೇವರ ಸನಾತನ ಲೋಕಕ್ಕೆ ಹೋಗುವನು. ||೨೦೦|| ಏಕಾಂತರದ ಉಪವಾಸ ಮಾಡಿದಾಗ ಸುವರ್ಣ, ವಸ್ತ್ರ ಹಾಗೂ ಹಾಸಿಗೆಗಳೊಂದಿಗೆ ಎಂಟು ದೀಪಗಳನ್ನು ದಾನಮಾಡಬೇಕು ಮತ್ತು ಕನ್ಯಾದಾನವನ್ನು ಮಾಡಬೇಕು. ||೨೦೧|| ಶ್ರೀಹರಿಯು ಪ್ರೀತನಾಗಲಿ ಎಂದು ಹೊಲದಲ್ಲಿ ದುಡಿಯುವಂಥ ಎರಡು ಎತ್ತುಗಳನ್ನು ದಾನಮಾಡಬೇಕು. ||೨೦೨|| ಕೇವಲ ತರಕಾರಿ, ಗಡ್ಡೆಗೆಣಸು, ಹಣ್ಣುಗಳನ್ನು ಸೇವಿಸಿ ಚಾತುರ್ಮಾಸ್ಯವನ್ನು ಕಳೆಯುವ ನರನು ಸಮಾಪ್ತಿಯ ದಿನ ಗೋದಾನವನ್ನು ಮಾಡಿದರೆ ವಿಷ್ಣುಲೋಕವನ್ನು ಸೇರುವನು. ||೨೦೩|| ಹಾಲನ್ನು ಮಾತ್ರ ಸೇವಿಸುವ ವ್ರತಿಯು ವ್ರತಾಂತದಲ್ಲಿ ಹಾಲುಕರೆಯುವ ಗೋವನ್ನು ದಾನಮಾಡಿದರೆ ನಿತ್ಯವಾದ ಬ್ರಹ್ಮಲೋಕವನ್ನು ಹೊಂದುವನು. ||೨೦೪|| ಚಾತುರ್ಮಾಸ್ಯದ ಎರಡು ಋತುಗಳಲ್ಲಿ ಪ್ರತಿದಿನ ಬಾಳೆಯ ಎಲೆಯಲ್ಲಿ ಭೋಜನಮಾಡಿ ಕೊನೆಗೆ ಯಥಾಶಕ್ತಿ ಜೋಡುವಸ್ತ್ರ, ಕಂಚಿನಪಾತ್ರೆಗಳನ್ನು ದಾನಮಾಡಿದರೆ ಸುಖಿಯಾಗಿರುವನು. ||೨೦೫|| ಕಂಚಿನಲ್ಲಿ ಬ್ರಹ್ಮ, ಶಿವ, ಅಗ್ನಿ ಹಾಗೂ

ಕಾಂಸ್ಯೇ ಬ್ರಹ್ಮಾ ಶಿವೋ ಲಕ್ಷ್ಮೀಃ ಕಾಂಸ್ಯಮೇವ ವಿಭಾವಸುಃ ।
ಕಾಂಸ್ಯಂ ವಿಷ್ಣುಮಯಂ ಯಸ್ಮಾದತಃ ಶಾಂತಿಂ ಪ್ರಯಚ್ಛ ಮೇ ॥೨೦೬॥

ನಿತ್ಯಂ ಪಲಾಶಭೋಜೀ ಚ ತೈಲಾಭ್ಯಂಗವಿವರ್ಜಿತಃ ।
ಸ ನಿಹಂತ್ಯಖಿಪಾಪಾನಿ ತೂಲರಾಶಿಮಿವಾನಲಃ ॥೨೦೭॥

ಬ್ರಹ್ಮಘ್ನಶ್ಚ ಸುರಾಪಶ್ಚ ಬಾಲಘಾತಕರಶ್ಚ ಯಃ ।
ಅಸತ್ಯವಾದಿನೋ ಯೇ ಚ ಸ್ತ್ರೀಘಾತೀ ವ್ರತಘಾತಕಃ ॥೨೦೮॥

ಅಗಮ್ಯಾಗಾಮಿನಶ್ಚೈವ ವಿಧವಾಗಾಮಿನಸ್ತಥಾ ।
ಚಾಂಡಾಲೀಗಾಮಿನಶ್ಚೈವ ವಿಪ್ರಸ್ತ್ರೀಗಾಮಿನಸ್ತಥಾ ॥೨೦೯॥

ತೇ ಸರ್ವೇ ಪಾಪನಿರ್ಮುಕ್ತಾ ವ್ರತೇನಾನೇನ ಕೇಶವ ।
ಸಮಾಪ್ತೌ ಕಾಂಸ್ಯಪಾತ್ರಂ ತು ಚತುಃಷಷ್ಟಿಪಲೈರ್ಯುತಮ್ ॥೨೧೦॥

ಸವತ್ಸಾಂ ಗಾಂ ಚ ವೈ ದದ್ಯಾತ್ ಸಾಲಂಕಾರಾಂ ಪಯಸ್ವಿನೀಮ್ ।
ಅಲಂಕೃತಾಯ ವಿದುಷೇ ಸುವಸ್ತ್ರಾಯ ಸುವೇಷಿಣೇ ॥೨೧೧॥

ಭೂಮೌ ವಿಲಿಪ್ಯ ಯೋ ಭುಂಕ್ತೇ ದೇವಂ ನಾರಾಯಣಂ ಸ್ಮರನ್ ।
ದದ್ಯಾದ್ಭೂಮಿಂ ಯಥಾಶಕ್ತಿ ಕೃಷ್ಯಾಂ ಬಹುಜಲಾಂತಿಕೇ ॥೨೧೨॥

---

ಲಕ್ಷ್ಮೀದೇವಿಯರ ವಿಶೇಷ ಸನ್ನಿಧಾನವಿರುವದು. ಅದರಂತೆ ಕಂಚಿನಲ್ಲಿ ವಿಷ್ಣು ಇರುವನು. ಆದ್ದರಿಂದ ಹೇ ಕಂಚಿನಪಾತ್ರೆಯೇ, ನನಗೆ ಶಾಂತಿಯನ್ನು ಕೊಡು. ॥೨೦೬॥ ಇನ್ನು ನಿತ್ಯ ಪಲಾಶಪಾತ್ರದಲ್ಲಿ ಭೋಜನಮಾಡುವವನು, ತೈಲದಿಂದ ಅಭ್ಯಂಗಸ್ನಾನಮಾಡದಿರುವವನು ತಾನು ಆವರೆಗೆ ಮಾಡಿದ ಪಾಪಗಳನ್ನೆಲ್ಲ, ಅಗ್ನಿಯು ಅರಳೆಯ ರಾಶಿಯನ್ನು ಸುಟ್ಟುಹಾಕುವಂತೆ, ಸುಟ್ಟು ಭಸ್ಮಮಾಡುವನು. ॥೨೦೭॥ ಬ್ರಹ್ಮಘಾತಿಯು, ಸುರಾಪಾನಿಯು, ಬಾಲಘಾತಕನು, ಅಸತ್ಯಭಾಷಿಯು, ಸ್ತ್ರೀಘಾತಿಯು, ವ್ರತಭಂಗ ಮಾಡುವವನು ॥೨೦೮॥ ಅಗಮ್ಯಸ್ತ್ರೀಗಾಮಿಗಳು, ವಿಧವಾಗಾಮಿಗಳು, ಚಾಂಡಾಲಸ್ತ್ರೀಗಾಮಿಗಳು ಮತ್ತು ಬ್ರಾಹ್ಮಣಸ್ತ್ರೀಗಾಮಿಗಳು ॥೨೦೯॥ ಇವರೆಲ್ಲರೂ ಈ ವ್ರತದ (ಪಲಾಶಪತ್ರ ಭೋಜನ ವ್ರತ) ಪ್ರಭಾವದಿಂದ ತಮ್ಮೆಲ್ಲ ಪಾಪಗಳಿಂದ ಮುಕ್ತರಾಗುವರು. ಈ ವ್ರತದ ಸಮಾಪ್ತಿಯ ದಿನ ೬೪ ಪಲ ಭಾರದ ಕಂಚಿನಪಾತ್ರೆಯನ್ನು ಹಾಗೂ ॥೨೧೦॥ ಅಲಂಕೃತವಾದ, ಹಾಲು ಕರೆಯುವ ಹಾಗೂ ಕರುಸಹಿತವಾಗಿರುವ ಒಂದು ಗೋವನ್ನು ಅಲಂಕೃತನಾದ ಉತ್ತಮ ವಸ್ತ್ರವನ್ನುಟ್ಟುಕೊಂಡಿರುವ ಒಬ್ಬ ದ್ವಿಜಶ್ರೇಷ್ಠನಿಗೆ ದಾನ ಮಾಡಬೇಕು. ॥೨೧೧॥ ಇನ್ನು ಶ್ರೀಹರಿನಾರಾಯಣದೇವರನ್ನು ಸ್ಮರಿಸುತ್ತ ಶುದ್ಧವಾಗಿರುವ ಭೂಮಿಯ ಮೇಲೆ ಭೋಜನ ಮಾಡುವವನು ವ್ರತೋದ್ಯಾಪನೆಯ ದಿನ ಜಲಾಶಯದ ಹತ್ತಿರವಿರುವ, ಉತ್ತಮ ಭೂಮಿಯಿಂದ ಕೂಡಿದ ಭೂಮಿಯನ್ನು (ಹೊಲವನ್ನು) ಯಥಾಶಕ್ತಿ ದಾನಮಾಡಿದರೆ ॥೨೧೨॥

ಆರೋಗ್ಯಪುತ್ರಸಂಪನ್ನೋ ರಾಜಾ ಭವತಿ ಧಾರ್ಮಿಕಃ ।
ಶತ್ರೋರ್ಭಯಂ ನ ಲಭತೇ ವಿಷ್ಣುಲೋಕಂ ಸ ಗಚ್ಛತಿ ||೨೧೩||

ಅಯಾಚಿತೇ ತ್ವನಡ್ವಾಹಂ ಸಹಿರಣ್ಯಂ ಸಚಂದನಮ್ ।
ಷಡ್ರಸಂ ಭೋಜನಂ ದದ್ಯಾತ್ ಸ ಯಾತಿ ಪರಮಾಂ ಗತಿಮ್ ||೨೧೪||

ಯಸ್ತು ಸುಪ್ತೇ ಹೃಷೀಕೇಶೇ ನಕ್ತಂ ಚ ಕುರುತೇ ವ್ರತಮ್ ।
ಬ್ರಾಹ್ಮಣಾನ್ ಭೋಜಯೇತ್ಪಶ್ಚಾತ್ ಶಿವಲೋಕೇ ಮಹೀಯತೇ ||೨೧೫||

ಏಕಭುಕ್ತಂ ನರಃ ಕೃತ್ವಾ ಮಿತಾಶೀ ಚ ದೃಢವ್ರತಃ ।
ಯೋऽರ್ಚಯೇಚ್ಚತುರೋ ಮಾಸಾನ್ ವಾಸುದೇವಂ ಸ ನಾಕಭಾಕ್ ||೨೧೬||

ಸಮಾಪ್ತೌ ಭೋಜಯೇದ್ವಿಪ್ರಾನ್ ಶಕ್ತ್ಯಾ ದದ್ಯಾಚ್ಚ ದಕ್ಷಿಣಾಮ್ ।
ಯಸ್ತು ಸುಪ್ತೇ ಹೃಷೀಕೇಶೇ ಕ್ಷಿತಿಶಾಯೀ ಭವೇನ್ನರಃ ||೨೧೭||

ಶಯ್ಯಾಂ ಸೋಪಸ್ಕರಾಂ ದದ್ಯಾಚ್ಛಿವಲೋಕೇ ಮಹೀಯತೇ ।
ಪಾದಾಭ್ಯಂಗಂ ನರೋ ಯಸ್ತು ವರ್ಜಯೇಚ್ಚ ಋತುದ್ವಯೇ ||೨೧೮||

---

ಉತ್ತಮ ಆರೋಗ್ಯ ಹಾಗೂ ಪುತ್ರಾದಿ ಸಂತಾನಸಂಪತ್ತನ್ನು ಹೊಂದಿ ಮರುಜನ್ಮದಲ್ಲಿ ಪರಮಧಾರ್ಮಿಕನಾದ ರಾಜನಾಗುವನು. ಅವನಿಗೆ ಶತ್ರುಗಳ ಭಯವೆಂಬುದು ಇರುವದಿಲ್ಲ. ಮರಣಾನಂತರ ನಿಶ್ಚಿತವಾಗಿ ವಿಷ್ಣುಲೋಕವನ್ನು ಸೇರುವನು. ||೨೧೩|| ಅಯಾಚಿತ ವೃತ್ತಿಯಿಂದ ಚಾತುರ್ಮಾಸ್ಯ ಕಳೆದವನು ಕೊನೆಯದಿನ ಎರಡು ಎತ್ತು, ಸುವರ್ಣ, ಚಂದನ ಮತ್ತು ಬ್ರಾಹ್ಮಣರಿಗೆ ಷಡ್ರಸಭೋಜನ ಮಾಡಿಸಿದರೆ ಪರಮಗತಿಯನ್ನು ಹೊಂದುವನು. ||೨೧೪|| ಶ್ರೀಹರಿ ಹೃಷೀಕೇಶನ ಶಯನೋತ್ಸವ ಆದ ದಿನದಿಂದ ನಕ್ತವ್ರತವನ್ನು ಆಚರಿಸುವವನು ಉದ್ಯಾಪನೆಯ ದಿನ ಯಥಾಶಕ್ತಿ ಬ್ರಾಹ್ಮಣಭೋಜನ ಮಾಡಿಸಿದರೆ ಅವನು ಶಿವಲೋಕವನ್ನು ಪಡೆಯುವನು. ||೨೧೫|| ಏಕಭುಕ್ತವ್ರತವನ್ನು ಮಾಡುವವನು ಮಿತಾಹಾರಿಯಾಗಿದ್ದು ದೃಢವ್ರತನಾಗಿ ನಾಲ್ಕು ತಿಂಗಳೂ ಶ್ರೀಹರಿ ವಾಸುದೇವನನ್ನು ಭಕ್ತಿಯಿಂದ ಪೂಜಿಸಿ ||೨೧೬|| ಕೊನೆಯದಿನ ಯಥಾಶಕ್ತಿ ದಕ್ಷಿಣೆಕೊಟ್ಟು ಬ್ರಾಹ್ಮಣಭೋಜನ ಮಾಡಿಸಿದರೆ ಅವನು ಸ್ವರ್ಗಲೋಕ ಪಡೆಯುವನು. ಶ್ರೀಹರಿಯ ಶಯನೋತ್ಸವದ ನಂತರ ಪ್ರತಿದಿನ ಭೂಮಿಯ ಮೇಲೆ ಮಲಗಿ ||೨೧೭|| ಕೊನೆಗೆ ಯೋಗ್ಯನಾದ ಬ್ರಾಹ್ಮಣನಿಗೆ ತಲೆದಿಂಬಿನಿಂದ ಸಹಿತವಾದ ಹಾಸಿಗೆಯನ್ನು ದಾನಮಾಡಿದರೆ ಅದರಿಂದ ಶಿವಲೋಕವಾದ ಕೈಲಾಸಪ್ರಾಪ್ತಿಯಾಗಿ ಅಲ್ಲಿ ಶೋಭಿಸುವನು. ಚಾತುರ್ಮಾಸ್ಯದಲ್ಲಿ ಪಾದಗಳಿಗೆ ಎಣ್ಣೆಯನ್ನು ಹಚ್ಚದೇ ಕೊನೆಯದಿನ ||೨೧೮|| ಬ್ರಾಹ್ಮಣರ ಪಾದಗಳಿಗೆ ಎಣ್ಣೆಯನ್ನು ಹಚ್ಚಿ ತೊಳೆದು ಬ್ರಾಹ್ಮಣಭೋಜನ

ಪಾದಾಭ್ಯಂಗಂ ನರಃ ಕುರ್ಯಾತ್ ಬ್ರಾಹ್ಮಣಾನಾಂ ಚ ಭೋಜನಮ್ ।
ದಕ್ಷಿಣಾಂ ಚ ಯಥಾಶಕ್ತ್ಯಾ ಸ ಗಚ್ಛೇದ್ವಿಷ್ಣುಮಂದಿರಮ್ ॥೨೧೯॥

ಆಷಾಢಾಚ್ಚತುರೋ ಮಾಸಾನ್ ವರ್ಜಯೇನ್ನಖಕೃಂತನಮ್ ।
ಆರೋಗ್ಯಪುತ್ರಸಂಪನ್ನೋ ರಾಜಾ ಭವತಿ ಧಾರ್ಮಿಕಃ ॥೨೨೦॥

ಪಾಯಸಂ ಲವಣಂ ಚೈವ ಮಧು ಸರ್ಪಿಃ ಫಲಾನಿ ಚ ।
ಚಾತುರ್ಮಾಸ್ಯೇ ವರ್ಜಯೇದ್ಯೋ ಗೌರೀಶಂಕರತುಷ್ಟಯೇ ॥೨೨೧॥

ಕಾರ್ತಿಕ್ಯಾಂ ಚ ಪುನಸ್ತಾನಿ ಬ್ರಾಹ್ಮಣಾಯ ನಿವೇದಯೇತ್ ।
ಸ ರುದ್ರಲೋಕಮಾಪ್ನೋತಿ ರುದ್ರವ್ರತನಿಷೇವಣಾತ್ ॥೨೨೨॥

ಯವಾನ್ನಂ ಭಕ್ಷ್ಯಯೇದ್ಯಸ್ತು ಅಥವಾ ಶಾಲಯಃ ಶುಭಾಃ ।
ಪುತ್ರಪೌತ್ರಾದಿಭಿಃ ಸಾರ್ಧಂ ಶಿವಲೋಕೇ ಮಹೀಯತೇ ॥೨೨೩॥

ತೈಲಾಭ್ಯಂಗಪರಿತ್ಯಾಗೀ ವಿಷ್ಣುಭಕ್ತಃ ಸದಾ ವ್ರತೀ ।
ವರ್ಷಾಸು ವಿಷ್ಣುಮಭ್ಯರ್ಚ್ಯ ವೈಷ್ಣವೀಂ ಲಭತೇ ಗತಿಮ್ ॥೨೨೪॥

ಸಮಾಪ್ತೌ ಕಾಂ ಸ್ಯಪಾತ್ರಂ ಚ ಸುವರ್ಣೇನ ಸಮನ್ವಿತಮ್ ।
ತೈಲೇನ ಪೂರಿತಂ ಕೃತ್ವಾ ಬ್ರಾಹ್ಮಣಾಯ ನಿವೇದಯೇತ್ ॥೨೨೫॥

---

ಮಾಡಿಸುವವನು ಮತ್ತು ಅವರಿಗೆ ಯಥಾಶಕ್ತಿ ದಕ್ಷಿಣಾದಿಗಳನ್ನು ಕೊಟ್ಟರೆ ಅವನು ವಿಷ್ಣುಮಂದಿರವನ್ನು ಸೇರುವನು. ॥೨೧೯॥ ಆಷಾಢಶುದ್ಧ ಏಕಾದಶಿಯ ಶಯನೋತ್ಸವದಿಂದ ಪ್ರಾರಂಭಿಸಿ ನಾಲ್ಕುತಿಂಗಳುಗಳ ವರೆಗೆ ತನ್ನ ಉಗುರುಗಳನ್ನು ಕತ್ತರಿಸದಿದ್ದರೆ ಅವನು ಒಳ್ಳೆಯ ಆರೋಗ್ಯ, ಪುತ್ರರಿಂದ ಸಂಪನ್ನನಾಗಿ ಮರುಜನ್ಮದಲ್ಲಿ ರಾಜನಾಗುವನು. ॥೨೨೦॥ ಚಾತುರ್ಮಾಸ್ಯದಲ್ಲಿ ಗೌರೀಶಂಕರನ ಪ್ರೀತ್ಯರ್ಥವಾಗಿ ಪಾಯಸ, ಲವಣ, ಮಧು, ಘೃತ (ಕರಗಿದ ತುಪ್ಪ) ಮತ್ತು ಹಣ್ಣುಗಳನ್ನು ವರ್ಜಿಸಿ ॥೨೨೧॥ ಕಾರ್ತೀಕದಲ್ಲಿ (ಶುದ್ಧ ದ್ವಾದಶಿಯ ದಿನ) ಅವುಗಳನ್ನು ಪುನಃ ಬ್ರಾಹ್ಮಣನಿಗೆ ದಾನವಾಗಿ ಕೊಟ್ಟರೆ ಈ ರುದ್ರವ್ರತದ ಪ್ರಭಾವದಿಂದ ರುದ್ರಲೋಕವು (ಕೈಲಾಸ) ಪ್ರಾಪ್ತವಾಗುವದು. ॥೨೨೨॥ ಚಾತುರ್ಮಾಸ್ಯದಲ್ಲಿ ನಾಲ್ಕು ತಿಂಗಳು (ಏಕಾದಶಿಯನ್ನು ಬಿಟ್ಟು ಉಳಿದ ಧಿನ) ಪ್ರತಿದಿನ ಜವೆಗೋದಿಯಿಂದ ತಯಾರಿಸಿದ ಅನ್ನವನ್ನಾಗಲೀ ಅಥವಾ ಒಳ್ಳೆಯ ಅಕ್ಕಿಯ ಅನ್ನವನ್ನಗಾಲೀ ಸೇವಿಸುವವನು ಪುತ್ರಪೌತ್ರಾದಿಗಳಿಂದ ಯುಕ್ತನಾಗಿ ಶಿವಲೋಕದಲ್ಲಿ ವಿರಾಜಿಸುವನು. ॥೨೨೩॥ ತೈಲಾಭ್ಯಂಜನವನ್ನು ತ್ಯಜಿಸಿ ಸದಾ ವಿಷ್ಣುಭಕ್ತನಾಗಿದ್ದು ವರ್ಷಾಕಾಲದಲ್ಲಿ ಶ್ರೀಹರಿವಿಷ್ಣುವನ್ನು ಭಕ್ತಿಯಿಂದ ಪೂಜಿಸುವವನು ವಿಷ್ಣುಲೋಕವನ್ನು ಪಡೆಯುವನು. ॥೨೨೪॥ ವ್ರತಸಮಾಪ್ತಿಯ ದಿನ ಕಂಚಿನ ಒಂದು ಪಾತ್ರೆಯಲ್ಲಿ ತಿಲವನ್ನು ತುಂಬಿ ಅದನ್ನು ಸುವರ್ಣದೊಂದಿಗೆ ಒಬ್ಬ ದ್ವಿಜಶ್ರೇಷ್ಠನಿಗೆ ದಾನಮಾಡಬೇಕು. ॥೨೨೫॥ ವರ್ಷದ ಈ ನಾಲ್ಕು ತಿಂಗಳು ಶಾಕಾದಿಗಳನ್ನು

ವಾರ್ಷಿಕಾಂಶ್ಚತುರೋ ಮಾಸಾನ್ ಶಾಕಾದಿ ಪರಿವರ್ಜಯೇತ್ ।
ವಿಷ್ಣುಲೋಕಮವಾಪ್ನೋತಿ ಪಿತೃತೃಪ್ತಿಃ ಪ್ರಜಾಯತೇ ॥೨೨೬॥

ವ್ರತಾಂತೇ ಪರಿಮುದ್ದಿಶ್ಯ ಪಾತ್ರಂ ರಜತಮೇವ ಹಿ ।
ವಸ್ತ್ರೇಣ ವೇಷ್ಟಯೇದ್ಗಂಧಪತ್ರಪುಷ್ಪೈಃ ಸಮರ್ಚಯೇತ್ ॥೨೨೭॥

ಮೂಲಂ ಪತ್ರಂ ಕರೀರಾಗ್ರಫಲಕಾಂಡಾಧಿರೂಢಕಮ್ ।
ತ್ವಕ್ಪುಷ್ಪಂ ಕವಚಂ ಚೇತಿ ಶಾಕಮಷ್ಟವಿಧಂ ಸ್ಮೃತಮ್ ॥೨೨೮॥

ಸಮಭ್ಯರ್ಚ್ಯ ಯಥಾಶಕ್ತ್ಯಾ ಬ್ರಾಹ್ಮಣಾನ್ ವೇದಪಾರಗಾನ್ ।
ದದ್ಯಾದ್ದಕ್ಷಿಣಯಾ ಸಾರ್ಧಂ ವ್ರತಸಂಪೂರ್ಣಹೇತವೇ ॥೨೨೯॥

ಶಿವಸಾಯುಜ್ಯಮಾಪ್ನೋತಿ ಪ್ರಸಾದಾಚ್ಛೂಲಪಾಣಿನಃ ।
ಗೋಧೂಮವರ್ಜನಂ ಕೃತ್ವಾ ಭೋಜನಂ ವ್ರತಮಾಚರೇತ್ ॥೨೩೦॥

ಕಾರ್ತಿಕೇ ಸ್ವರ್ಣಗೋಧೂಮಾನ್ ವಸ್ತ್ರಂ ದತ್ವಾಽತ್ರಮೇಧಕೃತ್ ।
ಗೋಧೂಮಾಃ ಸರ್ವಜಂತೂನಾಂ ಬಲಪುಷ್ಟಿವಿವರ್ಧನಾಃ ॥೨೩೧॥

ಮುಖ್ಯಾಸ್ತು ಹವ್ಯಕವ್ಯೇಷು ತಸ್ಮಾನ್ಮೇ ದದತು ಶ್ರಿಯಮ್ ।
ಆಷಾಢಾದಿಚತುರ್ಮಾಸಾನ್ ವೃಂತಾಕಂ ವರ್ಜಯೇನ್ನರಃ ॥೨೩೨॥

---

ಪರಿತ್ಯಜಿಸಿದರೆ ವಿಷ್ಣುಲೋಕ ಪ್ರಾಪ್ತಿಯಾಗುವದಲ್ಲದೇ ಸಮಸ್ತಪಿತೃಗಳು ತೃಪ್ತರಾಗುವರು. ॥೨೨೬॥ ವ್ರತಾಂತದಲ್ಲಿ ಒಂದು ರಜತಪಾತ್ರೆಯನ್ನು ವಸ್ತ್ರದಿಂದ ಮುಚ್ಚಿ ಅದನ್ನು ಗಂಧ, ಪತ್ರ, ಪುಷ್ಪಗಳಿಂದ ಪೂಜಿಸಬೇಕು. ॥೨೨೭॥ ಮೂಲ, ಪತ್ರ, ಕರೀರಾಗ್ರ, ಫಲ, ಕಾಂಡ, ತ್ವಕ್ (ತೊಗಟೆ), ಪುಷ್ಪ ಮತ್ತು ಕವಚ ಎಂದು ಶಾಕವು ೮ ವಿಧವಾಗಿದೆ. ॥೨೨೮॥ ತಾನು ಮಾಡಿದ ವ್ರತಸಂಪೂರ್ತಿಗಾಗಿ ಈ ಉದ್ಯಾಪನೆಯ ದಿನ ಈ ಶಾಕಗಳನ್ನು ಭಕ್ತಿಯಿಂದ ಪೂಜಿಸಿ ವೇದಪಂಡಿತರಾದ ಬ್ರಾಹ್ಮಣರಿಗೆ ದಕ್ಷಿಣಾಸಹಿತವಾಗಿ ದಾನಮಾಡಬೇಕು. ॥೨೨೯॥ ಹೀಗೆ ಮಾಡುವದರಿಂದ ಶೂಲಪಾಣಿಯಾದ ಶಿವನ ಪ್ರಸಾದವಾಗಿ ಶಿವಸಾಯುಜ್ಯ ಪ್ರಾಪ್ತವಾಗುವದು. ಚಾತುರ್ಮಾಸ್ಯದಲ್ಲಿ ಗೋಧಿಯನ್ನು ವರ್ಜಿಸಿ ಭೋಜನ ಮಾಡುವ ವ್ರತವನ್ನು ಆಚರಿಸಿದವನು ॥೨೩೦॥ ಕಾರ್ತಿಕ (ಶುದ್ಧದ್ವಾದಶಿಯ ದಿನ)ದಲ್ಲಿ ಬಂಗಾರದ ಗೋಧಿಗಳನ್ನು ಮಾಡಿ ಅವುಗಳನ್ನು ವಸ್ತ್ರದಿಂದ ಆಚ್ಛಾದಿಸಿ ಯೋಗ್ಯನಾದ ಬ್ರಾಹ್ಮಣನಿಗೆ ದಕ್ಷಿಣಾಸಹಿತ ಕೊಡಬೇಕು. "ಗೋಧೀಕಾಳುಗಳು ಎಲ್ಲಪ್ರಾಣಿಗಳ ಬಲ, ಪುಷ್ಟಿಯನ್ನು ಹೆಚ್ಚಿಸುವವು. ॥೨೩೧॥ ಹವ್ಯಕವ್ಯಗಳಲ್ಲಿ ಇವು ಅತ್ಯಾವಶ್ಯಕವಾಗಿವೆ. ಆದ್ದರಿಂದ ಇವು ನನಗೆ ಸಂಪತ್ತನ್ನು ಕೊಡಲಿ" ಎಂದು ಪ್ರಾರ್ಥಿಸುತ್ತ ಸುವರ್ಣಗೋಧೀಕಾಳುಗಳನ್ನು ದಾನಮಾಡಬೇಕು. ಆಷಾಢಾದಿ ೪ ತಿಂಗಳು ಬದನೆಕಾಯಿ (ವೃಂತಾಕ), ॥೨೩೨॥ ಹಾಗಲುಕಾಯಿ (ಕಾರವೇಲ್ಲೀಫಲ),

ಕಾರವೇಲ್ಲೀಫಲಂ ವಾಪ್ಯಲಾಬುಂ ಪಟ್ಟಲಂ ತಥಾ ।
ಯದ್ವಾ ತದ್ವಾ ಫಲಂ ವಾಪಿ ಯಚ್ಚ ಪ್ರಿಯತಮಂ ಭವೇತ್ ॥೨೩೩॥

ಚಾತುರ್ಮಾಸ್ಯೇ ತತೋ ವೃತ್ತೇ ರೌಪ್ಯಾಣ್ಯೇತಾನಿ ಕಾರಯೇತ್ ।
ಮಧ್ಯೇ ವಿದ್ರುಮಯುಕ್ತಾನಿ ಹ್ಯರ್ಚಯಿತ್ವಾ ತು ಶಕ್ತಿತಃ ॥೨೩೪॥

ದದ್ಯಾದ್ದಕ್ಷಿಣಯಾ ಸಾರ್ಧಂ ಬ್ರಾಹ್ಮಣಾಯಾತಿಭಕ್ತಿತಃ ।
ಅಭೀಷ್ಟಂ ದೇವಮುದ್ದಿಶ್ಯ ದೇವೋ ಮೇ ಪ್ರೀಯತಾಮಿತಿ ॥೨೩೫॥

ಸ ದೀರ್ಘಮಾಯುರಾರೋಗ್ಯಂ ಪುತ್ರಪೌತ್ರಾನ್ ಸುರೂಪತಾಮ್ ।
ಅಕ್ಷಯಾಂ ಸಂತತಿಂ ಕೀರ್ತಿಂ ಲಬ್ಧ್ವಾ ಸ್ವರ್ಗೇ ಮಹೀಯತೇ ॥೨೩೬॥

ಫಲತ್ಯಾಗೀ ಭವೇದ್ಯಸ್ತು ವಿಷ್ಣುಲೋಕೇ ಸ ಪೂಜ್ಯತೇ ।
ಸಮಾಪ್ತೌ ಕಲಧೌತಾನಿ ತಾನಿ ದದ್ಯಾದ್ದ್ವಿಜಾತಯೇ ॥೨೩೭॥

ಶ್ರಾವಣೇ ವರ್ಜಯೇಚ್ಛಾಕಂ ದಧಿ ಭಾದ್ರಪದೇ ತಥಾ ।
ದುಗ್ಧಮಾಶ್ವಯುಜೇ ಮಾಸಿ ಕಾರ್ತಿಕೇ ದ್ವಿದಲಂ ತ್ಯಜೇತ್ ॥೨೩೮॥

---

ಈಸುಗುಂಬಳಕಾಯಿ (ಅಲಾಬು) ಹಾಗೂ ಪಡವಲಕಾಯಿ ಇವುಗಳನ್ನಲ್ಲದೇ ತನಗೆ ಅತಿಪ್ರಿಯವಾದ ಪದಾರ್ಥವನ್ನು ತ್ಯಜಿಸಬೇಕು. ॥೨೩೩॥ ಚಾತುರ್ಮಾಸ್ಯವು ಮುಗಿದ ದಿನ ಇವೆಲ್ಲವುಗಳನ್ನು ಮಧ್ಯದಲ್ಲಿ ಒಂದೊಂದು ಹವಳ (ವಿದ್ರುಮ)ವನ್ನಿಟ್ಟು ಬೆಳ್ಳಿಯಲ್ಲಿ ಮಾಡಿಸಿ ಭಕ್ತಿಯಿಂದ ಪೂಜಿಸಬೇಕು. ॥೨೩೪॥ ತನ್ನ ಶಕ್ತ್ಯನುಸಾರ ದಕ್ಷಿಣೆಯನ್ನು ಕೊಟ್ಟು ಅತಿಭಕ್ತಿಯಿಂದ ತಮ್ಮ ತಮ್ಮ ಅಭೀಷ್ಟದೇವತೆಯನ್ನು ಉದ್ದೇಶಿಸಿ "ದೇವತೆಯು ನನ್ನ ಮೇಲೆ ಅನುಗ್ರಹ ಮಾಡಲಿ" ಎಂದು ಪ್ರಾರ್ಥಿಸುತ್ತ ಬ್ರಾಹ್ಮಣರಿಗೆ ಇವುಗಳ ದಾನವನ್ನು ಮಾಡಬೇಕು. ॥೨೩೫॥ ಈ ದಾನದಿಂದ ದೀರ್ಘಾಯು, ಆರೋಗ್ಯ, ಪುತ್ರಪೌತ್ರರು, ಸೌಂದರ್ಯ, ದೇಹಕಾಂತಿ, ಅಖಂಡವಾದ ಸಂತತಿ, ಕೀರ್ತಿ ಮೊದಲಾದವುಗಳು ಪ್ರಾಪ್ತವಾಗಿ ಕೊನೆಗೆ ಸ್ವರ್ಗಲೋಕವು ದೊರೆಯುವದು. ॥೨೩೬॥ ಯಾವನು ಫಲಗಳನ್ನು ವರ್ಜಿಸಿ ಚಾತುರ್ಮಾಸ್ಯವ್ರತವನ್ನು ಆಚರಿಸುವನೋ ಮತ್ತು ಉದ್ಯಾಪನೆಯ ದಿನ ಸುವರ್ಣಫಲವನ್ನು ಬ್ರಾಹ್ಮಣರಿಗೆ ಕೊಡುವನೋ ಅವನು ಮರಣಾನಂತರ ವಿಷ್ಣುಲೋಕವನ್ನು ಹೊಂದುವನು. ॥೨೩೭॥ ಶ್ರಾವಣ ಮಾಸದಲ್ಲಿ ಶಾಕಗಳನ್ನು, ಭಾದ್ರಪದದಲ್ಲಿ ದಧಿಯನ್ನು, ಆಶ್ವಯುಜದಲ್ಲಿ ಹಾಲನ್ನು ಮತ್ತು ಕಾರ್ತಿಕದಲ್ಲಿ ದ್ವಿದಲ ಕಾಳುಗಳನ್ನು ವರ್ಜಿಸಬೇಕು. ॥೨೩೮॥ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸಗಳೆಂಬ ನಾಲ್ಕು ಆಶ್ರಮಗಳಲ್ಲಿರುವವರೆಲ್ಲರಿಗೂ ಇವು

ಚತ್ವಾರ್ಯೇತಾನಿ ನಿತ್ಯಾನಿ ಚತುರಾಶ್ರಮವರ್ತಿನಾಮ್ ।
ಪ್ರಥಮೇ ಮಾಸಿ ಕರ್ತವ್ಯಂ ನಿತ್ಯಂ ಶಾಕವ್ರತಂ ನರಃ ॥೨೩೯॥

ದ್ವಿತೀಯೇ ಮಾಸಿ ಕರ್ತಾವ್ಯಂ ದಧಿವ್ರತಮನುತ್ತಮಮ್ ।
ಪಯೋವ್ರತಂ ತೃತೀಯೇ ಚ ಚತುರ್ಥೇ ದ್ವಿದಲಂ ತಥಾ ॥೨೪೦॥

ಕೂಷ್ಮಾಂಡಂ ರಾಜಮಾಷಾಂಶ್ಚ ಮೂಲಕಂ ಗೃಂಜನಂ ತಥಾ ।
ಕರಮರ್ದಂ ಚೇಕ್ಷುದಂಡಂ ಚಾತುರ್ಮಾಸ್ಯೇ ತ್ಯಜೇನ್ನರಃ ॥೨೪೧॥

ಮಸೂರಂ ಬಹುಬೀಜಂ ಚ ವೃಂತಾಕಂ ಚೈವ ವರ್ಜಯೇತ್ ।
ನಿತ್ಯಾನ್ಯೇತಾನಿ ವಿಪ್ರೇಂದ್ರ ವ್ರತಾನ್ಯಾಹುರ್ಮನೀಷಿಣಃ ॥೨೪೨॥

ವಿಶೇಷಾದ್ಬದರೀಂ ಧಾತ್ರೀಮಲಾಬುಂ ತಿಂತ್ರಿಣೀಂ ತ್ಯಜೇತ್ ।
ಜೀರ್ಣಂ ಧಾತ್ರೀಫಲಂ ಗ್ರಾಹ್ಯಂ ಜೀರ್ಣಾ ಗ್ರಾಹ್ಯಾ ಚ ತಿಂತ್ರಿಣೀ ॥೨೪೩॥

ವಾರ್ಷಿಕಾಂಶ್ಚತುರೋ ಮಾಸಾನ್ ಪ್ರಸುಪ್ತೇ ಚ ಜನಾರ್ದನೇ ।
ಮಂಚಖಟ್ವಾದಿಶಯನಂ ವರ್ಜಯೇದ್ಭಕ್ತಿಮಾನ್ನರಃ ॥೨೪೪॥

ಅನೃತೌ ವರ್ಜಯೇದ್ಭಾರ್ಯಾಮೃತೌ ಗಚ್ಛನ್ನ ದುಷ್ಯತಿ ।
ಮಧುವಲ್ಲೀಂ ಚ ಶಿಗ್ರುಂ ಚ ಚಾತುರ್ಮಾಸ್ಯೇ ತ್ಯಜೇನ್ನರಃ ॥೨೪೫॥

---

ಕಡ್ಡಾಯವಾಗಿ ವರ್ಜಿಸಬೇಕಾದ ಪದಾರ್ಥಗಳಾಗಿವೆ. ವ್ರತಮಾಡುವವನು ಮೊದಲ ತಿಂಗಳು ಶಾಕವ್ರತವನ್ನು ॥೨೩೯॥ ಎರಡನೆಯ ತಿಂಗಳು ದಧಿವ್ರತವನ್ನು, ಮೂರುನೆಯ ತಿಂಗಳು ಪಯೋವ್ರತವನ್ನು ಮತ್ತು ನಾಲ್ಕನೆಯ ತಿಂಗಳು ದ್ವಿದಲವ್ರತವನ್ನು ಆಚರಿಸಬೇಕು. ಚಾತುರ್ಮಾಸ್ಯದಲ್ಲಿ ಸಂಡಿಗೆಗುಂಬಳಕಾಯಿ, ನೀಲೀಉದ್ದು (ರಾಜಮಾಷ), ಗಜ್ಜರಿ ಅಥವಾ ತಿನ್ನಲಿಕ್ಕೆ ಬರುವ ಕಂದ (ಮೂಲಕ) ಬೆಳ್ಳೊಳ್ಳಿ, ಕೆಂಪುಮೂಲಂಗಿ (ಗೃಂಜನ), ಕಮರಿಕೆ ಹಣ್ಣು (ಕರಮರ್ದ) , ಕಬ್ಬು ಇವುಗಳನ್ನು ತ್ಯಜಿಸಬೇಕು. ॥೨೪೧॥ ಕಾಡು ಕಡಲೆ (ಮಸೂರ), ಸೀತಾಫಲ (ಬಹುಬೀಜ), ಬದನೆಕಾಯಿ ಇವುಗಳನ್ನು ಕೂಡ ಸೇವಿಸಬಾರದು. ಹೇ ಯುಧಿಷ್ಠಿರಾ, ಈ ವ್ರತಗಳನ್ನು ಎಲ್ಲರೂ ತಪ್ಪದೇ ಪಾಲಿಸಬೇಕು ಎಂದು ಜ್ಞಾನಿಗಳು ಹೇಳಿದ್ದಾರೆ. ॥೨೪೨॥ ವಿಶೇಷವಾಗಿ ಬೋರೇಹಣ್ಣು, ನೆಲ್ಲೀಕಾಯಿ, ಈಸುಗುಂಬಳಕಾಯಿ ಮತ್ತು ಹುಣಸೇಕಾಯಿಗಳನ್ನು ವರ್ಜಿಸಬೇಕು. ಹಣ್ಣಾದ ನೆಲ್ಲೀಫಲವನ್ನು ಮತ್ತು ಹುಣಸೀಹಣ್ಣನ್ನು ಸ್ವೀಕರಿಸಬಹುದು. ॥೨೪೨॥ ಭಕ್ತಿಯುತನಾದವನು ಚಾತುರ್ಮಾಸ್ಯದಲ್ಲಿ ಮಂಚ, ಪಲ್ಲಂಗುಗಳ ಮೇಲೆ ಮಲಗಬಾರದು. ॥೨೪೪॥ ಋತುಕಾಲವಲ್ಲದ ಸಮಯದಲ್ಲಿ ಸ್ತ್ರೀಸಂಗವರ್ಜಿತವಾಗಿದ್ದರೂ ಋತುಕಾಲದಲ್ಲಿ ಪತ್ನೀಗಮನ ಮಾಡುವುದರಿಂದ ಯಾವದೋಷವಿಲ್ಲ. ಚಾತುರ್ಮಾಸ್ಯದಲ್ಲಿ ಸೀನಿಂಬೆ ಹಾಗೂ ದ್ರಾಕ್ಷೆ (ಮಧುವಲ್ಲೀ) ಮತ್ತು ನುಗ್ಗೀಕಾಯಿ (ಶಿಗ್ರು) ಇವುಗಳು ನಿಷಿದ್ಧವಾಗಿವೆ. ॥೨೪೫॥ ಯಾವನ ಉದರದಲ್ಲಿ

ವೃಂತಾಕಂ ಚ ಕಲಿಂಗಂ ಚ ಬಿಲ್ವೋದುಂಬರನಿಃಸಟಾಃ ।
ಉದರೇ ಯಸ್ಯ ಜೀರ್ಯಂತೇ ತಸ್ಯ ದೂರತರೋ ಹರಿಃ ॥೨೪೬॥

ಉಪವಾಸಂ ತಥಾ ನಕ್ತಮೇಕಭುಕ್ತಮಯಾಚಿತಮ್ ।
ಅಶಕ್ತಸ್ತು ಯಥಾ ಕುರ್ವನ್ ಸಾಯಂಪ್ರಾತರಖಂಡಿತಮ್ ॥೨೪೭॥

ಸ್ನಾನಪೂಜಾದಿಕಂ ಯಸ್ತು ಸ ನರೋ ಹರಿಲೋಕಭಾಕ್ ।
ಗೀತವಾದ್ಯಪರೋ ವಿಷ್ಣೋರ್ಗಾಂಧರ್ವಂ ಲೋಕಮಾಪ್ನುಯಾತ್ ॥೨೪೮॥

ಮಧುತ್ಯಾಗೀ ಭವೇದ್ರಾಜಾ ಪುರುಷೋ ಗುಡವರ್ಜನಾತ್ ।
ಲಭೇಚ್ಚ ಸಂತತಿಂ ದೀರ್ಘಾಂ ಪುತ್ರಪೌತ್ರಾದಿವರ್ಧಿನೀಮ್ ॥೨೪೯॥

ತೈಲಸ್ಯ ವರ್ಜನಾದ್ರಾಜನ್ ಸುಂದರಾಂಗಃ ಪ್ರಜಾಯತೇ ।
ಕೌಸುಸ್ತೈಲಸಂತ್ಯಾಗಾಚ್ಛತ್ರುನಾಶಮವಾಪ್ನುಯಾತ್ ॥೨೫೦॥

ಮಧೂಕತೈಲತ್ಯಾಗಾಚ್ಚ ಸುಸೌಭಾಗ್ಯಫಲಂ ಲಭೇತ್ ।
ಕಟುತಿಕ್ತಾಮ್ಲಮಧುರಕಷಾಯಲವಣಾನ್ ರಸಾನ್ ॥೨೫೧॥

---

ಬದನೆಕಾಯಿ, ಕಲಿಂಗಮೊದಲಾದ ನಿಷಿದ್ಧ ಪದಾರ್ಥಗಳು ಜೀರ್ಣವಾಗುತ್ತಿರುವವೋ ಮತ್ತು ಯಾವನ ಜಠರದಲ್ಲಿ ಬಿಲ್ವಪತ್ರ, ಉದುಂಬರಗಳು ಇರುವವೋ ಅವನಿಂದ ಶ್ರೀಹರಿಯು ದೂರ ಹೋಗುತ್ತಾನೆ ॥೨೪೬॥ ಚಾತುರ್ಮಾಸ್ಯದಲ್ಲಿ ಉಪವಾಸ, ನಕ್ತವ್ರತ, ಏಕಭುಕ್ತವ್ರತ, ಅಯಾಚಿತವ್ರತ ಇವುಗಳನ್ನು ಆಚರಿಸುವವನು, ಅಶಕ್ತನಾಗಿದ್ದರೆ ಸಾಯಂಪ್ರಾತಃ ಅಖಂಡವ್ರತವನ್ನು (ಉಂಡ ಊಟ ಕುಡಿದ ನೀರು) ಆಚರಿಸುವವನು ॥೨೪೭॥ ಸ್ನಾನಪೂಜಾದಿಗಳನ್ನು ಭಕ್ತಿಯಿಂದ ಮಾಡುವವನು. ಶ್ರೀಹರಿಯ ಲೋಕವನ್ನು ಸೇರುವನು. ವಿಷ್ಣುವಿನ ಪೂಜಾಸಮಯದಲ್ಲಿ ಗೀತಗಳನ್ನು ಹಾಡುತ್ತ ವಾದ್ಯಗಳನ್ನು ಬಾರಿಸುವವನು ಗಾಂಧರ್ವಲೋಕವನ್ನು ಹೊಂದುವನು. ॥೨೪೮॥ ಮಧುವನ್ನು ತ್ಯಜಿಸಿದವನು ಮರುಜನ್ಮದಲ್ಲಿ ರಾಜನಾಗುವನು. ಬೆಲ್ಲವನ್ನು ತ್ಯಜಿಸಿದವನು ಪುತ್ರಪೌತ್ರಾದಿಗಳಿಂದ ವರ್ಧಿಸುವ ಸಂತತಿಯನ್ನು ಪಡೆಯುವನು. ಹೇ ಧರ್ಮರಾಜ, ತಿಲವನ್ನು ಬಿಟ್ಟವನು ಸುಂದರಾಂಗಿಯಾಗುವನು ಮತ್ತು ಕೌಸುಸ್ತೈಲ(ಕುಸುಂಭ ಅರ್ಥಾತ್ ಕುಸುಂಬೆ ಬಣ್ಣದ ಹೂವಿನಿಂದ ತಯಾರಿಸಿದ ಎಣ್ಣೆ)ವನ್ನು ತ್ಯಜಿಸಿದವನ ಶತ್ರುಗಳೆಲ್ಲ ನಾಶವಾಗಿ ಹೋಗುತ್ತಾರೆ. ॥೨೫೦॥ ಮಧೂಕತೈಲವನ್ನು ತ್ಯಜಿಸಿದರೆ ಸುಸೌಭಾಗ್ಯಫಲವು ಪ್ರಾಪ್ತವಾಗುವದು. ಕಟು, ತಿಕ್ತ, ಆಮ್ಲ, ಮಧುರ, ಕಷಾಯ ಮತ್ತು ಲವಣ ಈ ರಸಗಳನ್ನು ॥೨೫೧॥ ಚಾತುರ್ಮಾಸ್ಯದಲ್ಲಿ ವರ್ಜಿಸಿದರೆ ಎಂದಿಗೂ ವೈರೂಪ್ಯ ಮತ್ತು ದೌರ್ಗಂಧ್ಯವನ್ನು ಹೊಂದುವದಿಲ್ಲ. ಪುಷ್ಪಾದಿ ಭೋಗ್ಯವಸ್ತುಗಳನ್ನು ತ್ಯಜಿಸಿದರೆ

ವರ್ಜಯೇತ್ಸ್ವ ಚ ವೈರೂಪ್ಯಂ ದೌರ್ಗಂಧ್ಯಂ ನಾಪ್ನುಯಾತ್ಸದಾ ।
ಪುಷ್ಪಾದಿಭೋಗತ್ಯಾಗೇನ ಸ್ವರ್ಗೇ ವಿದ್ಯಾಧರೋ ಭವೇತ್ ||೨೫೨||

ಯೋಗಾಭ್ಯಾಸೀ ಭವೇದ್ಯಸ್ತು ಸ ಬ್ರಹ್ಮಪದವೀಮಿಯಾತ್ ।
ತಾಂಬೂಲವರ್ಜನಾದ್ಯೋಗೀ ಸದ್ಯೋ ಮುಕ್ತಾಮಯೋ ಭವೇತ್ ||೨೫೩||

ಪಾದಾಭ್ಯಂಗಪರಿತ್ಯಾಗಾಚ್ಛಿರೋಭ್ಯಂಗಸ್ಯ ಪಾರ್ಥಿವ ।
ದೀಪ್ತಿಮಾನ್ ದೀಪ್ತಕರಣೋ ಯಕ್ಷದ್ರವ್ಯಪತಿರ್ಭವೇತ್ ||೨೫೪||

ದಧಿದುಗ್ಧಪರಿತ್ಯಾಗೀ ಗೋಲೋಕಂ ಲಭತೇ ನರಃ ।
ಇಂದ್ರಲೋಕಮವಾಪ್ನೋತಿ ಸ್ಥಾಲೀಪಾಕವಿವರ್ಜನಾತ್ ||೨೫೫||

ಏಕಾಂತರೋಪವಾಸೇನ ಬ್ರಹ್ಮಲೋಕೇ ಮಹೀಯತೇ ।
ಚತುರೋ ವಾರ್ಷಿಕಾನ್ಮಾಸಾನ್ ನಖರೋಮಾಣಿ ಧಾರಯೇತ್ ||೨೫೬||

ಕಲ್ಪಸ್ಥಾಯೀ ಭವೇದ್ರಾಜನ್ ಸ ನರೋ ನಾತ್ರ ಸಂಶಯಃ ।
ನಮೋ ನಾರಾಯಣಾಯೇತಿ ಜಪಿತ್ವಾಽನಂತಕಂ ಫಲಮ್ ||೨೫೭||

ವಿಷ್ಣುಪಾದಾಂಬುಜಸ್ಪರ್ಶಾತ್ ಕೃತಕೃತ್ಯೋ ಭವೇನ್ನರಃ ।
ಲಕ್ಷಪ್ರದಕ್ಷಿಣಾಂ ಯಸ್ತು ಕರೋತಿ ಹರಿಮಂದಿರೇ ||೨೫೮||

---

ಸ್ವರ್ಗದಲ್ಲಿ ವಿದ್ಯಾಧರನಾಗುವನು. ||೨೫೨|| ನಿತ್ಯ ಯೋಗಾಭ್ಯಾಸ ಮಾಡುವವನು ಬ್ರಹ್ಮಲೋಕವನ್ನು ಹೊಂದುವನು. ತಾಂಬೂಲ ವರ್ಜನೆಯಿಂದ ಯೋಗಿಯಾಗಿ ಕೂಡಲೇ ಸರ್ವರೋಗಗಳಿಂದ ಮುಕ್ತನಾಗುವನು. ||೨೫೩|| ಹೇ ಧರ್ಮರಾಜ, ಶಿರಸ್ಸು ಮತ್ತು ಪಾದಗಳಲ್ಲಿ ಎಣ್ಣೆಹಚ್ಚಿಕೊಳ್ಳದೇ ಅಭ್ಯಂಜನ ಸ್ನಾನಮಾಡುವವನು ಕಾಂತಿಯುತನಾಗಿ ದಿವ್ಯ ಇಂದ್ರಿಯಗಳನ್ನು ಹೊಂದಿ ಕುಬೇರನಂತಾಗುತ್ತಾನೆ. ||೨೫೪|| ದಧಿ, ಕ್ಷೀರಗಳನ್ನು ಬಿಟ್ಟವನು ಗೋಲೋಕವನ್ನು ಸೇರುವನು. ಸ್ಥಾಲೀಪಾಕ ವರ್ಜನೆಯಿಂದ ಇಂದ್ರಲೋಕವನ್ನು ಪಡೆಯುವನು. ||೨೫೫|| ಏಕಾಂತರೋಪವಾಸದಿಂದ (ಧಾರಣೆ ಪಾರಣೆ) ಬ್ರಹ್ಮಲೋಕ ಪ್ರಾಪ್ತಿಯಾಗುವದು. ನಾಲ್ಕು ತಿಂಗಳು ಉಗುರು ಕತ್ತರಿಸಿಕೊಳ್ಳದೇ ಮತ್ತು ಕ್ಷೌರಮಾಡಿಸಿಕೊಳ್ಳದೇ ಇರುವವನು ||೨೫೬|| ಕಲ್ಪಾಂತದವರೆಗೆ ಸುಖದಿಂದ ಇರುವನು. "ಓಂ ಶ್ರೀ ನಮೋ ನಾರಾಯಣಾಯ" ಎಂಬ ಅಷ್ಟಾಕ್ಷರ ಮಂತ್ರವನ್ನು ಜಪಿಸಿದರೆ ಅನಂತ ಫಲವಿದೆ. ||೨೫೭|| ಶ್ರೀವಿಷ್ಣುವಿನ ಪಾದೋದಕವನ್ನು ಸ್ಪರ್ಶ ಮಾಡುವ ಮಾತ್ರದಿಂದ ನರನು ಕೃತಕೃತ್ಯನಾಗುತ್ತಾನೆ. ಶ್ರೀಹರಿಯ ಮಂದಿರದಲ್ಲಿ ಒಂದು ಲಕ್ಷ ಪ್ರದಕ್ಷಿಣ ನಮಸ್ಕಾರಗಳನ್ನು ಹಾಕುವವನು ||೨೫೮|| ಹಂಸಯುಕ್ತ ವಿಮಾನದಲ್ಲಿ ಕುಳಿತು ವೈಷ್ಣವಲೋಕಕ್ಕೆ ಹೋಗುವನು.

ಹಂಸಯುಕ್ತವಿಮಾನೇನ ಸ ಯಾತಿ ವೈಷ್ಣವೀಂ ಪುರೀಮ್ ।
ತ್ರಿರಾತ್ರಭೋಜನತ್ಯಾಗಾನ್ಮೋದತೇ ದಿವಿ ದೇವವತ್ ॥೨೫೯॥

ಪರಾನ್ನವರ್ಜನಾದ್ರಾಜಾನ್ ದೇವೋ ವೈ ಮಾನುಷೋ ಭವೇತ್ ।
ಪ್ರಾಜಾಪತ್ಯಂ ಚರೇದ್ಯೋ ವೈ ಚಾತುರ್ಮಾಸ್ಯೇ ವ್ರತಂ ನರಃ ॥೨೬೦॥

ಮುಚ್ಯತೇ ಪಾತಕೈಃ ಸರ್ವೈಸ್ತ್ರಿವಿಧೈರ್ನಾತ್ರ ಸಂಶಯಃ ।
ತಪ್ತಕೃಚ್ಛ್ರಾತಿಕೃಚ್ಛ್ರಾಭ್ಯಾಂ ಯಃ ಕ್ಷಿಪೇಚ್ಛಯನಂ ಹರೇಃ ॥೨೬೧॥

ಸ ಯಾತಿ ಪರಮಂ ಸ್ಥಾನಂ ಪುನರಾವೃತ್ತಿವರ್ಜಿತಮ್ ।
ಚಾಂದ್ರಾಯಣೇನ ಯೋ ರಾಜನ್ ಕ್ಷಿಪೇನ್ಮಾಸಚತುಷ್ಟಯಮ್ ॥೨೬೨॥

ದಿವ್ಯದೇಹೋ ಭವೇತ್ಸೋಽಥ ಶಿವಲೋಕಂ ಚ ಗಚ್ಛತಿ ।
ಚಾತುರ್ಮಾಸ್ಯೇ ನರೋ ಯೋ ವೈ ತ್ಯಜೇದನ್ನಾದಿಭಕ್ಷಣಮ್ ॥೨೬೩॥

ಸ ಗಚ್ಛೇದ್ಧರಿಸಾಯುಜ್ಯಂ ನ ಭೂಯಸ್ತು ಪ್ರಜಾಯತೇ ।
ಭಿಕ್ಷಾಭೋಜೀ ನರೋ ಯೋ ಹಿ ಸ ಭವೇದ್ವೇದಪಾರಗಃ ॥೨೬೪॥

ಪಯೋವ್ರತೇನ ಯೋ ರಾಜನ್ ಕ್ಷಿಪೇನ್ಮಾಸಚತುಷ್ಟಯಮ್ ।
ತಸ್ಯ ವಂಶಸಮುಚ್ಛೇದಃ ಕದಾಚಿನ್ನೋಪಪದ್ಯತೇ ॥೨೬೫॥

---

ಮೂರುದಿನ ಉಪವಾಸದಿಂದ ಇದ್ದರೆ ಅವನು ಸ್ವರ್ಗದಲ್ಲಿದ್ದು ದೇವತೆಯಂತೆ ಶೋಭಿಸುವನು. ॥೨೫೯॥ ಹೇ ಧರ್ಮರಾಜ, ಪರಾನ್ನವರ್ಜನೆಯಿಂದ ಮನುಷ್ಯನು ದೇವತೆಯಂತಾಗುವನು. ಚಾತುರ್ಮಾಸ್ಯದಲ್ಲಿ ಪ್ರಾಜಾಪತ್ಯ ವ್ರತವನ್ನು ಆಚರಿಸಿದವನು ॥೨೬೦॥ ಕಾಯಿಕ, ವಾಚಕ ಹಾಗೂ ಮಾನಸಿಕ ಪಾಪಗಳಿಂದ ಮುಕ್ತನಾಗುವನು. ಶ್ರೀಹರಿಯ ಶಯನೋತ್ಸವದ ನಂತರ ಯಾವನು ತಪ್ತಕೃಚ್ಛ್ರ ಮತ್ತು ಕೃಚ್ಛ್ರ ಎಂಬ ವ್ರತಗಳಿಂದ ಚಾತುರ್ಮಾಸ್ಯವನ್ನು ಕಳೆಯುವನೋ ಅವನು ॥೨೬೧॥ ಪುನರಾವೃತ್ತಿ ರಹಿತವಾದ ಪರಮಸ್ಥಾನವನ್ನು (ಅಂದರೆ ಮೋಕ್ಷವನ್ನು) ಹೊಂದುವನು. ಚಾಂದ್ರಾಯಣವ್ರತದಿಂದ ಚಾತುರ್ಮಾಸ್ಯದ ನಾಲ್ಕು ತಿಂಗಳುಗಳನ್ನು ಕಳೆದರೆ ॥೨೬೨॥ ದಿವ್ಯದೇಹವನ್ನು ಹೊಂದಿ ಕೈಲಾಸವನ್ನು ಪಡೆಯುವನು. ಚಾತುರ್ಮಾಸ್ಯದಲ್ಲಿ ಅನ್ನಾದಿಭಕ್ಷಣಗಳನ್ನು ತ್ಯಜಿಸಿದವನು ॥೨೬೩॥ ಶ್ರೀಹರಿಯ ಸಾಯುಜ್ಯಪದವಿಯನ್ನು ಹೊಂದುವನಾದ್ದರಿಂದ ಭೂಲೋಕದಲ್ಲಿ ಮತ್ತೆ ಹುಟ್ಟುವದಿಲ್ಲ. ಭಿಕ್ಷೆಯಿಂದ ಬಂದ ಆಹಾರವನ್ನು ಸೇವಿಸಿದವನು ವೇದಪಂಡಿತನಾಗುವನು. ॥೨೬೪॥ ಪಯೋವ್ರತದಿಂದ ನಾಲ್ಕುತಿಂಗಳು ಕಳೆದವನ ವಂಶವಿಚ್ಛೇದವು ಯಾವಕಾಲದಲ್ಲೂ ಆಗುವದಿಲ್ಲ. ॥೨೬೫॥ ಹೇ ಯುಧಿಷ್ಠಿರ, ಪಂಚಗವ್ಯವನ್ನು ಮಾತ್ರ ಸೇವಿಸುವವನು ಚಾಂದ್ರಾಯಣವ್ರತದ ಫಲವನ್ನು

ಪಂಚಗವ್ಯಾಶನಃ ಪಾರ್ಥ ಚಾಂದ್ರಾಯಣಫಲಂ ಲಭೇತ್ ।
ದಿನತ್ರಯಂ ಜಲತ್ಯಾಗಾನ್ನ ರೋಗೈರಭಿಭೂಯತೇ ॥೨೬೬॥

ಏವಮಾದಿವ್ರತೈಃ ಪಾರ್ಥ ತುಷ್ಟಿಮಾಯಾತಿ ಕೇಶವಃ
ದುಗ್ಧಾಬ್ಧಿವೀಚಿ ಶಯನೇ ಭಗವಾನನಂತೋ ।
ಯಸ್ಮಿನ್ ದಿನೇ ಸ್ವಪಿತಿ ಚಾಥ ವಿಬುಧ್ಯತೇ ಚ ।
ತಸ್ಮಿನ್ನನನ್ಯಮನಸಾಮುಪವಾಸಭಾಜಾಂ ।
ಪುಂಸಾಂ ದದಾತಿ ಚ ಗತಿಂ ಗರುಡಾಸನೋಽಸೌ ॥೨೬೭॥

॥ ಇತಿ ಶ್ರೀಭವಿಷ್ಯೋತ್ತರಪುರಾಣೇ ಆಷಾಢಶುಕ್ಲ ವಿಷ್ಣುಶಯನ್ಯೇಕಾದಶೀ ವ್ರತಮಾಹಾತ್ಮ್ಯಂ ಸಂಪೂರ್ಣಮ್ ॥

---

ಪಡೆಯುವನು. ಮೂರುದಿನ ನೀರನ್ನು ಬಿಟ್ಟರೆ ಯಾವರೋಗಗಳಿಂದಲೂ ಬಾಧಿತನಾಗುವದಿಲ್ಲ. ॥೨೬೭॥ ಹೇ ಧರ್ಮರಾಜಾ, ಇವೇ ಮೊದಲಾದ ವ್ರತಗಳನ್ನು ಆಚರಿಸುವದರಿಂದ ಶ್ರೀಕೇಶವನು ಪ್ರಸನ್ನನಾಗುತ್ತಾನೆ. ಕ್ಷೀರಸಮುದ್ರದಲ್ಲಿ ಭಗವಾನ್ ಅನಂತನು ಯಾವದಿನ ಮಲಗುವನೋ (ಆ.ಶು.೧೧) ಮತ್ತು ಯಾವದಿನ ಏಳುವನೋ (ಕಾ.ಶು.೧೨) ಆ ಎರಡು ದಿನಗಳಂದು ಉಪವಾಸದಿಂದ ಇರುವವರಿಗೆ ಗರುಡವಾಹನನಾದ ಶ್ರೀಹರಿಯು ಉತ್ತಮ ಗತಿಯನ್ನು ಕೊಡುವನು.

॥ ಇಲ್ಲಿಗೆ ಶ್ರೀಭವಿಷ್ಯೋತ್ತರ ಪುರಾಣದಲ್ಲಿ "ವಿಷ್ಣುಶಯನೀ ಏಕಾದಶೀ" ಮತ್ತು "ಚಾತುರ್ಮಾಸ್ಯಮಹಾತ್ಮೆ"ಯು ಸಮಾಪ್ತವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

# ಶ್ರಾವಣಕೃಷ್ಣೈಕಾದಶೀ ವ್ರತಕಥಾ

ಯುಧಿಷ್ಠಿರ ಉವಾಚ

ಆಷಾಢಶುಕ್ಲಪಕ್ಷೇ ತು ಯದ್ದೇವಶಯನವ್ರತಮ್ ।
ತನ್ಮಯಾ ಶ್ರುತಪೂರ್ವಂ ಹಿ ಪುರಾಣೇ ಬಹುವಿಸ್ತರಮ್ ॥೧॥

ಶ್ರಾವಣೇ ಕೃಷ್ಣಪಕ್ಷೇ ತು ಕಿಂನಾಮ್ನ್ಯೇಕಾದಶೀ ಭವೇತ್ ।
ಏತತ್ಕಥಯ ಗೋವಿಂದ ವಾಸುದೇವ ನಮೋಽಸ್ತು ತೇ ॥೨॥

ಶ್ರೀಕೃಷ್ಣ ಉವಾಚ

ಶೃಣು ರಾಜನ್ ಪ್ರವಕ್ಷ್ಯಾಮಿ ವ್ರತಂ ಪಾಪಪ್ರಣಾಶನಮ್ ।
ನಾರದಾಯ ಪುರಾ ರಾಜನ್ ಪೃಚ್ಛತೇ ಚ ಪಿತಾಮಹಃ ॥೩॥

ಪರಂ ಯದುಕ್ತವಾಂಸ್ತಾತ ತದಹಂ ತೇ ವದಾಮಿ ಚ ।

ನಾರದ ಉವಾಚ

ಭಗವನ್ ಶ್ರೋತುಮಿಚ್ಛಾಮಿ ತ್ವತ್ತೋಽಹಂ ಕಮಲಾಸನ ॥೪॥

ಶ್ರಾವಣಸ್ಯಾಸಿತೇ ಪಕ್ಷೇ ಕಿಂ ನಾಮ್ನ್ಯೇಕಾದಶೀ ಭವೇತ್ ।
ಕೋ ದೇವಃ ಕೋ ವಿಧಿಸ್ತಸ್ಯಾಃ ಕಿಂ ಪುಣ್ಯಂ ಕಥಯ ಪ್ರಭೋ ॥೫॥

ಬ್ರಹ್ಮೋವಾಚ

ಇತಿ ತಸ್ಯ ವಚಃ ಶ್ರುತ್ವಾ ಬ್ರಹ್ಮಾ ವಚನಮಬ್ರವೀತ್ ।
ಶೃಣು ನಾರದ ತೇ ವಚ್ಮಿ ಲೋಕಾನಾಂ ಹಿತಕಾಮ್ಯಯಾ ॥೬॥

---

"ಹೇ ಶ್ರೀಕೃಷ್ಣ, ಆಷಾಢಶುಕ್ಲಪಕ್ಷದ ಶಯನೀ ಏಕಾದಶಿಯ ಬಗ್ಗೆ ನಿನ್ನಿಂದ ಬಹು ವಿಸ್ತಾರವಾಗಿ ಕೇಳಿ ತಿಳಿದೆನು. ॥೧॥ ಇನ್ನು ಶ್ರಾವಣಕೃಷ್ಣಪಕ್ಷದ ಏಕಾದಶಿಯ ಬಗ್ಗೆ ತಿಳಿಸು. ಈ ಏಕಾದಶಿಯ ಹೆಸರೇನು? ಹೇ ಗೋವಿಂದ, ವಾಸುದೇವ, ನಿನಗೆ ಅನಂತ ನಮಸ್ಕಾರಗಳು. ನಾನು ಕೇಳಿದುದೆಲ್ಲವನ್ನು ತಿಳಿಸಿ ಅನುಗ್ರಹಿಸು" ಎಂದು ಯುಧಿಷ್ಠಿರನು ಪ್ರಾರ್ಥಿಸಲು ॥೨॥ ಶ್ರೀಕೃಷ್ಣನು ಹೇಳುತ್ತಾನೆ - ಹೇ ರಾಜನ್, ಪಾಪನಾಶಕವಾದ ಶ್ರಾವಣಕೃಷ್ಣ ಏಕಾದಶೀವ್ರತದ ಮಹಾತ್ಮ್ಯೆಯನ್ನು ತಿಳಿಸುವೆನು ಕೇಳು. ಹಿಂದಕ್ಕೆ ಇದೇ ಏಕಾದಶಿಯ ಬಗ್ಗೆ ತಿಳಿಯಲು ಬಯಸಿದ ನಾರದನಿಗೆ ಪಿತಾಮಹ ಚತುರ್ಮುಖ ಬ್ರಹ್ಮನು ॥೩॥ ಏನು ತಿಳಿಸಿದನೋ ಅದನ್ನೇ ನಿನಗೆ ಈಗ ತಿಳಿಸುವೆನು. ಹಿಂದಕ್ಕೆ ಒಮ್ಮೆ ನಾರದನು ಚತುರ್ಮುಖ ಬ್ರಹ್ಮನನ್ನು ಕುರಿತು "ಭಗವನ್, ಕಮಲಾಸನ, ॥೪॥ ನಿಮ್ಮಿಂದ ಶ್ರಾವಣಕೃಷ್ಣಪಕ್ಷದ ಏಕಾದಶಿಯ ಹೆಸರು, ಆ ಏಕಾದಶಿಯ ದೇವತೆ, ವ್ರತದ ವಿಧಾನ ಮತ್ತು ವ್ರತಾನುಷ್ಠಾನದ ಫಲ ಇದೆಲ್ಲವನ್ನು ತಿಳಿಯಬಯಸಿದ್ದೇನೆ. ಹೇ ಪ್ರಭೋ, ಈ ಬಗ್ಗೆ ತಿಳಿಸಿ ಅನುಗ್ರಹಿಸಿರಿ" ಎಂದು ಪ್ರಾರ್ಥಿಸಿದನು. ಆಗ ಚತುರ್ಮುಖ ಬ್ರಹ್ಮನು ಏನು ಹೇಳಿದನೆಂದರೆ - ನಾರದ, ಲೋಕದ ಜನರಿಗೆ ಹಿತವಾಗಲೆಂಬ ಉದ್ದೇಶದಿಂದ ನೀನು ಕೇಳಿದುದೆಲ್ಲವನ್ನು ತಿಳಿಸುವೆನು ಕೇಳು. ॥೫॥ ॥೬॥ ಶ್ರಾವಣಮಾಸದ ಕೃಷ್ಣಪಕ್ಷದ

ಶ್ರಾವಣಸ್ಯೈಕಾದಶೀ ಕೃಷ್ಣಾ ಕಾಮಿಕೇತಿ ಚ ನಾಮತಃ |
ತಸ್ಯಾಃ ಶ್ರವಣಮಾತ್ರೇಣ ವಾಜಪೇಯಫಲಂ ಲಭೇತ್ ||೭||

ತಸ್ಯಾಂ ಯಃ ಪೂಜಯೇದ್ದೇವಂ ಶಂಖಚಕ್ರಗದಾಧರಮ್ |
ಶ್ರೀಧರಾಖ್ಯಂ ಹರಿಂ ವಿಷ್ಣುಂ ಮಾಧವಂ ಮಧುಸೂದನಮ್ ||೮||

ಯಜತೇ ಧ್ಯಾಯತೇ ಯೋ ವೈ ತಸ್ಯ ಪುಣ್ಯಫಲಂ ಶೃಣು |
ನ ಗಂಗಾಯಾಂ ನ ಕಾಶ್ಯಾಂ ವೈ ನೈಮಿಷೇ ನ ಚ ಪುಷ್ಕರೇ ||೯||

ತತ್ಫಲಂ ಸಮವಾಪ್ನೋತಿ ಯತ್ಫಲಂ ವಿಷ್ಣುಪೂಜನಾತ್ |
ಕೇದಾರೇ ಚ ಕುರುಕ್ಷೇತ್ರೇ ರಾಹುಗ್ರಸ್ತೇ ದಿವಾಕರೇ ||೧೦||

ನ ತತ್ಫಲಮವಾಪ್ನೋತಿ ಯತ್ಫಲಂ ಕೃಷ್ಣಪೂಜನಾತ್ |
ಸಸಾಗರವನೋಪೇತಾಂ ಯೋ ದದಾತಿ ವಸುಂಧರಾಮ್ ||೧೧||

ಗೋದಾವರ್ಯಾಂ ಗುರೌ ಸಿಂಹೇ ವ್ಯತೀಪಾತೇ ಚ ಗಂಡಕೇ |
ನ ತತ್ಫಲಮವಾಪ್ನೋತಿ ಯತ್ಫಲಂ ಕೃಷ್ಣಪೂಜನಾತ್ ||೧೨||

---

ಏಕಾದಶಿಗೆ "ಕಾಮಿಕಾ" ಎಂದು ಹೆಸರು. ಇದರ ಮಾಹಾತ್ಮ್ಯೆಯ ಶ್ರವಣಮಾತ್ರದಿಂದ ವಾಜಪೇಯಯಾಗದ ಫಲವು ಪ್ರಾಪ್ತವಾಗುವದು. ||೭|| ಈ ಏಕಾದಶಿಯ ದಿನ ಶಂಖಚಕ್ರಗದಾಧಾರಿಯಾದ, ಲಕ್ಷ್ಮೀಪತಿಯಾದ, ಮಧುನಾಮಕ ದೈತ್ಯನ ಸಂಹಾರಿಯಾದ, ಸರ್ವತ್ರ ವ್ಯಾಪ್ತನಾದ ಶ್ರೀಧರರೂಪೀ ಶ್ರೀಹರಿಯನ್ನು ಯಾವನು ಭಕ್ತಿಯಿಂದ ಪೂಜಿಸುವನೋ ||೮|| ಮತ್ತು ಅವನನ್ನು ಕುರಿತು ಯಜನ ಧ್ಯಾನಗಳನ್ನು ಮಾಡುವನೋ ಅವನ ಪುಣ್ಯದ ಮಿತಿಯನ್ನು ತಿಳಿಸುವೆನು ಕೇಳು. ವಿಷ್ಣುಪೂಜೆಯಿಂದ ಬರುವಷ್ಟು ಪುಣ್ಯವು, ಗಂಗಾ, ಕಾಶಿ, ನೈಮಿಷಾರಣ್ಯ ಹಾಗೂ ಪುಷ್ಕರಗಳಲ್ಲಿ ಸ್ನಾನ ಹಾಗೂ ವಾಸಗಳಿಂದಲೂ ಲಭಿಸಲಾರದು. ಸೂರ್ಯಗ್ರಹಣವಾದಾಗ ಈ ಸ್ಥಳಗಳಲ್ಲಿ ಮತ್ತು ಕೇದಾರ ಹಾಗೂ ಕುರುಕ್ಷೇತ್ರಗಳಲ್ಲಿಯೂ ಸ್ನಾನಮಾಡಿ ತರ್ಪಣಗಳನ್ನು ಕೊಟ್ಟರೂ ||೯|| ||೧೦|| ವಿಷ್ಣುಪೂಜೆಯಿಂದ ಬರುವಷ್ಟು ಪುಣ್ಯವು ಬರಲಾರದು. ಸಪ್ತಸಾಗರಗಳಿಂದ ಹಾಗೂ ವನೋಪವನಗಳಿಂದ ಯುಕ್ತವಾದ ಭೂಮಿಯನ್ನು ದಾನಮಾಡಿದಾಗಲೂ ||೧೧|| ಗುರುವು ಸಿಂಹಸ್ಥನಾಗಿರುವಾಗ ಗೋದಾವರಿಯಲ್ಲಿ, ವ್ಯತೀಪಾತದಲ್ಲಿ, ಗಂಡಕೀನದಿಯಲ್ಲಿ ಸ್ನಾನಾದಿಗಳನ್ನು ಮಾಡುವದರಿಂದಲೂ ಏಕಾದಶಿಯ ದಿನ ಶ್ರೀಕೃಷ್ಣನ ಪೂಜೆಯಿಂದ ಬರುವಷ್ಟು ಫಲವು ಪ್ರಾಪ್ತವಾಗುವದಿಲ್ಲ. ||೧೨|| ಪ್ರಸವಿಸುತ್ತಿರುವ ಗೋವನ್ನು ಆಹಾರಸಾಮಗ್ರಿಗಳೊಂದಿಗೆ

ಕಾಮಿಕಾವ್ರತಕಾರೀ ಚ ಹ್ಯುಭೌ ಸಮಫಲೌ ಸ್ಮೃತೌ ।
ಪ್ರಸೂಯಮಾನಾಂ ಯೋ ಧೇನುಂ ದದ್ಯಾತ್ಸೋಪಸ್ಕರಾಂ ನರಃ ॥೧೩॥

ತತ್ಫಲಂ ಸಮವಾಪ್ನೋತಿ ಕಾಮಿತಾವ್ರತಕಾರಕಃ ।
ಶ್ರಾವಣೇ ಶ್ರೀಧರಂ ದೇವಂ ಪೂಜಯೇದ್ಯೋ ನರೋತ್ತಮಃ ॥೧೪॥

ತೇನೈವ ಪೂಜಿತಾ ದೇವಾ ಗಂಧರ್ವೋರಗಪನ್ನಗಾಃ ।
ತಸ್ಮಾತ್ಸರ್ವಪ್ರಯತ್ನೇನ ಕಾಮಿಕಾದಿವಸೇ ಹರಿಃ ॥೧೫॥

ಪೂಜನೀಯೋ ಯಥಾಶಕ್ತ್ಯಾ ಮನುಷ್ಯೈಃ ಪಾಪಭೀರುಭಿಃ ।
ಸಂಸಾರಾರ್ಣವಮಗ್ನಾ ಯೇ ಪಾಪಪಂಕಸಮಾಕುಲಾಃ ॥೧೬॥

ತೇಷಾಮುದ್ಧರಣಾರ್ಥಾಯ ಕಾಮಿಕಾವ್ರತಮುತ್ತಮಮ್ ।
ನಾತಃ ಪರತರಾ ಕಾಚಿತ್ ಪವಿತ್ರಾ ಪಾಪಹಾರಿಣೀ ॥೧೭॥

ಏವಂ ನಾರದ ಜಾನೀಹಿ ಸ್ವಯಮಾಹ ಪುರಾ ಹರಿಃ ।
ಅಧ್ಯಾತ್ಮವಿದ್ಯಾನಿರತೈರ್ಯತ್ಫಲಂ ಪ್ರಾಪ್ಯತೇ ನರೈಃ ॥೧೮॥

ತತೋ ಬಹುತರಂ ವಿದ್ಧಿ ಕಾಮಿಕಾವ್ರತಸೇವನಾತ್ ।
ರಾತ್ರೌ ಜಾಗರಣಂ ಕುರ್ಯಾತ್ ಕಾಮಿಕಾವ್ರತಕೃನ್ನರಃ ॥೧೯॥

---

ದಾನಮಾಡುವವನು ಮತ್ತು ಕಾಮಿಕಾ ಏಕಾದಶಿವ್ರತವನ್ನು ಮಾಡುವವನು ಇಬ್ಬರೂ ಸಮನಾದ ಫಲವನ್ನು ಹೊಂದುವರು. ॥೧೩॥ ಇದೇ ಫಲವನ್ನು ಶ್ರಾವಣಮಾಸದಲ್ಲಿ ಶ್ರೀಧರದೇವನನ್ನು ಪೂಜಿಸುವನೂ ಪಡೆಯುವನು. ॥೧೪॥ ಶ್ರೀಧರನ ಪೂಜಾಮಾಡುವ ಮಾತ್ರದಿಂದ ಸಕಲದೇವತೆಗಳನ್ನು ಗಂಧರ್ವ, ನಾಗ, ಗರುಡರನನ್ನೂ ಪೂಜಿಸಿದಂತಾಗುತ್ತದೆ. ಆದ್ದರಿಂದ ಪಾಪಭೀರುಗಳಾದ ಜನರು ಸರ್ವಪ್ರಯತ್ನಪೂರ್ವಕ ಕಾಮಿಕಾ ಏಕಾದಶಿಯ ದಿನ ॥೧೫॥ ಶ್ರೀಹರಿಯನ್ನು ಯಥಾಶಕ್ತಿಯಿಂದ ಪೂಜಿಸಬೇಕು. ಸಂಸಾರಸಾಗರದಲ್ಲಿ ಮಗ್ನರಾಗಿರುವ, ಪಾಪದ ಕೆಸರಿನಲ್ಲಿ ಸಿಕ್ಕು ಓದ್ದಾಡುತ್ತಿರುವ ಜನರ ॥೧೬॥ ಉದ್ಧಾರವಾಗುವದಕ್ಕೆ ಈ ಕಾಮಿಕಾ ವ್ರತವು ಅತ್ಯಂತ ಶ್ರೇಷ್ಠವಾದ ಉಪಾಯವಾಗಿದೆ. ಹೇ ನಾರದಾ, ಇದಕ್ಕಿಂತ ಹೆಚ್ಚಿನದಾದ, ಪವಿತ್ರವಾದ ಮತ್ತು ಪಾಪನಾಶಕವಾದ ಬೇರೊಂದು ಉಪಾಯವಿಲ್ಲವೆಂದು ॥೧೭॥ ಸ್ವತಃ ಶ್ರೀಹರಿಯೇ ಹಿಂದಕ್ಕೆ ಹೇಳಿರುವ ವಿಷಯವನ್ನು ನೀನು ಚೆನ್ನಾಗಿ ತಿಳಿದುಕೋ. ಸತತ ಅಧ್ಯಾತ್ಮವಿದ್ಯೆಯಲ್ಲಿ ಆಸಕ್ತರಾದ ಜನರು ಪಡೆಯುವ ಫಲಕ್ಕಿಂತಲೂ ॥೧೮॥ ಅಧಿಕವಾದ ಫಲವನ್ನು ಕಾಮಿಕಾವ್ರತವನ್ನು ಮಾಡುವ ಜನರು ಪಡೆಯುತ್ತಾರೆ. ಕಾಮಿಕಾವ್ರತವನ್ನು ಆಚರಿಸುವವನು ರಾತ್ರಿ ಜಾಗರಣೆಯನ್ನು ಮಾಡಬೇಕು. ॥೧೯॥ ಇದರಿಂದ ಅವನೆಂದಿಗೂ ಭಯಂಕರನಾದ ಯಮನನ್ನು ಕಾಣುವದಿಲ್ಲ ಅಷ್ಟೇ ಅಲ್ಲ, ದುರ್ಗತಿಯನ್ನೂ ಹೊಂದುವದಿಲ್ಲ.

ನ ಪಶ್ಯತಿ ಯಮಂ ರೌದ್ರಂ ನೈವ ಪಶ್ಯತಿ ದುರ್ಗತಿಮ್ ।
ನ ಪಶ್ಯತಿ ಕುಯೋನಿಂ ಚ ಕಾಮಿಕಾವ್ರತಸೇವನಾತ್ ॥೨೦॥

ಕಾಮಿಕಯಾ ವ್ರತೇನೈವ ಕೈವಲ್ಯಂ ಯೋಗಿನೋ ಗತಾಃ ।
ತಸ್ಮಾತ್ಸರ್ವಪ್ರಯತ್ನೇನ ಕರ್ತವ್ಯೋ ನಿಯತಾತ್ಮಭಿಃ ॥೨೧॥

ತುಲಸೀಪ್ರಭವೈಃ ಪತ್ರೈರ್ಯೋ ನರಃ ಪೂಜಯೇದ್ಧರಿಮ್ ।
ನ ವೈ ಸ ಲಿಪ್ಯತೇ ಪಾಪೈಃ ಪದ್ಮಪತ್ರಮಿವಾಂಭಸಾ ॥೨೨॥

ಸುವರ್ಣಭಾರಮೇಕಂ ತು ರಜತಂ ಚ ಚತುರ್ಗುಣಮ್ ।
ತತ್ಫಲಂ ಸಮವಾಪ್ನೋತಿ ತುಲಸೀದಲಪೂಜನಾತ್ ॥೨೩॥

ರತ್ನಮೌಕ್ತಿಕವೈದೂರ್ಯಪ್ರವಾಲಾದಿಭಿರರ್ಚಿತಃ ।
ನ ತುಷ್ಯತಿ ತಥಾ ವಿಷ್ಣುಸ್ತುಲಸೀಪೂಜನಾದ್ಯಥಾ ॥೨೪॥

ತುಲಸೀಮಂಜರೀಭಿಸ್ತು ಪೂಜಿತೋ ಯೇನ ಕೇಶವಃ ।
ಆಜನ್ಮಕೃತಪಾಪಸ್ಯ ತೇನ ಸಮ್ಮಾರ್ಜಿತಾ ಲಿಪಿಃ ॥೨೫॥

---

ಕಾಮಿಕಾವ್ರತಾನುಷ್ಠಾನದಿಂದ ಕುಯೋನಿಯನ್ನು ಸೇರುವದಿಲ್ಲ. ॥೨೦॥ ಕಾಮಿಕಾವ್ರತಾನುಷ್ಠಾನದಿಂದ ಯೋಗಿಗಳೂ ಮುಕ್ತಿಯನ್ನು ಪಡೆದಿದ್ದಾರೆ. ಆದ್ದರಿಂದ ಸರ್ವಪ್ರಯತ್ನದಿಂದ ಹಾಗೂ ಅತ್ಯಂತ ಆಸಕ್ತಿಯಿಂದ ಜನರು ತಪ್ಪದೇ ಈ ವ್ರತವನ್ನು ಆಚರಿಸಬೇಕು. ॥೨೧॥ ಕೋಮಲವಾದ ತುಳಸೀದಳಗಳಿಂದ ಶ್ರೀಹರಿಯನ್ನು ಪೂಜಿಸುವವನನ್ನು ನೀರಿನಲ್ಲಿಯ ಕಮಲದಂತೆ ಯಾವಪಾಪಗಳೂ ಮುಟ್ಟಲಾರವು. ॥೨೨॥ ಒಂದು ಭಾರಸುವರ್ಣ ಅಥವಾ ನಾಲ್ಕು ಭಾರ ರಜತವನ್ನು ದಾನ ಮಾಡುವುದರಿಂದ ತುಳಸೀದಳಗಳಿಂದ ಶ್ರೀಹರಿಯನ್ನು ಪೂಜಿಸಿದಾಗ ಬರುವಷ್ಟು ಫಲವು ಪ್ರಾಪ್ತವಾಗುವದು. ॥೨೩॥ ಶ್ರೇಷ್ಠ ತುಳಸೀದಳಗಳಿಂದ ಮಾಡಿದ ಪೂಜೆಯಿಂದ ಶ್ರೀಹರಿಯು ಎಷ್ಟು ಸಂತುಷ್ಟನಾಗುವನೋ ಅಷ್ಟು ರತ್ನ ಮುತ್ತು ಶ್ರೇಷ್ಠ ಹವಳಗಳಿಂದ ಪೂಜಿಸಿದರೂ ತುಷ್ಟನಾಗುವದಿಲ್ಲ. ॥೨೪॥ ಕೋಮಲವಾದ ತುಳಸೀದಳಗಳಿಂದ ಕೇಶವನು ಪೂಜಿಸಲ್ಪಟ್ಟರೆ ಆ ಜನ್ಮದಿಂದ ಮಾಡಿದ ಪಾಪಗಳು ತೊಳೆದುಹೋದಂತೆಯೇ. ॥೨೫॥ ದರ್ಶನಮಾತ್ರದಿಂದ ನಿಖಿಲಪಾಪಸಮೂಹಗಳನ್ನು ನಾಶಮಾಡುವ, ಸ್ಪರ್ಶಮಾತ್ರದಿಂದ ದೇಹವನ್ನು ಪವಿತ್ರಗೊಳಿಸುವ, ವಂದನೆಮಾತ್ರದಿಂದ ಸಕಲರೋಗಗಳನ್ನು ಕಳೆಯುವ, ಕಂಠಕಿವಿಗಳಲ್ಲಿ ಧರಿಸುವ ಮಾತ್ರದಿಂದ ಯಮನ ಭಯವನ್ನು ಕಳೆಯುವ, ನೆಟ್ಟು ಬೆಳೆಸುವ ಮಾತ್ರದಿಂದ ಭಗವಾನ್ ಶ್ರೀಕೃಷ್ಣನ ಸಾಮಿಪ್ಯವನ್ನು ದೊರಕಿಸಿಕೊಡುವ, ಶ್ರೀಹರಿಯ ಚರಣಾರವಿಂದಗಳಲ್ಲಿ

ಯಾ ದೃಷ್ಟಾ ನಿಖಿಲಾಘಸಂಘಶಮನೀ ಸ್ಪೃಷ್ಟಾ ವಪುಃ ಪಾವನೀ
ರೋಗಾಣಾಮಭಿವಂದಿತಾ ನಿರಸನೀ ಸಿಕ್ತಾಂತಕತ್ರಾಸಿನೀ ।
ಪ್ರತ್ಯಾಸತ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ
ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ ತುಲಸ್ಯೈ ನಮಃ ॥೨೬॥

ದೀಪಂ ದದಾತಿ ಯೋ ಮರ್ತ್ಯೋ ದಿವಾರಾತ್ರೌ ಹರೇರ್ದಿನೇ ।
ತಸ್ಯ ಪುಣ್ಯಸ್ಯ ಸಂಖ್ಯಾನಂ ಚಿತ್ರಗುಪ್ತೋಽಪಿ ವೇತ್ತಿ ನ ॥೨೭॥

ಕೃಷ್ಣಾಗ್ರೇ ದೀಪಕೋ ಯಸ್ಯ ಜ್ವಲೇದೇಕಾದಶೀದಿನೇ ।
ಪಿತರಸ್ತಸ್ಯ ತೃಪ್ಯಂತಿ ಅಮೃತೇನ ದಿವಿ ಸ್ಥಿತಾಃ ॥೨೮॥

ಘೃತೇನ ದೀಪಂ ಪ್ರಜ್ವಾಲ್ಯ ತಿಲತೈಲೇನ ವಾ ಪುನಃ ।
ಪ್ರಯಾತಿ ಸೂರ್ಯಲೋಕೇಽಸೌ ದೀಪಕೋಟಿಶತೈರ್ವೃತಃ ॥೨೯॥

ಅಯಂ ತವಾಗ್ರೇ ಕಥಿತಃ ಕಾಮಿಕಾಮಹಿಮಾ ಮಯಾ ।
ಅತೋ ನರೈಃ ಪ್ರಕರ್ತವ್ಯಾ ಸರ್ವಪಾತಕಹಾರಿಣೀ ॥೩೦॥

---

ಇರಿಸುವ ಮಾತ್ರದಿಂದ ಮೋಕ್ಷಫಲವನ್ನು ಕೊಡುವ ತುಳಸೀದೇವಿಗೆ ಭಕ್ತಿಯಿಂದ ನಮಿಸುತ್ತೇನೆ.
॥೨೬॥ ಏಕಾದಶಿಯ ದಿನ ಹಗಲುರಾತ್ರಿ ಯಾವನು ಶ್ರೀಹರಿಯ ಸನ್ನಿಧಿಯಲ್ಲಿ
ನಂದಾದೀಪವನ್ನು ಹಚ್ಚುವನೋ ಅವನ ಪುಣ್ಯಮಿತಿಯನ್ನು ಚಿತ್ರಗುಪ್ತನೂ ತಿಳಿಯಲಾರನು.
॥೨೭॥ ಏಕಾದಶಿಯ ದಿನ ಯಾವನ ಮನೆಯಲ್ಲಿ ಶ್ರೀಕೃಷ್ಣನ ಎದುರಿನಲ್ಲಿ ನಂದಾದೀಪವು
ಜ್ವಲಿಸುವದೋ ಅವನ ಪಿತೃಗಳು ಸ್ವರ್ಗಲೋಕದಲ್ಲಿ ಅಮೃತಪಾನದಿಂದ ತೃಪ್ತಿ ಹೊಂದುತ್ತಾರೆ.
॥೨೮॥ ಮನೆಯಲ್ಲಿ ಘೃತನಂದಾದೀಪವನ್ನಾಗಲೀ, ತೈಲದ ನಂದಾದೀಪವನ್ನಾಗಲೀ
ಹಚ್ಚುವವನು ಕೋಟಿದೀಪಗಳಿಂದ ಸುತ್ತುವರಿಯಲ್ಪಟ್ಟು ಸೂರ್ಯಲೋಕಕ್ಕೆ ಹೋಗುವನು.
॥೨೯॥ ಹೇ ಧರ್ಮರಾಜ, "ಕಾಮಿಕಾ" ಏಕಾದಶಿಯ ಮಹಿಮೆಯನ್ನು ನಿನ್ನೆದುರು ಹೇಳಿದ್ದೇನೆ.
ಈ ಏಕಾದಶಿಯು ಇಷ್ಟು ಮಹಿಮೋಪೇತವಾಗಿರುವ ಕಾರಣದಿಂದಲೇ ಜನರು
ಸರ್ವಪಾತಕಗಳನ್ನು ಕಳೆಯುವ ಈ ಏಕಾದಶೀವ್ರತವನ್ನು ತಪ್ಪದೇ ಆಚರಿಸಬೇಕು. ॥೩೦॥
ಈ ಕಾಮಿಕಾವ್ರತವು ಬ್ರಹ್ಮಹತ್ಯಾ ಪಾಪವನ್ನು, ಭ್ರೂಣಹತ್ಯಾಪಾಪವನ್ನು ಕಳೆಯುವದು.

ಬ್ರಹ್ಮಹತ್ಯಾಪಹರಣೇ ಭ್ರೂಣಹತ್ಯಾವಿನಾಶಿನೀ ।
ತ್ರಿದಿವಸ್ಥಾನದಾತ್ರೀ ಚ ಮಹಾಪುಣ್ಯಫಲಪ್ರದಾ ॥೩೦॥

ಶ್ರುತ್ವಾ ಮಾಹಾತ್ಮ್ಯಮೇತಸ್ಯಾ ನರಃ ಶ್ರದ್ಧಾಸಮನ್ವಿತಃ ।
ವಿಷ್ಣುಲೋಕಮವಾಪ್ನೋತಿ ಸರ್ವಪಾಪೈಃ ಪ್ರಮುಚ್ಯತೇ ॥೩೧॥

॥ ಇತಿ ಶ್ರೀಬ್ರಹ್ಮವೈವರ್ತಪುರಾಣೇ ಶ್ರಾವಣಕೃಷ್ಣಕಾಮಿಕೈಕಾದಶೀ
ವ್ರತಮಾಹಾತ್ಮ್ಯಂ ಸಂಪೂರ್ಣಮ್ ॥

---

ಮಹಾಪುಣ್ಯವನ್ನು ಕೊಟ್ಟು ಸ್ವರ್ಗಲೋಕವನ್ನು ದೊರಕಿಸಿಕೊಡುವದು. ॥೩೦॥ ಈ ಏಕಾದಶಿಯ ಮಹಾತ್ಮೆಯನ್ನು ಶ್ರದ್ಧೆಯಿಂದ ಕೇಳುವವನು ಸರ್ವಪಾಪಗಳಿಂದ ಮುಕ್ತನಾಗಿ ವಿಷ್ಣುಲೋಕವನ್ನು ಹೊಂದುವನು. ॥೩೧॥

॥ ಇಲ್ಲಿಗೆ ಶ್ರೀಬ್ರಹ್ಮವೈವರ್ತಪುರಾಣದಲ್ಲಿಯ ಶ್ರಾವಣಕೃಷ್ಣಪಕ್ಷದ
"ಕಾಮಿಕಾ ಏಕಾದಶೀವ್ರತಮಹಾತ್ಮೆ"ಯು ಸಮಾಪ್ತವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

# ಶ್ರಾವಣ ಶುಕ್ಲೈಕಾದಶೀವ್ರತಕಥಾ

ಯುಧಿಷ್ಠಿರ ಉವಾಚ

ಶ್ರಾವಣಸ್ಯ ಸಿತೇ ಪಕ್ಷೇ ಕಿಂ ನಾಮ್ನೈಕಾದಶೀ ಭವೇತ್ ।
ಕಥಯಸ್ವ ಪ್ರಸಾದೇನ ಮಮಾಗ್ರೇ ಮಧುಸೂದನ ॥೧॥

ಶ್ರೀಕೃಷ್ಣ ಉವಾಚ

ಶೃಣುಷ್ವಾವಹಿತೋ ರಾಜನ್ ಕಥಾಂ ಪಾಪಹರಾಂ ಪರಾಮ್ ।
ಯಸ್ಯಾಃ ಶ್ರವಣಮಾತ್ರೇಣ ವಾಜಪೇಯಫಲಂ ಲಭೇತ್ ॥೨॥

ದ್ವಾಪರಸ್ಯ ಯುಗಸ್ಯಾದೌ ಪುರಾ ಮಾಹಿಷ್ಮತೀ ಪುರೇ ।
ರಾಜಾ ಮಹೀಜಿದಾಖ್ಯಾತೋ ರಾಜ್ಯಂ ಪಾಲಯತಿ ಸ್ವಯಮ್ ॥೩॥

ಪುತ್ರಹೀನಸ್ಯ ತಸ್ಯೈವ ನ ತದ್ರಾಜ್ಯಂ ಸುಖಪ್ರದಮ್ ।
ಅಪುತ್ರಸ್ಯ ಸುಖಂ ನಾಸ್ತಿ ಇಹಲೋಕೇ ಪರತ್ರ ಚ ॥೪॥

ಯತತೋಽಸ್ಯ ಸುತಪ್ರಾಪ್ತೌ ಕಾಲೋ ಬಹುತರೋ ಗತಃ ।
ನ ಪ್ರಾಪ್ತಶ್ಚ ಸುತೋ ರಾಜ್ಞಃ ಸರ್ವಸೌಖ್ಯಪ್ರದೋ ನೃಣಾಮ್ ॥೫॥

ದೃಷ್ಟ್ವಾಽಽತ್ಮಾನಂ ಪ್ರವಯಸಂ ರಾಜಾ ಚಿಂತಾಪರೋಽಭವತ್ ।
ಸಭಾಗತಃ ಪ್ರಜಾಮಧ್ಯೇ ಇದಂ ವಚನಮಬ್ರವೀತ್ ॥೬॥

---

"ಭಗವನ್ ಮಧುಸೂದನಾ, ಇನ್ನು ಶ್ರಾವಣಶುಕ್ಲಪಕ್ಷದ ಏಕಾದಶಿಯ ಹೆಸರು, ಅದರ ಮಹಾತ್ಮೆಯನ್ನು ತಿಳಿಸಿ ಅನುಗ್ರಹಿಸು" ಎಂದು ಯುಧಿಷ್ಠಿರನು ಪ್ರಾರ್ಥಿಸಲು ॥೧॥ ಶ್ರೀಕೃಷ್ಣನು ಹೇಳುತ್ತಾನೆ - ಹೇ ಯುಧಿಷ್ಠಿರ ರಾಜಾ, ಶ್ರಾವಣಶುಕ್ಲಪಕ್ಷದ ಪಾಪಪರಿಹಾರಕವಾದ ಶ್ರೇಷ್ಠವಾದ ಕಥೆಯನ್ನು ತಿಳಿಸುವೆನು ಕೇಳು. ಈ ಮಹಾತ್ಮೆಯ ಶ್ರವಣಮಾತ್ರದಿಂದ ವಾಜಪೇಯಯಾಗದ ಫಲವು ಪ್ರಾಪ್ತವಾಗುವದು. ॥೨॥ ಹಿಂದಕ್ಕೆ ದ್ವಾಪರಯುಗದ ಆದಿಯಲ್ಲಿ ಮಾಹಿಷ್ಮತೀ ಎಂಬ ಪುರದಲ್ಲಿ ಮಹೀಜಿತ್ ಎಂಬ ಹೆಸರಿನ ಒಬ್ಬ ರಾಜನು ರಾಜ್ಯವಾಳುತ್ತಿದ್ದನು. ॥೩॥ ಸಂತಾನವಿಲ್ಲದ ಅವನಿಗೆ ರಾಜ್ಯವು ಸುಖಕರವಾಗಲಿಲ್ಲ. ಏಕೆಂದರೆ ಅಪುತ್ರನಾದವನಿಗೆ ಇಹಲೋಕದಲ್ಲಾಗಲೀ, ಪರತ್ರದಲ್ಲಾಗಲೀ ಸುಖವಿಲ್ಲವೆಂಬುದು ಪ್ರಸಿದ್ಧವಾಗಿದೆಯಷ್ಟೆ! ॥೪॥ ಪುತ್ರಪ್ರಾಪ್ತಿಗಾಗಿ ಬಹುವಿಧವಾಗಿ ಯತ್ನಿಸಿದರೂ ಅವನಿಗೆ ಸರ್ವಸೌಖ್ಯಪ್ರದನಾದ ಪುತ್ರನು ಜನಿಸಲಿಲ್ಲ. ॥೫॥ ತನಗೆ ವಯಸ್ಸು ಹೆಚ್ಚುತ್ತಿರುವದನ್ನು ಗಮನಿಸಿದ ರಾಜನು ಚಿಂತಾಕ್ರಾಂತನಾದನು ಮತ್ತು ಒಮ್ಮೆ ರಾಜಸಭೆಯಲ್ಲಿ ಪ್ರಜೆಗಳೆದುರು ಹೇಳಿದನು ॥೬॥ ಭೋ ನನ್ನ ಸತ್ಪ್ರಜೆಗಳೇ, ಈ ಜನ್ಮದಲ್ಲಂತೂ ನಾನಾವ ಪಾಪವನ್ನೂ ಮಾಡಿದ್ದು ಅರಿಯೆನು. ನಾನು ಅನ್ಯಾಯದಿಂದ ದ್ರವ್ಯವನ್ನು ಸಂಗ್ರಹಿಸಿ

ಇಹ ಜನ್ಮನಿ ಭೋ ಲೋಕಾಃ ನ ಮಯಾ ಪಾತಕಂ ಕೃತಮ್ ।
ಅನ್ಯಾಯೋಪಾರ್ಜಿತಂ ವಿತ್ತಂ ಕ್ಷಿಪ್ತಂ ಕೋಶೇ ಮಯಾ ನ ಹಿ ॥೭॥

ಬ್ರಹಸ್ವಂ ದೇವದ್ರವಿಣಂ ನ ಗೃಹೀತಂ ಮಯಾ ಕ್ವಚಿತ್ ।
ನ್ಯಾಸಾಪಹಾರೋ ನ ಕೃತಃ ಪರಸ್ಯ ಬಹುಪಾಪದಃ ॥೮॥

ಸುತವತ್ಪಾಲಿತೋ ಲೋಕೋ ಧರ್ಮೇಣ ವಿಜಿತಾ ಮಹೀ ।
ದುಷ್ಟೇಷು ಪಾತಿತೋ ದಂಡೋ ಬಂಧುಪುತ್ರೋಪಮೇಷ್ವಪಿ ॥೯॥

ಶಿಷ್ಟಾಃ ಸುಪೂಜಿತಾ ಲೋಕಾ ದ್ವೇಷ್ಯಾಶ್ಚಾಪಿ ಮಹಾಜನಾಃ ।
ಇತ್ಯೇವಂ ವ್ರಜತೋ ಮಾರ್ಗೇ ಧರ್ಮಯುಕ್ತೇ ದ್ವಿಜೋತ್ತಮಾಃ ॥೧೦॥

ಕಸ್ಮಾನ್ಮಮ ಗೃಹೇ ಪುತ್ರೋ ನ ಜಾತಸ್ತದ್ವಿಚಾರ್ಯತಾಮ್ ।
ಇತಿ ವಾಕ್ಯಂ ದ್ವಿಜಾಃ ಶ್ರುತ್ವಾ ಸಪ್ರಜಾಃ ಸಪುರೋಹಿತಾಃ ॥೧೧॥

ಮಂತ್ರಯಿತ್ವಾ ನೃಪಹಿತಂ ಜಗ್ಮುಸ್ತೇ ಗಹನಂ ವನಮ್ ।
ಇತಸ್ತತಶ್ಚ ಪಶ್ಯಂತಶ್ಚಾಶ್ರಮಾನ್ನೃಷಿಸೇವಿತಾನ್ ॥೧೨॥

ನೃಪತೇರ್ಹಿತಮಿಚ್ಛಂತೋ ದದೃಶುರ್ಮುನಿಸತ್ತಮಮ್ ।
ತಪ್ಯಮಾನಂ ತಪೋ ಘೋರಂ ಚಿದಾನಂದಂ ನಿರಾಮಯಮ್ ॥೧೩॥

---

ರಾಜಕೋಶವನ್ನು ತುಂಬಿಲ್ಲ. ॥೭॥ ಬ್ರಹ್ಮಸ್ವವನ್ನಾಗಲೀ, ದೇವದ್ರವ್ಯವನ್ನಾಗಲೀ ಎಂದೂ ತೆಗೆದುಕೊಂಡಿಲ್ಲ. ಬಹುಪಾಪವನ್ನು ಕೊಡುವ, ಪರರು ಸಂಗ್ರಹಿಸಿದ ದ್ರವ್ಯವನ್ನೂ ಅಪಹರಿಸಿಲ್ಲ. ॥೮॥ ಪ್ರಜೆಗಳನ್ನು ಸ್ವಂತಮಕ್ಕಳಂತೆ ಪಾಲಿಸಿದ್ದೇನೆ. ಧರ್ಮದಿಂದ ಭೂಮಿಯನ್ನು ಗೆದ್ದು ಪರಿಪಾಲನೆ ಮಾಡಿದ್ದೇನೆ. ಬಂಧುಗಳು, ಪುತ್ರರು ಯಾರಿದ್ದರೂ ದುಷ್ಟರಾಗಿದ್ದರೆ ಅವರನ್ನು ದಂಡಿಸಿದ್ದೇನೆ. ॥೯॥ ಶತ್ರುಪಕ್ಷದವರಾಗಿದ್ದರೂ ಅವರು ಶಿಷ್ಟರು ಹಾಗೂ ಮಹಾತ್ಮರು ಆಗಿದ್ದರೆ ಅಂಥವರನ್ನು ಗೌರವಿಸಿ ಪೂಜಿಸಿದ್ದೇನೆ. ಹೇ ದ್ವಿಜಶ್ರೇಷ್ಠರೇ, ಈ ಪ್ರಕಾರ ನಾನು ಧರ್ಮಮಾರ್ಗದಲ್ಲಿ ನಡೆಯುತ್ತಿದ್ದರೂ ॥೧೦॥ ಅದಾವ ಕಾರಣಕ್ಕಾಗಿ ನನ್ನ ಮನೆಯಲ್ಲಿ ಪುತ್ರೋತ್ಪತ್ತಿಯಾಗಿಲ್ಲ ಎಂಬ ಬಗ್ಗೆ ನೀವೆಲ್ಲ ವಿಚಾರಿಸಬೇಕು. ರಾಜನ ಮಾತುಗಳನ್ನು ಪ್ರಜೆಗಳು, ಪುರೋಹಿತರಾದಿಯಾಗಿ ದ್ವಿಜರು ॥೧೧॥ ರಾಜನಿಗೆ ಕ್ಷೇಮವಾಗಲಿ, ಅವನ ಸಂತಾನಭೇದವಾಗದಿರಲೆಂದು ಬಯಸಿ ಗಹನವಾದ ವನದಲ್ಲಿ ತಪಸ್ವಿಗಳನ್ನು ಕಾಣಲು ಹೋದರು. ವನದಲ್ಲಿ ಅಲ್ಲಿ ಇಲ್ಲಿ ಋಷಿಗಳ ಆಶ್ರಮಗಳನ್ನು ಶೋಧಿಸುತ್ತ ॥೧೨॥ ರಾಜನ ಹಿತವನ್ನು ಬಯಸುತ್ತಿರುವ ಅವರು ಅಲ್ಲೊಬ್ಬ ಮುನಿಶ್ರೇಷ್ಠನನ್ನು ಕಂಡರು. ಘೋರವಾದ ತಪವನ್ನಾಚರಿಸುತ್ತಿರುವ, ಕಲ್ಮಷರಹಿತನಾದ, ತೃಪ್ತನಾದ ॥೧೩॥ ನಿರಾಹಾರಿಯಾದ, ಜಿತೇಂದ್ರಿಯನಾದ, ಜಿತಕ್ರೋಧನಾದ, ಧರ್ಮತತ್ತ್ವಜ್ಞನೂ, ಸರ್ವಶಾಸ್ತ್ರವಿಶಾರದನಾದ,

ನಿರಾಹಾರಂ ಜಿತಾತ್ಮಾನಂ ಜಿತಕ್ರೋಧಂ ಸನಾತನಮ್ ।
ಲೋಮಶಂ ಧರ್ಮತತ್ತ್ವಜ್ಞಂ ಸರ್ವಶಾಸ್ತ್ರವಿಶಾರದಮ್ ||೧೪||

ದೀರ್ಘಾಯುಷಂ ಮಹಾತ್ಮಾನಮನೇಕಬ್ರಹ್ಮಸಮ್ಮಿತಮ್ ।
ಕಲ್ಪೇ ಗತೇ ಅಸ್ಯ ಏಕಮೇಕಂ ಲೋಮ ವಿಶೀರ್ಯತೇ ||೧೫||

ಅತೋ ಲೋಮೇಶನಾಮಾನಂ ತ್ರಿಕಾಲಜ್ಞಂ ಮಹಾಮುನಿಮ್ ।
ತಂ ದೃಷ್ಟ್ವಾ ಹರ್ಷಿತಾಃ ಸರ್ವೇ ಹ್ಯಾಜಗ್ಮುಸ್ತಸ್ಯ ಸನ್ನಿಧಿಮ್ ||೧೬||

ಯಥಾನ್ಯಾಯಂ ಯಥಾರ್ಹಂ ತೇ ನಮಶ್ಚಕ್ರುರ್ಯಥೋದಿತಮ್ ।
ವಿನಯಾವನತಾಃ ಸರ್ವೇ ಹ್ಯೂಚುಶ್ಚೈವ ಪರಸ್ಪರಮ್ ||೧೭||

ಅಸ್ಮದ್ಭಾಗ್ಯವಶಾದೇವ ಪ್ರಾಪ್ತೋಽಯಂ ಮುನಿಸತ್ತಮಃ ।
ತಾಂಸ್ತಥಾ ಪ್ರಣತಾನ್ ದೃಷ್ಟ್ವಾ ಉವಾಚ ಮುನಿಸತ್ತಮಃ ||೧೮||

ಲೋಮಶ ಉವಾಚ

ಕಿಮರ್ಥಮಿಹ ಸಂಪ್ರಾಪ್ತಾಃ ಕಥಯಧ್ವಂ ಚ ಕಾರಣಮ್ ।
ಮದ್ದರ್ಶನಾಹ್ಲಾದಗಿರಾ ಭವಂತಃ ಸ್ತುವತೇ ಕಿಮು ||೧೯||

ಅಸಂಶಯಂ ಕರಿಷ್ಯಾಮಿ ಭವತಾಂ ಯದ್ಧಿತಂ ಭವೇತ್ ।
ಪರೋಪಕೃತಯೇ ಜನ್ಮ ಮಾದೃಶಾನಾಂ ನ ಸಂಶಯಃ ||೨೦||

---

ಸನಾತನನಾದ ||೧೪|| ದೀರ್ಘಾಯುಷಿಯಾದ, ಅನೇಕಬ್ರಹ್ಮರಂತೆ ಕಾಂತಿಯುಕ್ತನಾದ "ಲೋಮಶ" ಎಂಬ ಹೆಸರಿನ ಮಹಾತ್ಮರನ್ನು ಕಂಡು ಪ್ರಭಾವಿತರಾದರು. ಒಂದೊಂದು ಕಲ್ಪಕಳೆದಂತೆ ಒಂದೊಂದೇ ಲೋಮವು ನಾಶವಾಗುವುದರಿಂದ ||೧೫|| "ಲೋಮಶ" ಎಂದು ಕರೆಸಿಕೊಳ್ಳಲ್ಪಡುವ ತ್ರಿಕಾಲಜ್ಞನಾದ ಆ ಮಹಾಮುನಿಯ ದರ್ಶನವಾದಾಕ್ಷಣವೇ ಎಲ್ಲರಿಗೂ ಬಹುಹರ್ಷವಾಯಿತು. ಕೂಡಲೇ ಅವರು ಲೋಮಶಮುನಿಯ ಸನ್ನಿಧಿಗೆ ಹೋಗಿ ||೧೬|| ಧರ್ಮಶಾಸ್ತ್ರಕ್ಕನುಸಾರವಾಗಿ ಯೋಗ್ಯರೀತಿಯಿಂದ ಅವರಿಗೆ ನಮಸ್ಕರಿಸಿದರು. ವಿನಯದಿಂದ ಎಲ್ಲರೂ ಬಾಗಿ ನಿಂತು ತಮ್ಮತಮ್ಮೊಳಗೇ ||೧೭|| "ಅಹೋ, ನಮ್ಮ ಸೌಭಾಗ್ಯದಿಂದಲೇ ಇಂದು ಈ ಮುನಿಗಳ ದರ್ಶನವಾಗಿದೆ" ಎಂದು ಮಾತನಾಡತೊಡಗಿದರು. ಇಷ್ಟು ಜನ ತನ್ನೆದುರು ಬಾಗಿ ನಿಂತಿರುವವನ್ನು ಕಂಡು ಮುನಿಶ್ರೇಷ್ಠರಾದ ಲೋಮಶರು ||೧೮|| - ಭೋ, ನೀವೆಲ್ಲರೂ ಏತಕ್ಕಾಗಿ ಇಲ್ಲಿಗೆ ಬಂದಿರುವಿರಿ? ನನ್ನ ದರ್ಶನಮಾತ್ರದಿಂದ ಸಂತುಷ್ಟರಾಗಿ ನನ್ನನ್ನು ಏಕೆ ಸ್ತುತಿಸುತ್ತಿರುವಿರಿ? ||೧೯|| ನನ್ನಿಂದ ನಿಮಗೇನಾಗಬೇಕಾಗಿದೆ ತಿಳಿಸಿರಿ. ನಿಃಸಂದೇಹವಾಗಿ ನಿಮಗೆ ಹಿತವಾದುದನ್ನೇ ಮಾಡುವೆನು. ನನ್ನಂಥವರ ಜನ್ಮವಿರುವುದು ಪರೋಪಕಾರಕ್ಕಾಗಿಯೇ. ಇದರಲ್ಲಿ ಸಂದೇಹಬೇಡ" ಎಂದು ನುಡಿಯಲು ||೨೦|| ಬಂದ

ಜನಾ ಊಚುಃ

ಶ್ರೂಯತಾಮಭಿಧಾಸ್ಯಾಮೋ ಯಚ್ಚಾಗಮನಕಾರಣಮ್ ।
ಸಂಶಯಚ್ಛೇದನಾರ್ಥಾಯ ತವ ಸನ್ನಿಧಿಮಾಗತಾಃ ॥೨೧॥

ಪದ್ಮಯೋನೇಃ ಪರತರಸ್ತ್ವತ್ತಃ ಶ್ರೇಷ್ಠೋ ನ ವಿದ್ಯತೇ ।
ಅತಃ ಕಾರ್ಯವಶಾತ್ ಪ್ರಾಪ್ತಾಃ ಸಮೀಪಂ ಭವತೋ ವಯಮ್ ॥೨೨॥

ಮಹಿಜಿನ್ನಾಮ ರಾಜಾಽಸೌ ಪುತ್ರಹೀನೋಽಸ್ತಿ ಸಾಂಪ್ರತಮ್ ।
ವಯಂ ತಸ್ಯ ಪ್ರಜಾ ಬ್ರಹ್ಮನ್ ಪುತ್ರವತ್ತೇನ ಪಾಲಿತಾಃ ॥೨೩॥

ತಂ ಪುತ್ರರಹಿತಂ ದೃಷ್ಟ್ವಾ ತಸ್ಯ ದುಃಖೇನ ದುಃಖಿತಾಃ ।
ತಪಃ ಕರ್ತುಮಿಹಾಯಾತಾ ಮತಿಂ ಕೃತ್ವಾ ತು ನೈಷ್ಠಿಕೀಮ್ ॥೨೪॥

ತಸ್ಯ ಭಾಗ್ಯವಶಾದ್ದೃಷ್ಟಸ್ತ್ವಮಸ್ಮಾಭಿರ್ದ್ವಿಜೋತ್ತಮ ।
ಮಹತಾಂ ದರ್ಶನೇನೈವ ಕಾರ್ಯಸಿದ್ಧಿರ್ಭವೇನ್ನೃಣಾಮ್ ॥೨೫॥

ಉಪದೇಶಂ ವದ ಮುನೇ ರಾಜ್ಞಃ ಪುತ್ರೋ ಯಥಾ ಭವೇತ್ ।
ಇತಿ ತೇಷಾಂ ವಚಃ ಶ್ರುತ್ವಾ ಮುಹೂರ್ತಂ ಧ್ಯಾನಮಾಸ್ಥಿತಃ ॥೨೬॥

---

ಜನರೆಲ್ಲರೂ ಹೇಳಿದರು - ಭೋ ಮುನಿವರ, ನಾವು ಬಂದಿರುವ ಉದ್ದೇಶವನ್ನು ತಿಳಿಸುವೆವು ಕೇಳಿರಿ. ನಮಗೊಂದು ಸಂಶಯ ಬಂದಿದ್ದು ಅದರ ನಿವಾರಣೆಗಾಗಿಯೇ ನಾವು ನಿಮ್ಮಲ್ಲಿ ಬಂದಿದ್ದೇವೆ. ॥೨೧॥ ಮುನಿಗಳೇ, ನಿಮಗಿಂತಲೂ ಶ್ರೇಷ್ಠರಾದವರು ಯಾರೂ ಇಲ್ಲ ಆದ್ದರಿಂದಲೇ ಕಾರ್ಯನಿಮಿತ್ತ ತಮ್ಮಲ್ಲಿ ಬಂದಿದ್ದೇವೆ. ॥೨೨॥ ಮಹೀಜಿತ್ ಎಂಬ ಹೆಸರಿನ ರಾಜನು ಸದ್ಯಕ್ಕೆ ಪುತ್ರಸಂತಾನವಿಲ್ಲದವನಾಗಿದ್ದಾನೆ. ಆ ರಾಜನ ಪ್ರಜೆಗಳಾದ ನಾವೆಲ್ಲ ರಾಜನಿಂದ ಮಕ್ಕಳಂತೆ ಪಾಲಿಸಲ್ಪಟ್ಟಿದ್ದೇವೆ. ॥೨೩॥ ನಮ್ಮ ರಾಜನಿಗೆ ಗಂಡುಮಗನಿಲ್ಲದಿರುವದರಿಂದ ಅವನ ದುಃಖದಿಂದ ದುಃಖಿತರಾಗಿ ನಾವೆಲ್ಲರೂ ಪರಮಾತ್ಮನನ್ನು ಕುರಿತು ತಪಸ್ಸನ್ನಾಚರಿಸಬೇಕೆಂದು ನಿಶ್ಚಯಿಸಿ ಈ ವನಕ್ಕೆ ಬಂದೆವು. ॥೨೪॥ ನಮ್ಮ ರಾಜನ ಸೌಭಾಗ್ಯದಿಂದ ಇಲ್ಲಿ ತಮ್ಮ ದರ್ಶನವಾಯಿತು. ಮಹಾತ್ಮರ ದರ್ಶನಮಾತ್ರದಿಂದಲೇ ಮನುಷ್ಯರ ಕಾರ್ಯಗಳು ಸಿದ್ಧಿಸುವವು. ॥೨೫॥ ಭೋ ಮುನಿಶ್ರೇಷ್ಠರೇ, ರಾಜನಿಗೆ ಪುತ್ರೋತ್ಪತ್ತಿಯಾಗುವಂತೆ ಏನಾದರೊಂದು ಉಪಾಯವನ್ನು ಉಪದೇಶಿಸಿರಿ. ಅವರ ಈ ಮಾತುಗಳನ್ನು ಕೇಳಿ ಒಂದುಕ್ಷಣ ಧ್ಯಾನಾಸಕ್ತರಾಗಿ ॥೨೬॥ ರಾಜನ ಪೂರ್ವಜನ್ಮವೃತ್ತಾಂತವನ್ನೆಲ್ಲ ತಿಳಿದು ಲೋಮಶರು ಹೇಳಿದರು - ಭೋ ಮಹಾಜನರೇ ಕೇಳಿರಿ, ನಿಮ್ಮ ರಾಜನೇನಿರುವನೋ ಅವನು ಪೂರ್ವಜನ್ಮದಲ್ಲಿ ಒಬ್ಬ ವೈಶ್ಯನಾಗಿದ್ದನು.

ಪ್ರತ್ಯುವಾಚ ಮುನಿರ್ಜ್ಞಾತ್ವಾ ತಸ್ಯ ಜನ್ಮ ಪುರಾತನಮ್ ।

ಲೋಮಶ ಉವಾಚ

ಪೂರ್ವಜನ್ಮನಿ ವೈಶ್ಯೋಽಯಂ ಧನಹೀನೋ ನೃಶಂಸಕೃತ್ ॥೨೭॥
ವಾಣಿಜ್ಯಕರ್ಮನಿರತೋ ಗ್ರಾಮದ್ಗ್ರಾಮಾಂತರಂ ಭ್ರಮನ್ ।

ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ದ್ವಾದಶೀದಿವಸೇ ತಥಾ ॥೨೮॥
ಮಧ್ಯಾಹ್ನೇ ದ್ಯುಮಣೌ ಪ್ರಾಪ್ತೇ ಗ್ರಾಮಸೀಮ್ನಿ ತೃಷಾಕುಲಃ ।

ರಮ್ಯಂ ಜಲಾಶಯಂ ದೃಷ್ಟ್ವಾ ಜಲಪಾನೇ ಮನೋ ದಧೌ ॥೨೯॥
ಸದ್ಯಃ ಸೂತಾ ಸವತ್ಸಾ ಚ ಧೇನುಸ್ತತ್ರ ಸಮಾಗತಾ ।

ತೃಷಾತುರಾ ನಿದಾಘಾರ್ತಾ ತಸ್ಯ ಚಾಪಃ ಪಪೌ ತು ಸಾ ॥೩೦॥
ಪಿಬಂತೀಂ ವಾರಯಿತ್ವಾ ತಾಮಸೌ ತೋಯಂ ಸ್ವಯಂ ಪಪೌ ।

ಕರ್ಮಣಸ್ತಸ್ಯ ಪಾಪೇನ ಸ ಪುತ್ರರಹಿತೋ ನೃಪಃ ॥೩೧॥
ಪೂರ್ವಜನ್ಮಕೃತಾತ್ಪುಣ್ಯಾತ್ ಪ್ರಾಪ್ತರಾಜ್ಯಮಕಂಟಕಮ್ ।

ಜನಾ ಊಚುಃ

ಪುಣ್ಯಾತ್ ಪಾಪಂ ಕ್ಷಯಂ ಯಾತಿ ಪುರಾಣೇ ಶ್ರೂಯತೇ ಮುನೇ ॥೩೨॥

---

ಧನಹೀನನಾಗಿದ್ದ ಅವನು ದುಷ್ಕರ್ಮಗಳನ್ನು ಮಾಡುತ್ತಲಿದ್ದನು. ॥೨೭॥ ವ್ಯಾಪಾರೋದ್ಯೋಗದಲ್ಲಿ ನಿರತನಾದ ಅವನು ಊರಿಂದೂರಿಗೆ ತಿರುಗುತ್ತಲಿದ್ದನು. ಒಮ್ಮೆ ಜ್ಯೇಷ್ಠ ಶುದ್ಧ ದ್ವಾದಶಿಯ ದಿನ ॥೨೮॥ ಮಧ್ಯಾಹ್ನದಲ್ಲಿ ಸೂರ್ಯನು ನೆತ್ತಿಯ ಮೇಲೆ ಬರಲು ಅತಿ ನೀರಡಿಸಿದ ಅವನು ಒಂದು ಊರಿನ ಗಡಿಯಲ್ಲಿ ಒಂದು ರಮ್ಯವಾದ ಜಲಾಶಯವನ್ನು ಕಂಡು ಅದರಲ್ಲಿಯ ನೀರನ್ನು ಕುಡಿಯಲು ಬಯಸಿದನು. ॥೨೯॥ ಅಷ್ಟರಲ್ಲಿ ಆದೇ ಪ್ರಸವಿಸಿದ ಒಂದು ಗೋವು ನೀರಡಿಸಿ ಕರುವಿನೊಂದಿಗೆ ಅಲ್ಲಿಗೆ ಬಂದು ನೀರನ್ನು ಕುಡಿಯಲು ಪ್ರಾರಂಭಿಸಿತು. ॥೩೦॥ ವೈಶ್ಯನಾದರೋ ಆ ಕೂಡಲೇ ನೀರು ಕುಡಿಯುತ್ತಿರುವ ಗೋವನ್ನು ಆಚೆಗೆ ಸರಿಸಿ ತಾನು ನೀರನ್ನು ಕುಡಿದನು. ಆ ಕರ್ಮದಿಂದಲೇ ನಿಮ್ಮ ರಾಜನು ಈ ಜನ್ಮದಲ್ಲಿ ಪುತ್ರರಹಿತನಾಗಿದ್ದಾನೆ. ॥೩೧॥ ಹಾಗೂ ಪೂರ್ವಜನ್ಮದಲ್ಲಿ ಮಾಡಿದ್ದ ಪುಣ್ಯಕರ್ಮವಿಶೇಷದಿಂದ ಈಗ ನಿಷ್ಕಂಟಕವಾದ ರಾಜ್ಯವು ಪ್ರಾಪ್ತವಾಗಿದೆ. ಆಗ ಇದನ್ನು ಕೇಳಿ ಪ್ರಜೆಗಳು - "ಭೋ ಮುನಿಗಳೇ, ಪುಣ್ಯದಿಂದ ಪಾಪಕ್ಷಯವಾಗುವದೆಂದು ಪುರಾಣದಲ್ಲಿ ಕೇಳಿತಿಳಿದಿದ್ದೇವೆ. ॥೩೨॥ ಈಗ ದಯಮಾಡಿ ಯಾವುದರಿಂದ ರಾಜನ ಪೂರ್ವಜನ್ಮದ ಪಾಪವು ನಾಶವಾಗುವದೋ ಅಂಥ ಪುಣ್ಯಕರ್ಮವನ್ನು ತಿಳಿಸಿರಿ ಮತ್ತು ಇದರಿಂದ ರಾಜನಿಗೆ

ಪುಣ್ಯೋಪದೇಶಂ ಕಥಯ ಯೇನ ಪಾಪಕ್ಷಯೋ ಭವೇತ್ ।
ಯಥಾ ಭವತ್ಪ್ರಸಾದೇನ ಪುತ್ರೋಽಸ್ಯ ಭವಿತಾ ತಥಾ ॥೩೩॥

ಲೋಮಶ ಉವಾಚ

ಶ್ರಾವಣೇ ಶುಕ್ಲಪಕ್ಷೇ ತು ಪುತ್ರದಾ ನಾಮ ವಿಶ್ರುತಾ ।
ಏಕಾದಶೀ ತಿಥಿಶ್ಚಾಸ್ತಿ ಕುರುಧ್ವ ತದ್ವ್ರತಂ ಜನಾಃ ॥೩೪॥

ಯಥಾವಿಧಿ ಯಥಾನ್ಯಾಯಂ ಯಥೋಕ್ತಂ ಜಾಗರಾನ್ವಿತಮ್ ।
ತಸ್ಯಾಃ ಪುಣ್ಯಂ ಸುವಿಮಲಂ ದೇಯಂ ನೃಪತಯೇ ಜನಾಃ ॥೩೫॥

ಏವಂ ಕೃತೇ ಸುನಿಯತಂ ರಾಜ್ಞಃ ಪುತ್ರೋ ಭವಿಷ್ಯತಿ ।
ಶ್ರುತ್ವೈತಲ್ಲೋಮಶವಚಸ್ತಂ ಪ್ರಣಮ್ಯ ದ್ವಿಜೋತ್ತಮಮ್ ॥೩೬॥

ಪ್ರಜಗ್ಮುಃ ಸ್ವಗೃಹಾನ್ ಸರ್ವೇ ಹರ್ಷೋತ್ಫುಲ್ಲವಿಲೋಚನಾಃ ।
ಶ್ರಾವಣಂ ತು ಸಮಾಸಾದ್ಯ ಸ್ಮೃತ್ವಾ ಲೋಮಶಭಾಷಿತಮ್ ॥೩೭॥

ರಾಜ್ಞಾ ಸಹ ವ್ರತಂ ಚಕ್ರುಃ ಸರ್ವೇ ಶ್ರದ್ಧಾಸಮನ್ವಿತಾಃ ।
ದ್ವಾದಶೀದಿವಸೇ ಪುಣ್ಯಂ ದದುರ್ನೃಪತಯೇ ಜನಾಃ ॥೩೮॥

---

ಪುತ್ರೋತ್ಸವವು ಆಗುವಂತೆಯೂ ಅನುಗ್ರಹಿಸಿರಿ" ಎಂದು ಪ್ರಾರ್ಥಿಸಲು ॥೩೩॥ ಲೋಮಶರು ಹೇಳಿದರು - ಭೋ ಮಹಾಜನಗಳೇ ಕೇಳಿ, ಶ್ರಾವಣಶುಕ್ಲಪಕ್ಷದ ಏಕಾದಶಿಯು "ಪುತ್ರದಾ" ಎಂದು ಖ್ಯಾತವಾಗಿದೆ. ನೀವೆಲ್ಲರೂ ಆ ಏಕಾದಶೀ ವ್ರತವನ್ನು ಆಚರಿಸಿರಿ ॥೩೪॥ ನಾನು ಹೇಳಿದಂತೆ ಯಥಾವಿಧಿ ನೀವೆಲ್ಲರೂ ರಾತ್ರಿ ಜಾಗರಣೆ ಮಾಡಿ ಪುತ್ರದಾ ಏಕಾದಶೀ ವ್ರತವನ್ನು ಶ್ರದ್ಧೆಯಿಂದ ಆಚರಿಸಿ ಅದರಿಂದ ಬರುವ ಅತ್ಯಂತ ಪವಿತ್ರವಾದ ಪುಣ್ಯವನ್ನು ಸಂಕಲ್ಪಪೂರ್ವಕ ನಿಮ್ಮ ರಾಜನಿಗೆ ಅರ್ಪಿಸಿರಿ. ॥೩೫॥ ಈ ರೀತಿ ಮಾಡಿದರೆ ನಿಮ್ಮ ರಾಜನಿಗೆ ನಿಶ್ಚಿತವಾಗಿ ಗಂಡುಮಗುವು ಜನಿಸುವದು. ಲೋಮಶರ ಉಪದೇಶವನ್ನು ಕೇಳಿ ಅವರಿಗೆ ಭಕ್ತಿಯಿಂದ ನಮಿಸಿ ಪ್ರಜೆಗಳೆಲ್ಲ ॥೩೬॥ ಹರ್ಷಾಶ್ಚರ್ಯಭರಿತರಾಗಿ ತಮ್ಮ ತಮ್ಮ ಮನೆಗಳಿಗೆ ಹಿಂತಿರುಗಿದರು. ಶ್ರಾವಣ ಮಾಸದ ಶುಕ್ಲಪಕ್ಷ ಏಕಾದಶಿಯು ಬಂದ ಕೂಡಲೇ ಅವರೆಲ್ಲರೂ ಲೋಮಶ ಮುನಿಗಳ ಉಪದೇಶವನ್ನು ಜ್ಞಾಪಿಸಿಕೊಂಡು ॥೩೭॥ ತಮ್ಮ ರಾಜನೊಂದಿಗೆ ಒಟ್ಟಾಗಿ ಎಲ್ಲರೂ ಶ್ರದ್ಧಾಭಕ್ತಿಯುತರಾಗಿ ಪುತ್ರದಾವ್ರತವನ್ನು ಆಚರಿಸಿದರು. ಮರುದಿನ ದ್ವಾದಶೀಪಾರಣೆಯ ದಿನ ಪ್ರಜೆಗಳು ತಮ್ಮ ಪುಣ್ಯವನ್ನೆಲ್ಲ ರಾಜನಿಗೆ ಸಮರ್ಪಿಸಿದರು. ॥೩೮॥

ದತ್ತೇ ಪುಣ್ಯೇ ಯಥಾ ರಾಜ್ಞೀ ಗರ್ಭಮಾಧತ್ತ ಶೋಭನಮ್ ।
ಪ್ರಾಪ್ತೇ ಪ್ರಸವಕಾಲೇ ಸಾ ಸುಷುವೇ ಪುತ್ರಮೂರ್ಜಿತಮ್ ॥೩೯॥

ಏವಮೇಷಾ ನೃಪಶ್ರೇಷ್ಠ ಪುತ್ರದಾ ನಾಮ ವಿಶ್ರುತಾ ।
ಕರ್ತವ್ಯಾ ಸುಖಮಿಚ್ಛದ್ಭಿರಿಹ ಲೋಕೇ ಪರತ್ರ ಚ ॥೪೦॥

ಶ್ರುತ್ವಾ ಮಾಹಾತ್ಮ್ಯಮೇತಸ್ಯಾ: ಸರ್ವಪಾಪೈ: ಪ್ರಮುಚ್ಯತೇ ।
ಇಹ ಪುತ್ರಸುಖಂ ಪ್ರಾಪ್ಯ ಪರತ್ರ ಸ್ವರ್ಗತಿರ್ಭವೇತ್ ॥೪೧॥

॥ ಇತಿ ಶ್ರೀಭವಿಷ್ಯೋತ್ತರಪುರಾಣೇ ಶ್ರಾವಣಶುಕ್ಲ ಪುತ್ರದೈಕಾದಶೀ
ವ್ರತಮಾಹಾತ್ಮ್ಯಂ ಸಂಪೂರ್ಣಮ್ ॥

---

ಮುಂದೆ ಅಲ್ಪಕಾಲದಲ್ಲಿಯೇ ರಾಜಪತ್ನಿಯು ಗರ್ಭವನ್ನು ಧರಿಸಿ ನವಮಾಸ ತುಂಬಲು ಮುಂದೆ ಒಂದು ಶುಭಮುಹೂರ್ತದಲ್ಲಿ ಪುತ್ರರತ್ನನಿಗೆ ಜನ್ಮವಿತ್ತಳು. ॥೩೯॥ ಹೇ ಧರ್ಮರಾಜಾ, ಈ ಪ್ರಕಾರ ಮಹಿಮೋಪೇತವಾಗಿರುವ ಪುತ್ರದಾವ್ರತವನ್ನು ಇಹಲೋಕದಲ್ಲಿಯೂ, ಪರಲೋಕದಲ್ಲಿಯೂ ಸುಖವನ್ನು ಬಯಸುವವರು ತಪ್ಪದೇ ಆಚರಿಸಬೇಕು. ಈ ಏಕಾದಶಿಯ ಮಹಾತ್ಮೆಯನ್ನು ಶ್ರವಣ ಮಾಡುವ ಮಾತ್ರದಿಂದಲೇ ನರನು ಸರ್ವಪಾಪಗಳಿಂದ ಮುಕ್ತನಾಗಿ ಇಹಲೋಕದಲ್ಲಿ ಪುತ್ರಸುಖವನ್ನು ಹೊಂದುವನಲ್ಲದೇ ಪರತ್ರ ಸ್ವರ್ಗಸುಖವನ್ನು ಹೊಂದುವನು. ॥೪೦॥ ॥೪೧॥

॥ ಇಲ್ಲಿಗೆ ಶ್ರೀಭವಿಷ್ಯೋತ್ತರ ಪುರಾಣದಲ್ಲಿಯ ಶ್ರಾವಣಶುಕ್ಲ "ಪುತ್ರದಾ"
ಏಕಾದಶೀವ್ರತ ಮಹಾತ್ಮೆಯು ಸಮಾಪ್ತವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

# ಭಾದ್ರಪದಕೃಷ್ಣೈಕಾದಶೀ ವ್ರತಕಥಾ

**ಯುಧಿಷ್ಠಿರ ಉವಾಚ**

**ಭಾದ್ರಸ್ಯ ಕೃಷ್ಣಪಕ್ಷೇ ತು ಕಿಂ ನಾಮ್ನೈಕಾದಶೀ ಭವೇತ್ ।**

**ಏತದಿಚ್ಛಾಮ್ಯಹಂ ಶ್ರೋತುಂ ಕಥಯಸ್ವ ಜನಾರ್ದನ ॥೧॥**

**ಶ್ರೀಕೃಷ್ಣ ಉವಾಚ**

**ಶೃಣುಷ್ವೈಕಮನಾ ರಾಜನ್ ಕಥಯಿಷ್ಯಾಮಿ ವಿಸ್ತರಾತ್ ।**
**ಅಜೇತಿ ನಾಮ್ನಾ ವಿಖ್ಯಾತಾ ಸರ್ವಪಾಪಪ್ರಣಾಶಿನೀ ॥೨॥**

**ಪೂಜಯಿತ್ವಾ ಹೃಷೀಕೇಶಂ ವ್ರತಂ ತಸ್ಯಾಃ ಕರೋತಿ ಯಃ ।**
**ಪಾಪಾನಿ ತಸ್ಯ ನಶ್ಯಂತಿ ವ್ರತಸ್ಯ ಶ್ರವಣಾದಪಿ ॥೩॥**

**ನಾತಃ ಪರತರಾ ರಾಜನ್ ಲೋಕದ್ವಯಹಿತಾವಹಾ ।**
**ಸತ್ಯಮುಕ್ತಂ ಮಯಾ ಹ್ಯೇತನ್ನಾಸತ್ಯಂ ಭಾಷಿತಂ ಮಮ ॥೪॥**

**ಹರಿಶ್ಚಂದ್ರ ಇತಿ ಖ್ಯಾತೋ ಬಭೂವ ನೃಪತಿಃ ಪುರಾ ।**
**ಚಕ್ರವರ್ತೀ ಸತ್ಯಸಂಧಃ ಸಮಸ್ತಾಯಾ ಭುವಃ ಪತಿಃ ॥೫॥**

---

"ಹೇ ಶ್ರೀಹರೇ, ಜನಾರ್ದನಾ, ಭಾದ್ರಪದಮಾಸದ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು? ಅದರ ಮಹಾತ್ಮೆಯನ್ನು ತಿಳಿಯಲು ಬಯಸಿದ್ದೇನೆ. ಆದ್ದರಿಂದ ಇದೆಲ್ಲವನ್ನು ತಿಳಿಸಿ ಅನುಗ್ರಹಿಸಬೇಕು" ಎಂದು ಯುಧಿಷ್ಠರನು ಪ್ರಾರ್ಥಿಸಲು ॥೧॥ ಶ್ರೀಕೃಷ್ಣನು ಹೇಳುತ್ತಾನೆ - ಹೇ ಧರ್ಮರಾಜಾ, ಎಲ್ಲವನ್ನೂ ವಿಸ್ತಾರವಾಗಿ ಹೇಳುವೆನು. ಏಕಾಗ್ರಮನಸ್ಸಿನಿಂದ ಕೇಳುವವನಾಗು. ಭಾದ್ರಪದ ಕೃಷ್ಣಪಕ್ಷದ ಏಕಾದಶಿಯು "ಅಜಾ" ಎಂದು ಕರೆಯಲ್ಪಡುತ್ತಿದ್ದು ಸಕಲಪಾಪಗಳನ್ನು ನಾಶಮಾಡುವಂಥದಾಗಿದೆ. ॥೨॥ ಆ ದಿನ ಹೃಷೀಕೇಶನನ್ನು ಪೂಜಿಸಿ ಏಕಾದಶೀವ್ರತವನ್ನು ಆಚರಿಸುವವನ ಮತ್ತು ಈ ಏಕಾದಶಿ ಮಹಾತ್ಮೆಯನ್ನು ಶ್ರದ್ಧೆಯಿಂದ ಕೇಳುವವನ ಸರ್ವಪಾಪಗಳು ನಾಶವಾಗುತ್ತವೆ. ॥೩॥ ಹೇ ರಾಜಾ, ಲೋಕದ್ವಯಗಳಲ್ಲಿಯೂ (ಇಹಲೋಕ, ಪರಲೋಕ) ಮನುಷ್ಯನಿಗೆ ಹಿತವನ್ನುಂಟು ಮಾಡುವಲ್ಲಿ ಈ ವ್ರತಕ್ಕಿಂತ ಶ್ರೇಷ್ಠವಾದ ಬೇರೊಂದು ವ್ರತವಿಲ್ಲ. ನಾನು ನಿನಗೆ ಸತ್ಯವಾದುದನ್ನೇ ಹೇಳುತ್ತಲಿದ್ದೇನೆ. ಅಸತ್ಯವನ್ನಲ್ಲ. ॥೪॥ ಹಿಂದಕ್ಕೆ ಸತ್ಯಸಂಧನಾದ, ಅಖಂಡಭೂಮಂಡಲಾಧಿಪತಿಯಾದ ಹರಿಶ್ಚಂದ್ರನೆಂಬ ಒಬ್ಬ ಚಕ್ರವರ್ತಿ ರಾಜನಿದ್ದನು. ॥೫॥ ಅವನು ಅದಾವುದೋ ಕರ್ಮನಿಮಿತ್ತವಾಗಿ ರಾಜ್ಯಭ್ರಷ್ಟನಾಗಿ ತನ್ನ ಹೆಂಡತಿ ಮಕ್ಕಳನ್ನು ಮಾರಿ

ಕಸ್ಯಾಪಿ ಕರ್ಮಣೋ ಯೋಗಾದ್ರಾಜ್ಯಭ್ರಷ್ಟೋ ಬಭೂವ ಸಃ |
ವಿಕ್ರೀಯ ವನಿತಾಂ ಪುತ್ರಾನ್ ಸ ಚಕಾರಾತ್ಮವಿಕ್ರಯಮ್ ||೬||

ಪುಲ್ಕಸಸ್ಯ ಚ ದಾಸತ್ವಂ ಗತೋ ರಾಜಾ ಸ ಪುಣ್ಯಕೃತ್ |
ಸತ್ಯಮಾಲಂಬ್ಯ ರಾಜೇಂದ್ರ ಮೃತಚೈಲಾಪಹಾರಕಃ ||೭||

ಸೋಮವನ್ನೃಪತಿಶ್ರೇಷ್ಠೋ ನ ಸತ್ಯಾಚ್ಚಲಿತಸ್ತಥಾ |
ಏವಂ ಗತಸ್ಯ ನೃಪತೇರ್ಬಹವೋ ವತ್ಸರಾ ಗತಾಃ ||೮||

ತತಶ್ಚಿಂತಾಪರೋ ರಾಜಾ ಬಭೂವಾತ್ಯಂತದುಃಖಿತಃ |
ಕಿಂ ಕರೋಮಿ ಕ್ವ ಗಚ್ಛಾಮಿ ನಿಷ್ಕೃತಿರ್ಮೇ ಕಥಂ ಭವೇತ್ ||೯||

ಇತಿ ಚಿಂತಯತಸ್ತಸ್ಯ ಮಗ್ನಸ್ಯ ವೃಜಿನಾರ್ಣವೇ |
ಆಜಗಾಮ ಮುನಿಃ ಕಶ್ಚಿತ್ ಜ್ಞಾತ್ವಾ ರಾಜಾನಮಾತುರಮ್ ||೧೦||

ಪರೋಪಕರಣಾರ್ಥಾಯ ನಿರ್ಮಿತೋ ಬ್ರಹ್ಮಣಾ ದ್ವಿಜಃ |
ಸ ತಂ ದೃಷ್ಟ್ವಾ ದ್ವಿಜವರಂ ನನಾಮ ನೃಪಸತ್ತಮಃ ||೧೧||

ಕೃತಾಂಜಲಿಪುಟೋ ಭೂತ್ವಾ ಗೌತಮಸ್ಯಾಗ್ರತಃ ಸ್ಥಿತಃ |
ಕಥಯಾಮಾಸ ವೃತ್ತಾಂತಮಾತ್ಮನೋ ದುಃಖಸಂಯುತಮ್ ||೧೨||

ಶ್ರುತ್ವಾ ನೃಪತಿವಾಕ್ಯಾನಿ ಗೌತಮೋ ವಿಸ್ಮಯಾನ್ವಿತಃ |
ಉಪದೇಶಂ ನೃಪತಯೇ ವ್ರತಸ್ಯಾಸ್ಯ ಮುನಿರ್ದದೌ ||೧೩||

---

ಕೊನೆಗೆ ತನ್ನನ್ನೂ ಮಾರಿಕೊಂಡನು. ||೬|| ಹೇ ರಾಜೇಂದ್ರ, ಪುಣ್ಯಾತ್ಮನಾದ ಅವನು ಸತ್ಯವನ್ನು ನಂಬಿ ಒಬ್ಬ ಚಾಂಡಾಲನ ದಾಸನಾಗಿ ಸ್ಮಶಾನದಲ್ಲಿದ್ದು ಶವಗಳ ಮೇಲಿನ ವಸ್ತ್ರಗಳನ್ನು ಉಟ್ಟುಕೊಳ್ಳತೊಡಗಿದನು. ||೭|| ಇಷ್ಟಾದರೂ ಸೋಮರಾಜನಂತಿದ್ದ ಹರಿಶ್ಚಂದ್ರ ರಾಜನು ತನ್ನ ಸತ್ಯದಿಂದ ವಿಚಲಿತನಾಗಲಿಲ್ಲ. ಈ ರೀತಿಯಿಂದ ಅನೇಕ ವರ್ಷಗಳು ಗತಿಸಲು ||೮|| ಚಿಂತಾಪರನಾದ ರಾಜನು ಬಹುದುಃಖಿಸುತ್ತ "ಹಾ ನಾನೇನು ಮಾಡಲಿ, ಎಲ್ಲಿಗೆ ಹೋಗಲಿ, ಈ ಕಷ್ಟದಿಂದ ನನಗೆ ಹೇಗೆ ಮುಕ್ತಿಯಾದೀತು? ||೯|| ಎಂದು ಚಿಂತಿಸತೊಡಗಿದನು. ಪಾಪಸಮುದ್ರದಲ್ಲಿ ಮುಳುಗಿದ ರಾಜನು ಈ ರೀತಿ ಚಿಂತಾಕ್ರಾಂತನಾಗಿರಲು ರಾಜನು ದುಃಖಿತನಾಗಿರುವದನ್ನರಿತು ಒಬ್ಬ ಮುನಿಯು ರಾಜನಿದ್ದಲ್ಲಿ ಬಂದನು. ||೧೦|| ಪರೋಪಕಾರಕ್ಕಾಗಿಯೇ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಆ ಮುನಿವರನು ಬಂದಿರುವದನ್ನು ಕಂಡ ರಾಜನು ಅವನಿಗೆ ಭಕ್ತಿಯಿಂದ ನಮಿಸಿದನು. ||೧೧|| ಗೌತಮರೆಂಬ ಆ ಋಷಿಯ ಎದುರಿನಲ್ಲಿ ಕೈಜೋಡಿಸಿಕೊಂಡು ತನ್ನ ದುಃಖಮಯವಾದ ವೃತ್ತಾಂತವನ್ನೆಲ್ಲ ಗೌತಮ ಋಷಿಗಳ ಮುಂದೆ ನಿವೇದಿಸಿದನು. ||೧೨|| ಗೌತಮ ಮುನಿಯು ರಾಜನ ವೃತ್ತಾಂತವನ್ನರಿತು ಅತ್ಯಂತ ವಿಸ್ಮಿತರಾಗಿ ಅವನಿಗೆ "ಅಜಾ" ವ್ರತದ ಅನುಷ್ಠಾನದ ಬಗ್ಗೆ ಉಪದೇಶಿಸಿದರು. ||೧೩|| "ಹೇ ಹರಿಶ್ಚಂದ್ರ

ಮಾಸಿ ಭಾದ್ರಪದೇ ರಾಜನ್ ಕೃಷ್ಣಪಕ್ಷೇ ತು ಶೋಭನಾ ।
ಏಕಾದಶೀ ಸಮಾಯಾತಾ ಅಜಾನಾಮ್ನ್ಯತಿಪುಣ್ಯದಾ ॥೧೪॥

ತಸ್ಯಾಃ ಕುರು ವ್ರತಂ ರಾಜನ್ ಪಾಪನಾಶೋ ಭವಿಷ್ಯತಿ ।
ತವ ಭಾಗ್ಯವಶಾದೇಷಾ ಸಪ್ತಮೇಽಹ್ನಿ ಸಮಾಗತಾ ॥೧೫॥

ಉಪವಾಸಪರೋ ಭೂತ್ವಾ ರಾತ್ರೌ ಜಾಗರಣಂ ಕುರು ।
ಏವಂ ತಸ್ಯಾ ವ್ರತೇ ಚೀರ್ಣೇ ಸರ್ವಪಾಪಕ್ಷಯೋ ಭವೇತ್ ॥೧೬॥

ತವ ಪುಣ್ಯಪ್ರಭಾವೇಣ ಚಾಗತೋಽಹಂ ನೃಪೋತ್ತಮ ।
ಇತ್ಯೇವಂ ಕಥಯಿತ್ವಾ ತು ಮುನಿರಂತರಧೀಯತ ॥೧೭॥

ಮುನಿವಾಕ್ಯಂ ನೃಪಃ ಶ್ರುತ್ವಾ ಚಕಾರ ವ್ರತಮುತ್ತಮಮ್ ।
ಕೃತೇ ತಸ್ಮಿನ್ ವ್ರತೇ ರಾಜ್ಞಃ ಪಾಪಸ್ಯಾಂತೋಽಭವತ್ ಕ್ಷಣಾತ್ ॥೧೮॥

ಶ್ರೂಯಂತಾಂ ರಾಜಶಾರ್ದೂಲ ಪ್ರಭಾವೋಽಸ್ಯ ವ್ರತಸ್ಯ ಚ ।
ಯದ್ದುಃಖಂ ಬಹುಭಿರ್ವರ್ಷೈರ್ಭೋಕ್ತವ್ಯಂ ತತ್ಕ್ಷಯೋ ಭವೇತ್ ॥೧೯॥

ನಿಸ್ತೀರ್ಣದುಃಖೋ ರಾಜಾಽಽಸೀದ್ವ್ರತಸ್ಯಾಸ್ಯ ಪ್ರಭಾವತಃ ।
ಪತ್ನ್ಯಾ ಸಹ ಸಮಾಯೋಗಂ ಪುತ್ರಜೀವನಮಾಪ ಸಃ ॥೨೦॥

ರಾಜಾ, ಭಾದ್ರಪದ ಮಾಸದ ಕೃಷ್ಣಪಕ್ಷದಲ್ಲಿ ಶುಭಪ್ರದವಾದ ಹಾಗೂ ಅತಿಪುಣ್ಯಪ್ರದವಾದ "ಅಜಾ" ಎಂಬ ಹೆಸರಿನ ಒಂದು ಏಕಾದಶಿಯು ಬರುವದು. ॥೧೪॥ ಆ ದಿನದಲ್ಲಿ ನೀನು ಏಕಾದಶೀವ್ರತವನ್ನಾಚರಿಸಿದರೆ ನಿನ್ನೆಲ್ಲ ಪಾಪಗಳು ಹಾಗೂ ದುರಿತಗಳು ಕಳೆಯುವವು. ನಿನ್ನ ಸುದೈವದಿಂದ ಇಂದಿನಿಂದ ಏಳನೇಯ ದಿನವೇ ಆ ಏಕಾದಶಿಯು ಬರುವದು. ॥೧೫॥ ಇಡೀ ದಿನ ಉಪವಾಸದಿಂದ ಇದ್ದು ರಾತ್ರಿ ಜಾಗರಣೆಯನ್ನು ಮಾಡು. ಈ ಪ್ರಕಾರ ಏಕಾದಶೀ ವ್ರತವನ್ನಾಚರಿಸಿದೆಯಾದರೆ ಸರ್ವಪಾಪವು ಕ್ಷಯಹೊಂದುವದು. ॥೧೬॥ ಹೇ ರಾಜಾ, ನಿನ್ನ ಪುಣ್ಯಪ್ರಭಾವದಿಂದ ನಾನಿಲ್ಲಿ ಬಂದು ನಿನಗೆ ಉಪದೇಶಿಸಿದ್ದೇನೆ" ಎಂದು ಹೇಳಿ ಗೌತಮರು ಅಲ್ಲಿಂದ ಹೊರಟು ಹೋದರು. ॥೧೭॥ ಮುನಿಗಳ ಉಪದೇಶದಂತೆ ಹರಿಶ್ಚಂದ್ರನು "ಅಜಾ" ಏಕಾದಶೀವ್ರತವನ್ನು ಆಚರಿಸಲು ಕ್ಷಣದಲ್ಲಿಯೇ ಅವನ ದುರಿತಗಳೆಲ್ಲ ದೂರವಾದವು. ॥೧೮॥ ಆದ್ದರಿಂದ ಹೇ ಧರ್ಮರಾಜಾ, ಈ ವ್ರತದ ಪ್ರಭಾವವನ್ನು ಕೇಳು. ಬಹುವರ್ಷಗಳ ವರೆಗೆ ಅನುಭೋಗಿಸಬೇಕಾದ ದುಃಖವು ತತ್ಕಾಲದಲ್ಲಿಯೇ ನಾಶವಾಗುವದು. ॥೧೯॥ ಈ ವ್ರತದ ಪ್ರಭಾವದಿಂದ ಹರಿಶ್ಚಂದ್ರನು ತನ್ನೆಲ್ಲ ದುಃಖಗಳನ್ನು ಕಳೆದುಕೊಂಡು ಹೆಂಡತಿಮಕ್ಕಳನ್ನು ಕೂಡಿಕೊಂಡನು. ॥೨೦॥ ವ್ರತಾಂತದಲ್ಲಿ ದೇವದುಂದುಭಿಗಳು ಮೊಳಗಿದವು. ಪುಷ್ಪವೃಷ್ಟಿಯಾಯಿತು. ಏಕಾದಶೀವ್ರತದ ಪ್ರಭಾವದಿಂದ ಮತ್ತೆ ಮೊದಲಿನಂತೆ ನಿಷ್ಕಂಟಕವಾ-

ದೇವದುಂದುಭಯೋ ನೇದುಃ ಪುಷ್ಪವರ್ಷಮಭೂದ್ದಿವಃ ।
ಏಕಾದಶ್ಯಾಃ ಪ್ರಭಾವೇಣ ಪ್ರಾಪ್ತಂ ರಾಜ್ಯಮಕಂಟಕಮ್ ॥೨೧॥

ಸ್ವರ್ಗಂ ಲೇಭೇ ಹರಿಶ್ಚಂದ್ರಃ ಸಪುರಃ ಸಪರಿಚ್ಛದಃ ।
ಈದೃಗ್ವಿಧಂ ವ್ರತಂ ರಾಜನ್ ಯೇ ಕುರ್ವಂತಿ ದ್ವಿಜೋತ್ತಮಾಃ ॥೨೨॥

ಸರ್ವಪಾಪವಿನಿರ್ಮುಕ್ತಾಸ್ತ್ರಿದಿವಂ ಯಾಂತಿ ತೇ ಧ್ರುವಮ್ ।
ಪಠನಾಚ್ಛ್ರವಣಾದ್ರಾಜನ್ ಅಶ್ವಮೇಧಫಲಂ ಲಭೇತ್ ॥೨೩॥

॥ ಇತಿ ಶ್ರೀಬ್ರಹ್ಮವೈವರ್ತಪುರಾಣೇ ಭಾದ್ರಪದಕೃಷ್ಣೇ ಅಜಾನಾಮ್ನ್ಯೇಕಾದಶ್ಯಾ ಮಾಹಾತ್ಮ್ಯಂ ಸಂಪೂರ್ಣಮ್ ॥

---

ರಾಜ್ಯವು ಪ್ರಾಪ್ತವಾಯಿತು. ॥೨೧॥ ಮುಂದೆ ಸೇವಕಜನ ಮತ್ತು ಪರಿವಾರ ಜನರಿಂದ ಕೂಡಿಕೊಂಡು ಹರಿಶ್ಚಂದ್ರನು ಸ್ವರ್ಗಲೋಕವಾಸವನ್ನು ಪಡೆದನು. ಹೇ ಧರ್ಮರಾಜಾ, ಮಹಿಮೋಪೇತವಾದ ಇಂಥ ವ್ರತವನ್ನು ಯಾವ ದ್ವಿಜೋತ್ತಮರು ಆಚರಿಸುವರೋ ॥೨೨॥ ಅವರು ಸಕಲಪಾಪಗಳಿಂದ ಮುಕ್ತರಾಗಿ ನಿಶ್ಚಿತವಾಗಿ ಸ್ವರ್ಗಲೋಕವನ್ನು ಸೇರುವರು. ಈ ವ್ರತದ ಮಹಾತ್ಮೆಯ ಪಠನ ಹಾಗೂ ಶ್ರವಣಗಳಿಂದ ಅಶ್ವಮೇಧಯಾಗದ ಫಲವು ದೊರೆಯುವದು. ॥೨೩॥

॥ ಇಲ್ಲಿಗೆ ಶ್ರೀಬ್ರಹ್ಮವೈವರ್ತಪುರಾಣದಲ್ಲಿಯ ಭಾದ್ರಪದಕೃಷ್ಣಪಕ್ಷದ "ಅಜಾ" ಎಂಬ ಹೆಸರಿನ ಏಕಾದಶೀ ಮಹಾತ್ಮೆಯು ಸಮಾಪ್ತವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

# ಭಾದ್ರಪದಶುಕ್ಲೈಕಾದಶೀ ವ್ರತಕಥಾ

**ಯುಧಿಷ್ಠಿರ ಉವಾಚ**

**ನಭಸ್ಯಸಿತಪಕ್ಷೇ ತು ಕಿಂ ನಾಮ್ನೈಕಾದಶೀ ಭವೇತ್ ।**
**ಕೋ ದೇವಃ ಕೋ ವಿಧಿಸ್ತಸ್ಯಾಃ ಕಿಂ ಪುಣ್ಯಂ ಚ ವದಸ್ವ ನಃ ॥೧॥**

**ಶ್ರೀಕೃಷ್ಣ ಉವಾಚ**

**ಕಥಯಾಮಿ ಮಹಾಪುಣ್ಯಾಂ ಸ್ವರ್ಗಮೋಕ್ಷಪ್ರದಾಯಿನೀಮ್ ।**
**ವಾಮನೈಕಾದಶೀ ರಾಜನ್ ಸರ್ವಪಾಪಹರಾಂ ಪರಾಮ್ ॥೨॥**

**ಇಮಾಮೇವ ಜಯಂತಾಖ್ಯಾಂ ಪ್ರಾಹುರೇಕಾದಶೀಂ ನೃಪ ।**
**ತಸ್ಯಾಃ ಶ್ರವಣಮಾತ್ರೇಣ ಸರ್ವಪಾಪಕ್ಷಯೋ ಭವೇತ್ ॥೩॥**

**ವಾಜಪೇಯಫಲಂ ಪ್ರೋಕ್ತಂ ನಾತಃ ಪರತರಂ ನೃಣಾಮ್ ।**
**ಪಾಪಿನಾಂ ಪಾಪಶಮನಂ ಜಯಂತೀವ್ರತಮುತ್ತಮಮ್ ॥೪॥**

**ನಾತಃ ಪರತರಾ ರಾಜನ್ನ ವೈ ಮೋಕ್ಷಪ್ರದಾಯಿನೀ ।**
**ಏತಸ್ಮಾತ್ಕಾರಣಾದ್ರಾಜನ್ ಕರ್ತವ್ಯಾ ಗತಿಮಿಚ್ಛತಾ ॥೫॥**

**ವೈಷ್ಣವೈರ್ಮಮ ಭಕ್ತೈಸ್ತು ಮನುಜೈರ್ಮತ್ಪರಾಯಣೈಃ ।**
**ನಭಸ್ಯೇ ವಾಮನೋ ಯೈಸ್ತು ಪೂಜಿತಸ್ತೈರ್ಜಗತ್ತ್ರಯಮ್ ॥೬॥**

---

"ಶ್ರೀಕೃಷ್ಣಪರಮಾತ್ಮಾ, ಭಾದ್ರಪದ ಮಾಸದ ಶುಕ್ಲಪಕ್ಷದ ಏಕಾದಶಿಯ ಹೆಸರೇನು? ಆ ದಿನದ ದೇವತೆಯಾರು? ಏಕಾದಶೀವ್ರತದ ವಿಧಿಯೇನು? ಮತ್ತು ಈ ವ್ರತಾನುಷ್ಠಾನದಿಂದ ಬರುವ ಪುಣ್ಯಫಲವೆಷ್ಟು? ಇದೆಲ್ಲವನ್ನು ತಿಳಿಸಿ ಅನುಗ್ರಹಿಸು" ಎಂದು ಯುಧಿಷ್ಠಿರನು ಪ್ರಾರ್ಥಿಸಲು ॥೧॥ ಶ್ರೀಕೃಷ್ಣನು ಹೇಳುತ್ತಾನೆ - ಹೇ ರಾಜನ್, ಸಕಲಪಾಪಗಳನ್ನು ಕಳೆಯುವ, ಮಹಾಪುಣ್ಯಪ್ರದವಾದ, ಸ್ವರ್ಗಮೋಕ್ಷಗಳನ್ನು ಕೊಡುವ, ಶ್ರೇಷ್ಠವಾದ ವಾಮನೈಕಾದಶಿಯ ಬಗ್ಗೆ ನಿನಗೆ ತಿಳಿಸುವೆನು. ॥೨॥ ಈ ಏಕಾದಶಿಯನ್ನೇ "ಜಯಂತೀ" ಎಂದು ಕರೆಯುವರು. ಇದರ ಮಾಹಾತ್ಮ್ಯ ಶ್ರವಣ ಮಾತ್ರದಿಂದಲೇ ಸಕಲ ಪಾಪಗಳು ದೂರವಾಗುವವು. ॥೩॥ ವ್ರತಾನುಷ್ಠಾನದಿಂದ ವಾಜಪೇಯ ಯಾಗದ ಫಲವು ದೊರೆಯುವದು. ಇದಕ್ಕಿಂತ ಶ್ರೇಷ್ಠವಾದ ವ್ರತವಿಲ್ಲ. ಪಾಪಿಗಳ ಪಾಪಗಳನ್ನು ಕಳೆಯುವಲ್ಲಿ ಜಯಂತೀವ್ರತವು ಅತಿಶ್ರೇಷ್ಠವಾಗಿದೆ. ॥೪॥ ಹೇ ರಾಜನ್, ಮೋಕ್ಷಸಾಧನಗಳಲ್ಲಿ ಈ ವ್ರತಕ್ಕಿಂತ ಶ್ರೇಷ್ಠವಾದ ಬೇರೊಂದು ವ್ರತವಿಲ್ಲ. ಆದ್ದರಿಂದಲೇ ಸದ್ಗತಿಯನ್ನು ಬಯಸುವವನು ಈ ವ್ರತವನ್ನು ತಪ್ಪದೇ ಆಚರಿಸಬೇಕು. ॥೫॥ ನನ್ನಲ್ಲಿ ನಿಷ್ಠರಾದ ಯಾವ ವೈಷ್ಣವ ಭಕ್ತರು ಭಾದ್ರಪದ ಮಾಸದಲ್ಲಿ ಶ್ರೀಹರಿ ವಾಮನನನ್ನು ಭಕ್ತಿಯಿಂದ ಪೂಜಿಸುವರೋ ಅವರಿಂದ ಮೂರ್ಲೋಕಗಳೂ ಪೂಜಿಸಲ್ಪಟ್ಟಂತೆ. ॥೬॥ ಈ ವಿಷಯದಲ್ಲಿ ಸಂದೇಹವೇ ಇಲ್ಲ. ಹೀಗೆ

ಪೂಜಿತಂ ನಾತ್ರ ಸಂದೇಹಸ್ತೇ ಯಾಂತಿ ಹರಿಸನ್ನಿಧಿಮ್ ।
ವಾಮನಃ ಪೂಜಿತೋ ಯೇನ ಕಮಲೈಃ ಕಮಲೇಕ್ಷಣಃ ||೭||

ನಭಸ್ಯಸಿತಪಕ್ಷೇ ತು ಜಯಂತ್ಯೇಕಾದಶೀ ದಿನೇ ।
ತೇನಾರ್ಚಿತಂ ಜಗತ್ಸರ್ವಂ ತ್ರಯೋ ದೇವಾಃ ಸನಾತನಮ್ ||೮||

ಏತಸ್ಮಾತ್ಕಾರಣಾದ್ರಾಜನ್ ಕರ್ತವ್ಯೋ ಹರಿವಾಸರಃ ।
ಅಸ್ಮಿನ್ ಕೃತೇ ನ ಕರ್ತವ್ಯಂ ಕಿಂಚಿದಸ್ತಿ ಜಗತ್ತ್ರಯೇ ||೯||

ಅಸ್ಯಾಂ ಪ್ರಸುಪ್ತೋ ಭಗವಾನ್ಯೇತ್ಯಂಗಪರಿವರ್ತನಮ್ ।
ತಸ್ಮಾದೇನಾಂ ಜನಾಃ ಸರ್ವೇ ವದಂತಿ ಪರಿವರ್ತಿನೀಮ್ ||೧೦||

ಯುಧಿಷ್ಠಿರ ಉವಾಚ

ಸಂಶಯೋಽಸ್ತಿ ಮಹಾನ್ ಮಹ್ಯಂ ಶ್ರೂಯತಾಂ ಚ ಜನಾರ್ದನ ।
ಕಥಂ ಸುಪ್ತೋಽಸಿ ದೇವೇಶ ಕಥಂ ಯಾಸ್ಯಂಗವರ್ತನಮ್ ||೧೧||

ಕಿಮರ್ಥಂ ದೇವದೇವೇಶ ಬಲಿರ್ಬದ್ಧಸ್ತ್ವಯಾಽಸುರಃ ।
ಸಂತುಷ್ಟಾಃ ಪೃಥಿವೀದೇವಾಃ ಕಿಮಕುರ್ವನ್ ಜನಾರ್ದನ ||೧೨||

ಕೋ ವಿಧಿಃ ಕಿಂ ವ್ರತಂ ಚೈವ ಚಾತುರ್ಮಾಸ್ಯಮುಪಾಸತಾಮ್ ।
ತ್ವಯಿ ಸುಪ್ತೇ ಜಗನ್ನಾಥೇ ಕಿಂ ಕುರ್ವಂತಿ ಜನಾಃ ಪ್ರಭೋ ||೧೩||

---

ಪೂಜಿಸುವವರು ಹರಿಸಾನ್ನಿಧ್ಯವನ್ನು ಪಡೆಯುವರು. ಕಮಲನೇತ್ರಗಳುಳ್ಳ ವಾಮನನನ್ನು ಭಾದ್ರಪದ ಶುದ್ಧ ಏಕಾದಶಿಯಂದು ಯಾವನು ಕಮಲಗಳಿಂದ ಭಕ್ತಿಯಿಂದ ಪೂಜಿಸುವನೋ ||೭|| ಅವನು ಬ್ರಹ್ಮವಿಷ್ಣುಮಹೇಶ್ವರರಿಂದ ಸಹಿತರಾದ ಮೂರ್ಲೋಕಗಳ ದೇವತೆಗಳನ್ನು ಪೂಜಿಸಿದಂತೆಯೇ ಆಗುವದು. ||೮|| ಆದ್ದರಿಂದಲೇ ಹೇ ರಾಜಾ, ಈ ಏಕಾದಶೀವ್ರತವನ್ನು ಶ್ರದ್ಧೆಯಿಂದ ಆಚರಿಸಬೇಕು. ಈ ವ್ರತಾನುಷ್ಠಾನ ಮಾಡಿದಮೇಲೆ ಜಗತ್ತ್ರಯದಲ್ಲಿ ಇನ್ನು ಮಾಡಬೇಕಾದುದು ಯಾವುದೂ ಉಳಿಯುವದಿಲ್ಲ. ||೯|| ಆಷಾಢಶುದ್ಧ ಏಕಾದಶಿಯ ದಿನ ಮಲಗಿದ ಪರಮಾತ್ಮನು ಈ ಏಕಾದಶಿಯ ದಿನ ಮಗ್ಗಲು ಹೊರಳುವದರಿಂದ ಜನರು ಈ ಏಕಾದಶಿಯನ್ನು "ಪರಿವರ್ತಿನೀ" ಎಂದು ಕರೆಯುವರು. ||೧೦|| ಇದನ್ನೆಲ್ಲ ಕೇಳಿದ ಯುಧಿಷ್ಠಿರನು - ಹೇ ಸ್ವಾಮಿ ಜನಾರ್ದನಾ, ಈಗ ನನಗೊಂದು ದೊಡ್ಡಸಂದೇಹ ಬಂದಿದೆ. ಅದನ್ನು ಕೇಳು. ಏನೆಂದರೆ ದೇವದೇವೋತ್ತಮಾ, ನೀನು ಮಲಗುವುದೆಂದರೇನು ಹಾಗೂ ಹೇಗೆ ಮಗ್ಗಲಾಗುವಿ? ||೧೧|| ಅಸುರನಾದ ಬಲಿಯನ್ನು ಏತಕ್ಕಾಗಿ ನಿಗ್ರಹಿಸಿದಿ? ಬಲಿನಿಗ್ರಹದ ನಂತರ ಸಂತುಷ್ಟರಾದ ವಿಪ್ರರು ಏನು ಮಾಡಿದರು? ||೧೨|| ಚಾತುರ್ಮಾಸ್ಯವ್ರತವನ್ನು ಧಾರಣಮಾಡಿದವರ ನಿಯಮಗಳೇನು, ವ್ರತದ ವಿಧಾನವಾವುದು? ಹೇ ಜಗನ್ನಾಥ, ನೀನು ಮಲಗಿಕೊಂಡಾಗ ಜನರೇನು ಮಾಡುವರು? ||೧೩|| ಹೇ ಪ್ರಭೋ, ಇದೆಲ್ಲವನ್ನು ವಿಸ್ತಾರವಾಗಿ

ಏತದ್ವಿಸ್ತರತೋ ಬ್ರೂಹಿ ಸಂಶಯಂ ಹರ ಮೇ ಪ್ರಭೋ ।

ಶ್ರೀಕೃಷ್ಣ ಉವಾಚ

ಶ್ರೂಯತಾಂ ರಾಜಶಾರ್ದೂಲ ಕಥಾಂ ಪಾಪಹರಾಂ ಪರಾಮ್ ॥೧೪॥

ಬಲಿರ್ವೈ ದಾನವಃ ಪೂರ್ವಮಾಸೀತ್ತ್ರೇತಾಯುಗೇ ನೃಪ ।
ಅಪೂಜಯಚ್ಚ ಮಾಂ ನಿತ್ಯಂ ಮದ್ಭಕ್ತೋ ಮತ್ಪರಾಯಣಃ ॥೧೫॥

ಜಪೈಸ್ತು ವಿವಿಧೈಃ ಸೂಕ್ತೈರ್ಯಜತೇ ಮಾಂ ಸ ನಿತ್ಯಶಃ ।
ದ್ವಿಜಾನಾಂ ಪೂಜಕೋ ನಿತ್ಯಂ ಯಜ್ಞಕರ್ಮಕೃತಾಶಯಃ ॥೧೬॥

ಪರಂತ್ವಿಂದ್ರಕೃತದ್ವೇಷೋ ದೇವಲೋಕಮಜೀಜಯತ್ ।
ಮದ್ದತ್ತಮಿಂದ್ರಲೋಕಶ್ಚ ಜಿತಸ್ತೇನ ಮಹಾತ್ಮನಾ ॥೧೭॥

ವಿಲೋಕ್ಯ ಚ ತತಃ ಸರ್ವೇ ದೇವಾಃ ಸಂಹತ್ಯ ಮಂತ್ರಯನ್ ।
ಸರ್ವೇ ಮಿಲಿತ್ವಾ ಗಂತವ್ಯಂ ದೇವಂ ವಿಜ್ಞಾಪಯಿತುಂ ಪ್ರಭುಮ್ ॥೧೮॥

ತತಶ್ಚ ದೇವಋಷಿಭಿಃ ಸಾಕಮಿಂದ್ರೋ ಗತಃ ಪ್ರಭುಮ್ ।
ಶಿರಸಾ ಹ್ಯವನೀಂ ಗತ್ವಾ ಸ್ತುತ ಇಂದ್ರೇಣ ಸೂಕ್ತಿಭಿಃ ॥೧೯॥

---

ಹೇಳಿ ನನ್ನ ಸಂಶಯವನ್ನು ಪರಿಹರಿಸಬೇಕು" ಎಂದು ವಿಜ್ಞಾಪಿಸಲು ಶ್ರೀಕೃಷ್ಣನು ಹೇಳುತ್ತಾನೆ - ಹೇ ರಾಜನ್, ಪಾಪಪರಿಹಾರಕವಾದ ಉತ್ತಮವಾದ ಕಥೆಯೊಂದನ್ನು ಹೇಳುವೆನು ಕೇಳು. ॥೧೪॥ ಹೇ ರಾಜಾ, ಹಿಂದಕ್ಕೆ ತ್ರೇತಾಯುಗದಲ್ಲಿ ಬಲಿ ನಾಮಕ ಒಬ್ಬ ಅಸುರನಿದ್ದನು. ನನ್ನ ಭಕ್ತನೂ, ನನ್ನಲ್ಲಿ ನಿಷ್ಠೆಯುಳ್ಳವನೂ ಆದ ಅವನು ಪ್ರತಿದಿನ ನನ್ನನ್ನು ಭಕ್ತಿಯಿಂದ ಪೂಜಿಸುತ್ತಿದ್ದನು. ॥೧೫॥ ನಿತ್ಯದಲ್ಲೂ ಅವನು ನನ್ನನ್ನು ಕುರಿತು ವಿವಿಧ ಮಂತ್ರಗಳ ಜಪಗಳನ್ನು ಮಾಡುತ್ತಲಿದ್ದನು ಹಾಗೂ ವಿವಿಧ ಸೂಕ್ತ ಪಠನಪೂರ್ವಕ ಪೂಜಿಸುತ್ತಲಿದ್ದನು. ಬ್ರಾಹ್ಮಣರನ್ನು ಪೂಜಿಸುತ್ತಲಿದ್ದನು. ಯಜ್ಞಗಳನ್ನು ಮಾಡುತ್ತಲಿದ್ದನು. ॥೧೬॥ ಆದರೆ ಇಂದ್ರನನ್ನು ದ್ವೇಷಿಸುತ್ತಿದ್ದ ಆ ಮಹಾತ್ಮನು ದೇವತೆಗಳಿಗೆ ನನ್ನಿಂದ ಕೊಡಲ್ಪಟ್ಟಿದ್ದ ದೇವಲೋಕವನ್ನು ಗೆದ್ದು ವಶಪಡಿಸಿಕೊಂಡನು. ॥೧೭॥ ಇದನ್ನೆಲ್ಲ ನೋಡಿ ದೇವತೆಗಳೆಲ್ಲ ಒಂದೆಡೆ ಸೇರಿ "ದೇವೋತ್ತಮನಾದ ಶ್ರೀಹರಿಯಿದ್ದಲ್ಲಿ ಹೋಗಿ ನಮ್ಮ ಭವಣೆಯನ್ನು ವಿಜ್ಞಾಪಿಸಿಕೊಳ್ಳೋಣ" ಎಂದು ನಿರ್ಧರಿಸಿದರು. ॥೧೮॥ ಆ ಪ್ರಕಾರ ಇಂದ್ರನು, ದೇವತೆಗಳು ಹಾಗೂ ಋಷಿಗಳೊಂದಿಗೆ ಕೂಡಿಕೊಂಡು ಶ್ರೀಹರಿಯಿದ್ದಲ್ಲಿಗೆ ಹೋಗಿ ಶಿರಸಾಷ್ಟಾಂಗ ಪೂರ್ವಕ ನಮಸ್ಕರಿಸಿ ವೇದ ಸೂಕ್ತಗಳಿಂದ ಪರಮಾತ್ಮನನ್ನು ಸ್ತುತಿಸಿದನು. ॥೧೯॥ ಹೇ ಧರ್ಮರಾಜಾ, ಈ ಪ್ರಕಾರ

ಗುರುಣಾ ದೈವತ್ಯೈಃ ಸಾರ್ಧಂ ಬಹುಧಾ ಪೂಜಿತೋ ಹ್ಯಹಮ್ ।
ತತೋ ವಾಮನರೂಪೇಣ ಹ್ಯವತೀರ್ಣಶ್ಚ ಪಂಚಮಃ ॥೨೦॥

ಅತ್ಯುಗ್ರರೂಪೇಣ ತದಾ ಸರ್ವಂ ಬ್ರಹ್ಮಾಂಡರೂಪಿಣಾ ।
ಬಾಲಕೇನ ಜಿತಃ ಸೋಽಥ ಸತ್ಯಮಾಲಂಬ್ಯ ತಸ್ಥಿವಾನ್ ॥೨೧॥

ಯುಧಿಷ್ಠಿರ ಉವಾಚ

ತ್ವಯಾ ವಾಮನರೂಪೇಣ ಸೋಽಸುರಶ್ಚ ಜಿತಃ ಕಥಮ್ ।
ಏತತ್ಕಥಯ ದೇವೇಶ ಮಹ್ಯಂ ಭಕ್ತಾಯ ವಿಸ್ತರಾತ್ ॥೨೨॥

ಶ್ರೀಕೃಷ್ಣ ಉವಾಚ

ಮಯಾ ಬಾಲೇನ ಸ ಬಲಿಃ ಪ್ರಾರ್ಥಿತೋ ವಟುರೂಪಿಣಾ ।
ಪದತ್ರಯಮಿತಾಂ ಭೂಮಿಂ ದೇಹಿ ಮೇ ಭುವನತ್ರಯಮ್ ॥೨೩॥

ದತ್ತೇ ಭವತಿ ತೇ ರಾಜನ್ ನಾತ್ರ ಕಾರ್ಯಾ ವಿಚಾರಣಾ ।
ಇತ್ಯುಕ್ತಶ್ಚ ಮಯಾ ರಾಜಾ ದತ್ತವಾಂಸ್ತ್ರಿಪದಾಂ ಭುವಮ್ ॥೨೪॥

ಸಂಕಲ್ಪಮಾತ್ರಾದ್ವವೃಧೇ ದೇಹಸ್ತ್ರೈವಿಕ್ರಮಃ ಪರಮ್ ।
ಭೂರ್ಲೋಕೇ ತು ಕೃತೌ ಪಾದೌ ಭುವರ್ಲೋಕೇ ತು ಜಾನುನೀ ॥೨೫॥

---

ದೇವಗುರುವಾದ ಬೃಹಸ್ಪತ್ಯಾಚಾರ್ಯರು, ದೇವತೆಗಳು ಹಾಗೂ ಋಷಿಗಳಿಂದ ನಾನು ಬಹುವಿಧವಾಗಿ ಪೂಜಿಸಲ್ಪಟ್ಟೆನು. ಅನಂತರ ಐದನೇ ಅವತಾರವಾದ ವಾಮನ ರೂಪವನ್ನು [(೧) ಮತ್ಸ್ಯ, (೨) ಕೂರ್ಮ, (೩) ವರಾಹ, (೪) ನಾರಸಿಂಹ, (೫) ವಾಮನ] ಧರಿಸಿ ಧರೆಗೆ ಇಳಿದು ಬಂದೆನು. ಆಗ ಅತ್ಯುಗ್ರವಾದ ತ್ರಿವಿಕ್ರಮ ರೂಪವನ್ನು ಧಾರಣಮಾಡಿ ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿದ ವಾಮನರೂಪಿಯಾದ ನಾನು ಬಲಿಯನ್ನು ಗೆದ್ದು ನಿಗ್ರಹಿಸಿದೆನು. ಬಲಿಯು ಸತ್ಯವನ್ನವಲಂಬಿಸಿದ್ದರಿಂದ ಆಗ ಪ್ರತಿಕ್ರಿಯಿಸದೇ ಸುಮ್ಮನೇ ನಿಂತುಕೊಂಡನು. ॥೨೦॥೨೧॥ ಇದನ್ನು ಕೇಳಿದ ಯುಧಿಷ್ಠಿರನು - ಹೇ ದೇವೇಶ, ವಾಮನರೂಪಿಯಾಗಿದ್ದ ನೀನು ಆ ಅಸುರನನ್ನು ಅದೆಂತು ಜಯಿಸಿದಿ? ನಿನ್ನ ಭಕ್ತನಾಗಿರುವ ನನಗೆ ಈ ವಿಷಯವನ್ನು ವಿಸ್ತಾರವಾಗಿ ತಿಳಿಸು ಎಂದು ಕೇಳಿಕೊಳ್ಳಲು ॥೨೨॥ ಶ್ರೀಕೃಷ್ಣನು ಹೇಳುತ್ತಾನೆ - ವಟುರೂಪಿಯಾಗಿದ್ದ ಬಾಲಕನಾದ ನಾನು ಆ ಬಲಿಯನ್ನು ಕುರಿತು "ಹೇ ರಾಜಾ, ನನ್ನ ಪಾದದಳತೆಯ ಮೂರು ಪಾದ ಭೂಮಿಯನ್ನು ಕೊಡು. ಇದರಿಂದ ಭುವನತ್ರಯವನ್ನೇ ॥೨೩॥ ಕೊಟ್ಟಂತಾಗುತ್ತದೆ. ಹೇ ರಾಜಾ, ಇದರಲ್ಲಿ ವಿಚಾರಮಾಡಬೇಡ" ಎಂದು ನುಡಿಯಲು ಆ ಬಲಿಚಕ್ರವರ್ತಿಯು ನನ್ನ ಕೋರಿಕೆಯಂತೆ ಮೂರುಪಾದ ಭೂಮಿಯನ್ನು ಕೊಡಲು ಸಂಕಲ್ಪ ಮಾಡಿದನು. ॥೨೪॥ ಅವನು ಸಂಕಲ್ಪ ಮಾಡುವದೇ ತಡ ಆ ಕೂಡಲೇ ನಾನು ತ್ರಿವಿಕ್ರಮ ರೂಪದಿಂದ ಬೆಳೆದು ಭೂಲೋಕದಲ್ಲಿ ಎರಡು ಪಾದಗಳನ್ನು, ಭುವರ್ಲೋಕದಲ್ಲಿ ಎರಡು ಮೊಣಕಾಲುಗಳನ್ನು, ॥೨೫॥ ಸ್ವರ್ಗಲೋಕದಲ್ಲಿ ಕಟಿಯನ್ನು, ಮಹರ್ಲೋಕದಲ್ಲಿ

ಸ್ವರ್ಲೋಕೇ ತು ಕಟಿಂ ನ್ಯಸ್ಯ ಮಹರ್ಲೋಕೇ ತಥೋದರಮ್ ।
ಜನಲೋಕೇ ತು ಹೃದಯಂ ತಪೋಲೋಕೇ ಚ ಕಂಠಕಮ್ ॥೨೬॥

ಸತ್ಯಲೋಕೇ ಮುಖಂ ಸ್ಥಾಪ್ಯ ಉತ್ತಮಾಂಗಂ ತಥೋರ್ಧ್ವತಃ ।
ಚಂದ್ರಸೂರ್ಯಗ್ರಹಾಶ್ಚೈವ ಭಗಣೋ ಯೋಗಸಂಯುತಃ ॥೨೭॥

ಸೇಂದ್ರಾಶ್ಚೈವ ತದಾ ದೇವಾಃ ನಾಗಶೇಷಾದಯಃ ಪರೇ ।
ಅಸ್ತುವನ್ ವೇದಸಂಭೂತೈಃ ಸೂಕ್ತೈಶ್ಚ ವಿವಿಧೈಸ್ತು ಮಾಮ್ ॥೨೮॥

ಕರೇ ಗೃಹೀತ್ವಾ ತು ಬಲಿಮಬ್ರುವಂ ವಚನಂ ತದಾ ।
ಏಕೇನ ಪೂರಿತಾ ಪೃಥ್ವೀ ದ್ವಿತೀಯೇನ ತ್ರಿವಿಷ್ಟಪಮ್ ॥೨೯॥

ತೃತೀಯಸ್ಯ ತು ಪಾದಸ್ಯ ಸ್ಥಾನಂ ದೇಹಿ ಮಮಾನಘ ।
ಏವಮುಕ್ತೇ ಮಯಾ ಸೋಽಪಿ ಮಸ್ತಕಂ ದತ್ತವಾನ್ ಬಲಿಃ ॥೩೦॥

ತತೋ ವೈ ಮಸ್ತಕೇ ಹ್ಯೇಕಂ ಪದಂ ದತ್ತಂ ಮಯಾ ತದಾ ।
ಕ್ಷಿಪ್ತೋ ರಸಾತಲೇ ರಾಜನ್ ದಾನವೋ ಮಮ ಪೂಜಕಃ ॥೩೧॥

ವಿನಯಾವನತಂ ದೃಷ್ಟ್ವಾ ಪ್ರಸನ್ನೋಽಸ್ಮಿ ಜನಾರ್ದನಃ ।
ಬಲೇ ವಸಾಮಿ ಸತತಂ ಸನ್ನಿಧೌ ತವ ಮಾನದ ॥೩೨॥

---

ಉದರವನ್ನು, ಜನಲೋಕದಲ್ಲಿ ಹೃದಯವನ್ನು ತಪೋಲೋಕದಲ್ಲಿ ಕಂಠವನ್ನು, ॥೨೬॥ ಸತ್ಯಲೋಕದಲ್ಲಿ ಮುಖವನ್ನು ಇಟ್ಟು ಅದರಮೇಲೆ ಮುಖಮಾಡಿ ನಿಂತುಕೊಂಡೆನು. ಆಗ ಚಂದ್ರಸೂರ್ಯ ಗ್ರಹಗಳು, ನಕ್ಷತ್ರಗಣಗಳು, ॥೨೭॥ ಇಂದ್ರಾದಿ ದೇವತೆಗಳು ಶೇಷಾದಿ ನಾಗಗಣಗಳು, ವಿವಿಧ ವೇದಸೂಕ್ತಗಳಿಂದ ನನ್ನನ್ನು ಸ್ತುತಿಸಲು ಪ್ರಾರಂಭಿಸಿದರು.॥೨೮॥ ಆಗ ನಾನು ಬಲಿಚಕ್ರವರ್ತಿಯ ಕೈಹಿಡಿದು "ಅಯ್ಯಾ, ನನ್ನ ಒಂದು ಪಾದದಿಂದ ಪೃಥ್ವಿಯನ್ನು, ಇನ್ನೊಂದು ಪಾದದಿಂದ ಸ್ವರ್ಗಲೋಕವನ್ನು ವ್ಯಾಪಿಸಿದ್ದೇನೆ. ॥೨೯॥ ಸತ್ಯವಂತನಾದ ಬಲಿಯೇ, ಇನ್ನು ಮೂರನೆಯ ಪಾದವಿಡಲು ಸ್ಥಳವನ್ನು ಕೊಡು" ಎಂದು ಕೇಳಲಾಗಿ ಬಲಿಯು ತನ್ನ ಮಸ್ತಕವನ್ನೇ ನನ್ನೆದುರು ಹಿಡಿದನು. ॥೩೦॥ ಆಗ ನಾನು ಉಳಿದ ಇನ್ನೊಂದು ಪಾದವನ್ನು ಅವನ ತಲೆಯಮೇಲಿಟ್ಟು ನನ್ನ ಭಕ್ತನಾದ ಆ ದಾನವನನ್ನು ರಸಾತಲಕ್ಕೆ ಅಟ್ಟಿದೆನು. ॥೩೧॥ ಇಷ್ಟಾದರೂ ವಿನಯಾವನತನಾಗಿರುವ ಅವನನ್ನು ಕಂಡು ಅತ್ಯಂತ ಪ್ರಸನ್ನನಾದ ಜನಾರ್ದನನಾದ ನಾನು - "ಹೇ ಬಲೇ, ಮಾನ್ಯನೇ, ನಾನು ಸದಾ ನಿನ್ನ ಸನ್ನಿಧಿಯಲ್ಲಿರುವೆನು" ॥೩೨॥ ಎಂದು ವಿರೋಚನನ ಮಗನಾದ ಮಹಾಭಾಗನಾದ ಆ ಬಲಿಚಕ್ರವರ್ತಿಗೆ ಆಶ್ವಾಸನೆ ಹಾಗೂ ವರವನ್ನು ಕೊಟ್ಟೆನು. ಭಾದ್ರಪದ ಮಾಸ ಶುಕ್ಲಪಕ್ಷದ ಪರಿವರ್ತಿನಿ ಎಂದು ಖ್ಯಾತವಾದ

ಇತ್ಯುವಾಚ ಮಹಾಭಾಗಂ ಬಲಿಂ ವೈರೋಚನಂ ತದಾ ।
ನಭಸ್ಯ ಶುಕ್ಲಪಕ್ಷೇ ತು ಪರಿವರ್ತಿನಿ ವಾಸರೇ ॥೩೩॥

ಮಮೈಕಾ ತತ್ರ ಮೂರ್ತಿಶ್ಚ ಬಲಿಮಾಶ್ರಿತ್ಯ ತಿಷ್ಠತಿ ।
ದ್ವಿತೀಯಾ ಶೇಷಪೃಷ್ಠೇ ವೈ ಕ್ಷೀರಾಬ್ಧೌ ಸಾಗರೋತ್ತಮೇ ॥೩೪॥

ಸುಪ್ಯತೇ ಚ ಹೃಷೀಕೇಶೋ ಯಾವದ್ಯಾಯಾತಿ ಕಾರ್ತಿಕೀ ।
ತಾವದ್ಭವತಿ ತತ್ಪುಣ್ಯಂ ಸರ್ವಪುಣ್ಯೋತ್ತಮೋತ್ತಮಮ್ ॥೩೫॥

ಏತಸ್ಮಾತ್ಕಾರಣಾದ್ರಾಜನ್ ಕರ್ತವ್ಯೈಷಾ ಪ್ರಯತ್ನತಃ ।
ಏಕಾದಶೀ ಮಹಾಪುಣ್ಯಾ ಪವಿತ್ರಾ ಪಾಪಹಾರಿಣೀ ॥೩೬॥

ಅಸ್ಯಾಂ ಪ್ರಸುಪ್ತೋ ಭಗವಾನೇತ್ಯಂಗಪರಿವರ್ತನಮ್ ।
ಏತಸ್ಯಾಂ ಪೂಜಯೇದ್ದೇವಂ ತ್ರೈಲೋಕ್ಯಸ್ಯ ಪಿತಾಮಹಮ್ ॥೩೭॥

ದಧಿದಾನಂ ಪ್ರಕರ್ತವ್ಯಂ ರೌಪ್ಯತಂಡುಲಸಂಯುತಮ್ ।
ರಾತ್ರೌ ಜಾಗರಣಂ ಕೃತ್ವಾ ಮುಕ್ತೋ ಭವತಿ ಮಾನವಃ ॥೩೮॥

ಏವಂ ಯಃ ಕುರುತೇ ರಾಜನ್ ಏಕಾದಶ್ಯಾಂ ವ್ರತಂ ಶುಭಮ್ ।
ಸರ್ವಪಾಪಹರಂ ಚೈವ ಭುಕ್ತಿಮುಕ್ತಿಪ್ರದಾಯಕಮ್ ॥೩೯॥

---

ಏಕಾದಶಿಯ ದಿನ ॥೩೩॥ ನಾನು ಒಂದು ರೂಪದಿಂದ ಬಲಿಚಕ್ರವರ್ತಿಯಲ್ಲಿ ಸನ್ನಿಹಿತನಾಗಿರುವೆನು. ಇನ್ನೊಂದು ರೂಪದಿಂದ ಸಾಗರಗಳಲ್ಲಿ ಶ್ರೇಷ್ಠವಾದ ಕ್ಷೀರಸಮುದ್ರದಲ್ಲಿ ಶೇಷಶಾಯಿಯಾಗಿ ಮಲಗಿಕೊಂಡಿರುವೆನು. ॥೩೪॥ ಕಾರ್ತಿಕಶುದ್ಧ ಏಕಾದಶೀ (ಉತ್ಥಾನ) ಬರುವವರೆಗೆ ಶ್ರೀಹರಿ ಹೃಷೀಕೇಶನು ಮಲಗಿಕೊಂಡಿರುವನು. ಅಲ್ಲಿಯವರೆಗೆ ಮಾಡುವ ಪುಣ್ಯಕರ್ಮಗಳೆಲ್ಲವೂ ಅತ್ಯಧಿಕ ಪುಣ್ಯಪ್ರದವಾಗಿರುವವು. ॥೩೫॥ ಆದ್ದರಿಂದ ಹೇ ರಾಜಾ, ಪಾಪನಾಶಕವಾದ, ಮಹಾಪುಣ್ಯಪ್ರದವಾದ ಪವಿತ್ರವಾದ ಈ ಪರಿವರ್ತಿನೀ ಏಕಾದಶೀ ವ್ರತವನ್ನು ತಪ್ಪದೇ ಆಚರಿಸಬೇಕು. ॥೩೬॥ ಮಲಗಿಕೊಂಡಿರುವ ಭಗವಂತನು ಈ ದಿನ ಇನ್ನೊಂದು ಬದಿಗೆ ಮಗ್ಗುಲಾಗಿ ಮಲಗುವನು. ತ್ರಿಲೋಕಗಳ ಪಿತಾಮಹನಾದ ಶ್ರೀಹರಿಯನ್ನು ಆ ದಿನ ಭಕ್ತಿಯಿಂದ ಪೂಜಿಸಬೇಕು. ॥೩೭॥ ಈ ದಿನ ರಜತ, ಅಕ್ಕಿ ಇವುಗಳೊಡನೆ ದಧಿದಾನವನ್ನು ಮಾಡಬೇಕು. ರಾತ್ರಿ ಜಾಗರಣೆ ಮಾಡಿದರೆ ಮುಕ್ತಿಯಾಗುವದು. ॥೩೮॥ ಹೇ ಧರ್ಮರಾಜಾ, ಈ ರೀತಿ ಸರ್ವಪಾಪಪರಿಹಾರಕವಾದ ಮತ್ತು ಭುಕ್ತಿಮುಕ್ತಿಗಳನ್ನು ಕೊಡುವ ಈ ಏಕಾದಶೀವ್ರತವನ್ನು ಯಾವನು ಆಚರಿಸುವನೋ ॥೩೯॥

ಸ ದೇವಲೋಕಂ ಸಂಪ್ರಾಪ್ಯ ಭ್ರಾಜತೇ ಚಂದ್ರಮಾ ಇವ ।
ಶ್ರುಣುಯಾಚ್ಚೈವ ಯೋ ಮರ್ತ್ಯಃ ಕಥಾಂ ಪಾಪಹರಾಂ ಪರಾಮ್ ॥೪೦॥

ಅಶ್ವಮೇಧಸಹಸ್ರಸ್ಯ ಫಲಂ ಪ್ರಾಪ್ನೋತಿ ಮಾನವಃ ॥೪೧॥

॥ ಇತಿ ಶ್ರೀಬ್ರಹ್ಮವೈವರ್ತಪುರಾಣೇ ಭಾದ್ರಪದಶುಕ್ಲೇ ಪರಿವರ್ತಿನ್ಯೇಕಾದಶೀ ವ್ರತಮಾಹಾತ್ಮ್ಯಂ ಸಂಪೂರ್ಣಮ್ ॥

---

ಅವನು ದೇವಲೋಕವನ್ನು ಹೊಂದಿ ಅಲ್ಲಿ ಚಂದ್ರನಂತೆ ವಿರಾಜಿಸುವನು. ಈ ಏಕಾದಶಿಯ ಶ್ರೇಷ್ಠವಾದ ಹಾಗೂ ಪಾಪಪರಿಹಾರಕವಾದ ಮಹಾತ್ಮೆಯನ್ನು ಯಾವನು ಭಕ್ತಿಯಿಂದ ಕೇಳುವನೋ ಅವನು ಒಂದು ಸಹಸ್ರ ಅಶ್ವಮೇಧಯಾಗಗಳನ್ನು ಮಾಡಿದಷ್ಟು ಪುಣ್ಯವನ್ನು ಪಡೆಯುವನು. ॥೪೦॥ ॥೪೧॥

॥ ಇಲ್ಲಿಗೆ ಶ್ರೀಬ್ರಹ್ಮವೈವರ್ತಪುರಾಣದಲ್ಲಿಯ ಭಾದ್ರಪದಶುಕ್ಲಪಕ್ಷದ "ಪರಿವರ್ತಿನೀ" ಏಕಾದಶೀ ಮಹಾತ್ಮೆಯು ಸಮಾಪ್ತವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

# ಆಶ್ವಿನಕೃಷ್ಣೈಕಾದಶೀ ವ್ರತಕಥಾ

**ಯುಧಿಷ್ಠಿರ ಉವಾಚ**

**ಕಥಯಸ್ವ ಪ್ರಸಾದೇನ ಮಮಾಗ್ರೇ ಮಧುಸೂದನ ।**
**ಆಶ್ವಿನೇ ಕೃಷ್ಣಪಕ್ಷೇ ತು ಕಿಂ ನಾಮೈಕಾದಶೀ ಭವೇತ್ ॥೧॥**

**ಶ್ರೀಕೃಷ್ಣ ಉವಾಚ**

**ಆಶ್ವಿನಸ್ಯಾಸಿತೇ ಪಕ್ಷೇ ಇಂದಿರಾ ನಾಮ ನಾಮತಃ ।**
**ತಸ್ಯಾಃ ವ್ರತಪ್ರಭಾವೇಣ ಮಹಾಪಾಪಂ ಪ್ರಣಶ್ಯತಿ ॥೨॥**

**ಅಧೋಯೋನಿಗತಾನಾಂ ಚ ಪಿತೄಣಾಂ ಗತಿದಾಯಿನೀಮ್ ।**
**ಶೃಣುಷ್ವಾವಹಿತೋ ರಾಜನ್ ಕಥಾಂ ಪಾಪಹರಾಂ ಪರಾಮ್ ॥೩॥**

**ಯಸ್ಯಾಃ ಶ್ರವಣಮಾತ್ರೇಣ ವಾಜಪೇಯಫಲಂ ಲಭೇತ್ ।**
**ಪುರಾ ಕೃತಯುಗೇ ರಾಜಾ ಬಭೂವ ರಿಪುಸೂದನಃ ॥೪॥**

**ಇಂದ್ರಸೇನ ಇತಿ ಖ್ಯಾತಃ ಪುರೀಂ ಮಾಹಿಷ್ಮತೀಂ ಪ್ರತಿ ।**
**ಸ ರಾಜ್ಯಂ ಪಾಲಯಾಮಾಸ ಧರ್ಮೇಣ ಯಶಸಾನ್ವಿತಃ ॥೫॥**

**ಪುತ್ರಪೌತ್ರಸಮಾಯುಕ್ತೋ ಧನಧಾನ್ಯಸಮನ್ವಿತಃ ।**
**ಮಾಹಿಷ್ಮತ್ಯಧಿಪೋ ರಾಜಾ ವಿಷ್ಣುಭಕ್ತಿಪರಾಯಣಃ ॥೬॥**

---

"ಹೇ ಮಧುಸೂದನಾ, ಶ್ರೀಕೃಷ್ಣಪರಮಾತ್ಮ, ಇನ್ನು ಆಶ್ವಿನ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು? ಅದರ ಮಹಾತ್ಮೆ ಏನು? ಇದೆಲ್ಲವನ್ನು ತಿಳಿಸಿ ಅನುಗ್ರಹಿಸು" ಎಂದು ಯುಧಿಷ್ಠಿರನು ಪ್ರಾರ್ಥಿಸಲು ॥೧॥ ಶ್ರೀಕೃಷ್ಣನು ಹೇಳುತ್ತಾನೆ - ಹೇ ಧರ್ಮರಾಜ, ಆಶ್ವಿನಕೃಷ್ಣಪಕ್ಷದಲ್ಲಿಯ ಏಕಾದಶಿಯನ್ನು "ಇಂದಿರಾ" ಎಂದು ಕರೆಯುವರು. ಈ ಏಕಾದಶೀ ವ್ರತದ ಪ್ರಭಾವದಿಂದ ಮಹಾಪಾಪಗಳು ನಾಶವಾಗುತ್ತವೆ. ॥೨॥ ನೀಚಯೋನಿಯಲ್ಲಿ ಜನಿಸಿದ ಪಿತೃಗಳಿಗೆ ಸದ್ಗತಿಯನ್ನು ಕೊಡುವ ಈ ಏಕಾದಶಿಯ ಪಾಪಹರವಾದ, ಶ್ರೇಷ್ಠವಾದ ಮಹಾತ್ಮೆಯನ್ನು ಕೇಳುವವನಾಗು. ॥೩॥ ಇದರ ಶ್ರವಣ ಮಾತ್ರದಿಂದ ವಾಜಪೇಯ ಫಲವು ಪ್ರಾಪ್ತವಾಗುವದು. ಹಿಂದಕ್ಕೆ ಕೃತಯುಗದಲ್ಲಿ ಶತ್ರುಮರ್ದನನಾದ ॥೪॥ ಇಂದ್ರಸೇನ ಎಂಬ ಒಬ್ಬ ರಾಜನಿದ್ದನು. ಕೀರ್ತಿವಂತನಾದ ಅವನು ಮಾಹಿಷ್ಮತೀ ಎಂಬ ಪುರದಲ್ಲಿದ್ದು ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಲಿದ್ದನು. ॥೫॥ ಪುತ್ರಪೌತ್ರರಿಂದ ಹಾಗೂ ಧನಧಾನ್ಯ ಸಂಪತ್ತಿನಿಂದ ಕೂಡಿದ ಮಾಹಿಷ್ಮತಿಯ ರಾಜನು ವಿಷ್ಣು ಭಕ್ತನಾಗಿದ್ದು ॥೬॥ ಗೋವಿಂದನ ಮುಕ್ತಿಪ್ರದವಾದ ನಾಮಗಳನ್ನು ಜಪಿಸುತ್ತ ಸದಾ ಅಧ್ಯಾತ್ಮಚಿಂತನೆಯಲ್ಲಿಯೇ

ಜಪನ್ ಗೋವಿಂದನಾಮಾನಿ ಮುಕ್ತಿದಾನಿ ನರಾಧಿಪಃ ।
ಕಾಲಂ ನಯತ ವಿಧಿವದಧ್ಯಾತ್ಮಸ್ಯ ವಿಚಿಂತಕಃ ॥೭॥

ಏಕಸ್ಮಿನ್ ದಿವಸೇ ರಾಜ್ಞಿ ಸುಖಾಸೀನೇ ಸದೋಗತೇ ।
ಅವತೀರ್ಯಾಗಮದ್ಧೀಮಾನಂಬರಾನ್ನಾರದೋ ಮುನಿಃ ॥೮॥

ತಮಾಗತಮಭಿಪ್ರೇಕ್ಷ್ಯ ಪ್ರತ್ಯುತ್ಥಾಯ ಕೃತಾಂಜಲಿಃ ।
ಪೂಜಯಿತ್ವಾಽರ್ಘ್ಯವಿಧಿನಾ ಚಾಽಽಸನೇ ಸನ್ನ್ಯವೇಶಯತ್ ॥೯॥

ಸುಖೋಪವಿಷ್ಟಃ ಸ ಮುನಿಃ ಪ್ರತ್ಯುವಾಚ ನೃಪೋತ್ತಮಮ್ ।
ಕುಶಲಂ ತವ ರಾಜೇಂದ್ರ ಸಪ್ತಸ್ವಂಗೇಷು ವರ್ತತೇ ॥೧೦॥

ಧರ್ಮೇ ಮತಿರ್ವರ್ತತೇ ತೇ ವಿಷ್ಣುಭಕ್ತಿರತಿಸ್ತಥಾ ।
ಇತಿ ವಾಕ್ಯಂ ತು ದೇವರ್ಷೇಃ ಶ್ರುತ್ವಾ ರಾಜಾ ತಮಬ್ರವೀತ್ ॥೧೧॥

ರಾಜೋವಾಚ

ತ್ವತ್ಪ್ರಸಾದಾನ್ಮುನಿಶ್ರೇಷ್ಠ ಸರ್ವತ್ರ ಕುಶಲಂ ಮಮ ।
ಅದ್ಯ ಕ್ರತುಕ್ರಿಯಾಃ ಸರ್ವಾಃ ಸಫಲಾಸ್ತವ ದರ್ಶನಾತ್ ॥೧೨॥

ಪ್ರಸಾದಂ ಕುರು ವಿಪ್ರರ್ಷೇ ಬ್ರೂಹ್ಯಾಗಮನಕಾರಣಮ್ ।
ಇತಿ ರಾಜ್ಞೋ ವಚಃ ಶ್ರುತ್ವಾ ದೇವರ್ಷಿರ್ವಾಕ್ಯಮಬ್ರವೀತ್ ॥೧೩॥

---

ಕಾಲಕಳೆಯುತ್ತಲಿದ್ದನು. ॥೭॥ ಒಂದು ದಿನ ರಾಜನು ರಾಜಸಭೆಯಲ್ಲಿ ಸುಖಾಸೀನನಾಗಿ ಕುಳಿತಿರಲು ಆಕಾಶಮಾರ್ಗದಿಂದಿಳಿದು ನಾರದಮುನಿಯು ಅಲ್ಲಿಗೆ ದಯಮಾಡಿಸಿದರು. ॥೮॥ ನಾರದರು ಬಂದಿರುವದನ್ನು ಕಂಡು ರಾಜನು ಚಟ್ಟನೇ ಮೇಲೆದ್ದು ಕೈಜೋಡಿಸಿಕೊಂಡು ನಮಸ್ಕರಿಸಿದನು. ಅರ್ಘ್ಯಪಾದ್ಯಾದಿಗಳಿಂದ ಸ್ವಾಗತಿಸಿ ಉಚ್ಚಾಸನದಲ್ಲಿ ಅವರನ್ನು ಕುಳ್ಳಿರಿಸಿದನು. ॥೯॥ ಸುಖಾಸೀನರಾದ ನಾರದರು ರಾಜನನ್ನು ಕುರಿತು - ಹೇ ರಾಜ, ನಿನ್ನ ಸಪ್ತಾಂಗಗಳೂ ಕ್ಷೇಮದಿಂದ ಇರುವವಷ್ಟೇ? ಎಂದು ಕುಶಲಪ್ರಶ್ನೆ ಮಾಡಿ, "ನಿನ್ನ ಬುದ್ಧಿಯು ಧರ್ಮದಲ್ಲಿ ಆಸಕ್ತವಾಗಿದೆ ಮತ್ತು ನೀನು ವಿಷ್ಣುವಿನಲ್ಲಿ ಭಕ್ತಿಯುಳ್ಳವನಾಗಿರುವಿ" ಎಂದು ನುಡಿಯಲು ದೇವರ್ಷಿಗಳನ್ನು ಕುರಿತು ರಾಜನು ಹೇಳಿದನು. ॥೧೦॥ ॥೧೧॥ "ಹೇ ಮುನಿಶ್ರೇಷ್ಠರಾದ ನಾರದರೇ, ತಮ್ಮ ಅನುಗ್ರಹದಿಂದ ನನಗ ಎಲ್ಲೆಡೆ ಕ್ಷೇಮವಿದೆ. ತಮ್ಮ ದರ್ಶನದಿಂದ ಇಂದು ನಮ್ಮ ಎಲ್ಲ ಯಜ್ಞಾನುಷ್ಠಾನಗಳು ಸಫಲವಾದವು ॥೧೨॥ ಭೋ ದೇವರ್ಷಿಗಳೇ, ತಾವು ಇಲ್ಲಿ ದಯಮಾಡಿಸಿರುವ ಕಾರಣವೇನೆಂಬುವದನ್ನು ತಿಳಿಸಿ ಅನುಗ್ರಹಿಸಬೇಕು". ರಾಜನು ಈ ರೀತಿ ನುಡಿಯಲು ನಾರದರು ಹೇಳಿದರು. ॥೧೩॥ ಹೇ

ನಾರದ ಉವಾಚ

ಶ್ರೂಯತಾಂ ರಾಜಶಾರ್ದೂಲ ಮದ್ವಚೋ ವಿಸ್ಮಯಪ್ರದಮ್ ।
ಬ್ರಹ್ಮಲೋಕಾದಹಂ ಪ್ರಾಪ್ತೋ ಯಮಲೋಕಂ ನೃಪೋತ್ತಮ ॥೧೪॥

ಶಮನೇನಾರ್ಚಿತೋ ಭಕ್ತ್ಯಾ ಉಪವಿಷ್ಟೋ ವರಾಸನೇ ।
ಧರ್ಮಶೀಲಃ ಸತ್ಯವಾಂಸ್ತು ಭಾಸ್ಕರಿಂ ಸಮುಪಾಸತೇ ॥೧೫॥

ಬಹುಪುಣ್ಯಪ್ರಕರ್ತಾ ಚ ವ್ರತವೈಕಲ್ಪದೋಷತಃ ।
ಸಭಾಯಾಂ ಶ್ರಾದ್ಧದೇವಸ್ಯ ಮಯಾ ದೃಷ್ಟಃ ಪಿತಾ ತವ ॥೧೬॥

ಕಥಿತಸ್ತೇನ ಸಂದೇಶಸ್ತಂ ನಿಬೋಧ ಜನೇಶ್ವರ ।
ಇಂದ್ರಸೇನ ಇತಿ ಖ್ಯಾತೋ ರಾಜಾ ಮಾಹಿಷ್ಮತೀಪ್ರಭುಃ ॥೧೭॥

ತಸ್ಯಾಗ್ರೇ ಕಥಯ ಬ್ರಹ್ಮನ್ ಸ್ಥಿತಂ ಮಾಂ ಯಮಸನ್ನಿಧೌ ।
ಕೇನಾಪಿ ಚಾಂತರಾಯೇಣ ಪೂರ್ವಜನ್ಮೋದ್ಭವೇನ ವೈ ॥೧೮॥

ಸ್ವರ್ಗಂ ಪ್ರೇಷಯ ಮಾಂ ಪುತ್ರ ಇಂದಿರಾವ್ರತದಾನತಃ ।
ಇತ್ಯುಕ್ತೋಽಹಂ ಸಮಾಯಾತಃ ಸಮೀಪಂ ತವ ಪಾರ್ಥಿವ ॥೧೯॥

---

ರಾಜಾ, ನಿಮಗೆಲ್ಲ ಆಶ್ಚರ್ಯವನ್ನುಂಟು ಮಾಡುವ ಒಂದು ಸುದ್ದಿಯನ್ನು ಹೇಳುತ್ತೇನೆ ಕೇಳು. ಹೇ ರಾಜನ್, ನಾನು ಬ್ರಹ್ಮಲೋಕದಿಂದ ಯಮಲೋಕಕ್ಕೆ ಹೋಗಿದ್ದೆನು. ॥೧೪॥ ಆಗ ಅಲ್ಲಿ ಯಮಧರ್ಮನಿಂದ ಭಕ್ತಿಯಿಂದ ಸತ್ಕರಿಸಲ್ಪಟ್ಟವನಾಗಿ ಉಚ್ಚಾಸನದಲ್ಲಿ ಕುಳಿತುಕೊಂಡೆನು. ಅಲ್ಲಿ ವಿಶ್ರಮಿಸುತ್ತಿರುವಾಗ ಯಮರಾಯನ ಸಭೆಯಲ್ಲಿ ನಿನ್ನ ತಂದೆಯನ್ನು ಕಂಡೆನು. ಧರ್ಮಶೀಲನಾದ, ಸತ್ಯವಂತನಾದ, ಬಹುಪುಣ್ಯಕರ್ಮಗಳನ್ನು ಮಾಡಿದ್ದ ನಿನ್ನ ತಂದೆಯು ಒಂದು ವ್ರತದ ಅನುಷ್ಠಾನದಲ್ಲುಂಟಾದ ವೈಕಲ್ಯದೋಷದಿಂದ ಯಮನಸಭೆಯಲ್ಲಿದ್ದು ಸೂರ್ಯಪುತ್ರನಾದ ಯಮನನ್ನು ಆರಾಧಿಸುತ್ತಿದ್ದಾನೆ. ॥೧೫॥ ॥೧೬॥ ಹೇ ರಾಜಾ, ನಿನ್ನ ತಂದೆಯು ನಿನಗಾಗಿ ಕಳಿಸಿದ ಒಂದು ಸಂದೇಶವನ್ನು ತಿಳಿಸುತ್ತಿದ್ದೇನೆ ಕೇಳು - ಇಂದ್ರಸೇನನೆಂಬುವನು ಮಾಹಿಷ್ಮತಿ ರಾಜನಾಗಿದ್ದಾನೆ. ॥೧೭॥ ಹೇ ಬ್ರಹ್ಮಪುತ್ರ ನಾರದರೇ, ಪೂರ್ವಜನ್ಮದಲ್ಲಿ ಘಟಿಸಿದ ಯಾವುದೋ ಒಂದು ವಿಘ್ನದಿಂದ ನಾನು ಈಗ ಯಮ ಸದನದಲ್ಲಿರುವೆನು. ಈ ವಿಷಯವನ್ನು ನನ್ನ ಮಗನಿಗೆ ತಿಳಿಸಿರಿ ॥೧೮॥ ಹಾಗೂ ಇಂದಿರಾವ್ರತದ ಪುಣ್ಯವನ್ನು ಕೊಟ್ಟು ನನ್ನನ್ನು ಸ್ವರ್ಗಕ್ಕೆ ಕಳಿಸುವಂತೆ ತಿಳಿಸಿರಿ. ಹೇ ರಾಜಾ, ಈ ರೀತಿ ನಿಮ್ಮ ತಂದೆಯು ಹೇಳಿದ್ದರಿಂದ ನಾನು ನಿನ್ನಲ್ಲಿ ಬಂದಿದ್ದೇನೆ. ॥೧೯॥ ನಿನ್ನ ತಂದೆಗೆ

ಪಿತುಃ ಸ್ವರ್ಗತಯೇ ರಾಜನ್ ಇಂದಿರಾವ್ರತಮಾಚರ ।
ತೇನ ವ್ರತಪ್ರಭಾವೇಣ ಸ್ವರ್ಗಂ ಯಾಸ್ಯತಿ ತೇ ಪಿತಾ ॥೨೦॥

ರಾಜೋವಾಚ

ಕಥಯಸ್ವ ಪ್ರಸಾದೇನ ಭಗವನ್ನಿಂದಿರಾವ್ರತಮ್ ।
ವಿಧಿನಾ ಕೇನ ಕರ್ತವ್ಯಂ ಕಸ್ಮಿನ್ ಪಕ್ಷೇ ತಿಥೌ ತಥಾ ॥೨೧॥

ನಾರದ ಉವಾಚ

ಶೃಣು ರಾಜನ್ನಹಂ ವಚ್ಮಿ ವ್ರತಸ್ಯಾಸ್ಯ ವಿಧಿಂ ಶುಭಾಮ್ ।
ಆಶ್ವಿನಸ್ಯಾಸಿತೇ ಪಕ್ಷೇ ದಶಮೀದಿವಸೇ ಶುಭೇ ॥೨೨॥

ಪ್ರಾತಃಸ್ನಾನಂ ಪ್ರಕುರ್ವೀತ ಶ್ರದ್ಧಾಯುಕ್ತೇನ ಚೇತಸಾ ।
ತತೋ ಮಧ್ಯಾಹ್ನಸಮಯೇ ಸ್ನಾನಂ ಕೃತ್ವಾ ಬಹಿರ್ಜಲೇ ॥೨೩॥

ಪಿತೃಣಾಂ ಪ್ರೀತಯೇ ಶ್ರಾದ್ಧಂ ಕುರ್ಯಾಚ್ಛ್ರದ್ಧಾಸಮನ್ವಿತಃ ।
ಏಕಭುಕ್ತಂ ತತಃ ಕೃತ್ವಾ ರಾತ್ರೌ ಭೂಮೌ ಶಯೀತ ಚ ॥೨೪॥

ಪ್ರಭಾತೇ ವಿಮಲೇ ಜಾತೇ ಪ್ರಾಪ್ತೇ ಚೈಕಾದಶೀದಿನೇ ।
ಮುಖಪ್ರಕ್ಷಾಲನಂ ಕುರ್ಯಾದ್ದಂತಧಾವನಪೂರ್ವಕಮ್ ॥೨೫॥

---

ಸ್ವರ್ಗಪ್ರಾಪ್ತಿಯಾಗಲು ನೀನು ಇಂದಿರಾವ್ರತವನ್ನಾಚರಿಸು. ಆ ವ್ರತದ ಪ್ರಭಾವದಿಂದ ನಿನ್ನ ತಂದೆಯು ಸ್ವರ್ಗಕ್ಕೆ ಹೋಗುವನು. ॥೨೦॥ ಇದೆಲ್ಲವನ್ನು ಕೇಳಿ ಇಂದ್ರಸೇನರಾಜನು ನಾರದರನ್ನು ಕುರಿತು - "ಪೂಜ್ಯರೇ, ಇಂದಿರಾವ್ರತದ ಬಗ್ಗೆ ತಿಳಿಸಿರಿ, ಯಾವ ಪಕ್ಷದಲ್ಲಿ ಮತ್ತು ತಿಥಿಯಲ್ಲಿ ಈ ವ್ರತನ್ನಾಚರಿಸಬೇಕು? ವ್ರತದ ವಿಧಾನವೇನು? ಇದೆಲ್ಲವನ್ನು ತಿಳಿಸಿ ಅನುಗ್ರಹಿಸಿರಿ" ಎಂದು ಪ್ರಾರ್ಥಿಸಲು ॥೨೧॥ ನಾರದರು ಹೇಳಿದರು - ಹೇ ರಾಜನ್, ಕೇಳು. ಈ ವ್ರತದ ಶುಭಕರವಾದ ವಿಧಾನವನ್ನು ತಿಳಿಸುವೆನು. ಆಶ್ವಿನಮಾಸದ ಕೃಷ್ಣಪಕ್ಷದ ದಶಮೀ ತಿಥಿಯ ದಿನ ॥೨೨॥ ಶ್ರದ್ಧಾಯುಕ್ತನಾಗಿ ಪ್ರಾತಃಸ್ನಾನವನ್ನು ಮಾಡಬೇಕು. ಅನಂತರ ಮಧ್ಯಾಹ್ನದಲ್ಲಿ ಬಹಿರ್ಜಲದಲ್ಲಿ ಮತ್ತೊಮ್ಮೆ ಸ್ನಾನಮಾಡಿ ॥೨೩॥ ಪಿತೃಗಳ ಪ್ರೀತ್ಯರ್ಥವಾಗಿ ಶ್ರಾದ್ಧಕರ್ಮವನ್ನು ಶ್ರದ್ಧೆಯಿಂದ ಮಾಡಬೇಕು. ಶ್ರಾದ್ಧಾನಂತರ ಬ್ರಾಹ್ಮಣಭೋಜನವಾದ ಮೇಲೆ ತಾನು ಒಮ್ಮೆ ಮಾತ್ರ ಭೋಜನ ಮಾಡಿ ರಾತ್ರಿಯಲ್ಲಿ ನೆಲದಮೇಲೆ ಮಲಗಿಕೊಳ್ಳಬೇಕು. ॥೨೪॥ ಮರುದಿನ ಏಕಾದಶೀ ಪ್ರಭಾತ ಸಮಯದಲ್ಲಿ ದಂತಧಾವನ ಮುಖಪ್ರಕ್ಷಾಲನಾದಿಗಳನ್ನು ಮಾಡಿಕೊಳ್ಳಬೇಕು. ॥೨೫॥ ಭಕ್ತಿಭಾವದಿಂದ ಯುಕ್ತನಾಗಿ ಉಪವಾಸದ ನಿಯಮವನ್ನು ಧಾರಣಮಾಡಬೇಕು - ಹೇ ಪುಂಡರೀಕಾಕ್ಷ, ಇವತ್ತಿನ ದಿನ ಸರ್ವಭೋಗಗಳನ್ನು ತ್ಯಜಿಸಿ

ಉಪವಾಸಸ್ಯ ನಿಯಮಂ ಗೃಹ್ಣೀಯಾದ್ಭಕ್ತಿಭಾವತಃ ।
ಅದ್ಯ ಸ್ಥಿತ್ವಾ ನಿರಾಹಾರಃ ಸರ್ವಭೋಗವಿವರ್ಜಿತಃ ॥೨೬॥

ಶ್ವೋ ಭೋಕ್ಷ್ಯೇ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ।
ಇತ್ಯೇವಂ ನಿಯಮಂ ಕೃತ್ವಾ ಮಧ್ಯಾಹ್ನಸಮಯೇ ತಥಾ ॥೨೭॥

ಶಾಲಗ್ರಾಮಶಿಲಾಗ್ರೇ ತು ಶ್ರಾದ್ಧಂ ಕೃತ್ವಾ ಯಥಾವಿಧಿ ।
ಭೋಜಯಿತ್ವಾ ದ್ವಿಜಾನ್ ಶುದ್ಧಾನ್ ದಕ್ಷಿಣಾಭಿಃ ಸುಪೂಜಿತಾನ್ ॥೨೮॥

ಪಿತೃಶೇಷಂ ಸಮಾಘ್ರಾಯ ಗವೇ ದದ್ಯಾದ್ವಿಚಕ್ಷಣಃ ।
ಪೂಜಯಿತ್ವಾ ಹೃಷೀಕೇಶಂ ಧೂಪಗಂಧಾದಿಭಿಸ್ತಥಾ ॥೨೯॥

ರಾತ್ರೌ ಜಾಗರಣಂ ಕುರ್ಯಾತ್ ಕೇಶವಸ್ಯ ಸಮೀಪತಃ ।
ತತಃ ಪ್ರಭಾತ ಸಮಯೇ ಸಂಪ್ರಾಪ್ತೇ ದ್ವಾದಶೀದಿನೇ ॥೩೦॥

ಅರ್ಚಯಿತ್ವಾ ಹರಿಂ ಭಕ್ತ್ಯಾ ಭೋಜಯಿತ್ವಾ ದ್ವಿಜಾನಥ ।
ಬಂಧುದೌಹಿತ್ರಪುತ್ರಾದ್ಯೈಃ ಸ್ವಯಂ ಭುಂಜೀತ ವಾಗ್ಯತಃ ॥೩೧॥

ಅನೇನ ವಿಧಿನಾ ರಾಜನ್ ಕುರು ವ್ರತಮತಂದ್ರಿತಃ ।
ವಿಷ್ಣುಲೋಕಂ ಪ್ರಯಾಸ್ಯಂತಿ ಪಿತರಸ್ತವ ಭೂಪತೇ ॥೩೨॥

---

ನಿರಾಹಾರನಾಗಿದ್ದು ॥೨೬॥ ನಾಳಿನ ದಿನ ಪಾರಣೆ ಮಾಡುವೆನು. ಹೇ ಶ್ರೀಹರೇ, ಅಚ್ಯುತ ನೀನು ನನ್ನ ರಕ್ಷಕನಾಗು. ಈ ಪ್ರಕಾರ ಸಂಕಲ್ಪಪೂರ್ವಕ ವ್ರತಧಾರಣ ಮಾಡಿ, ಮಧ್ಯಾಹ್ನ ಸಮಯದಲ್ಲಿ ಧೂಪಗಂಧಾದಿಗಳಿಂದ ಹೃಷೀಕೇಶನ ಪೂಜೆಯನ್ನು ಮಾಡಬೇಕು. ರಾತ್ರಿಯಲ್ಲಿ ಕೇಶವನ ಸನ್ನಿಧಾನದಲ್ಲಿ ಜಾಗರಣೆಯನ್ನು ಮಾಡಿ ಮರುದಿನ ದ್ವಾದಶೀ ಪ್ರಭಾತಸಮಯದಲ್ಲಿ ಶ್ರೀಹರಿಯನ್ನು ಪೂಜಿಸಿ ನಂತರ ಪಿತೃಗಳನ್ನುದ್ದೇಶಿಸಿ ಶ್ರಾದ್ಧವನ್ನು ಮಾಡಬೇಕು. ಅನಂತರ ಶ್ರೇಷ್ಠರಾದ ಬ್ರಾಹ್ಮಣರನ್ನು ಪೂಜಿಸಿ ದಕ್ಷಿಣಾದಿಗಳನ್ನು ಕೊಟ್ಟು ಭೋಜನಮಾಡಿಸಬೇಕು. ಬ್ರಾಹ್ಮಣಭೋಜನಾನಂತರ ಬಂಧುಗಳು, ಹೆಣ್ಣುಮಕ್ಕಳ ಮಕ್ಕಳು ಇವರೇ ಮೊದಲಾದವರೊಂದಿಗೆ ಮೌನದಿಂದ ಭೋಜನವನ್ನು ಮಾಡಬೇಕು. ಆಗ ಪಿತೃಶೇಷವನ್ನು ಸ್ವೀಕರಿಸಬೇಕು. ॥೨೭-೩೧॥ ಹೇ ರಾಜನ್, ಈ ಕ್ರಮದಿಂದ ಬೇಸರವಿಲ್ಲದೇ ನೀನು ಆ ವ್ರತವನ್ನಾಚರಿಸು. ಇದರಿಂದ ನಿಶ್ಚಿತವಾಗಿ ನಿನ್ನ ಪಿತೃಗಳು ವಿಷ್ಣುಲೋಕಕ್ಕೆ ಹೋಗುವರು. ॥೩೨॥ ಇಷ್ಟು ಹೇಳಿ ನಾರದರು ಅಲ್ಲಿಯೇ ಅಂತರ್ಧಾನ ಹೊಂದಿ ಮುಂದೆ ಪ್ರಯಾಣ ಬೆಳೆಸಿದರು. ನಾರದಮುನಿಗಳ ಉಪದೇಶದಂತೆಯೇ ರಾಜನು ಶ್ರೇಷ್ಠವಾದ ಇಂದಿರಾ

ಇತ್ಯುಕ್ತ್ವಾ ನೃಪತಿಂ ರಾಜನ್ ಮುನಿರಂತರಧೀಯತ ।
ಯಥೋಕ್ತವಿಧಿನಾ ರಾಜಾ ಚಕಾರ ವ್ರತಮುತ್ತಮಮ್ ||೩೩||

ಅಂತಃಪುರೇಣ ಸಹಿತಃ ಪುತ್ರಭೃತ್ಯಸಮನ್ವಿತಃ ।
ಕೃತೇ ವ್ರತೇ ತು ಕೌಂತೇಯ ಪುಷ್ಪವೃಷ್ಟಿರಭೂದ್ದಿವಃ ||೩೪||

ತತ್ಪಿತಾ ಗರುಡಾರೂಢೋ ಜಗಾಮ ಹರಿಮಂದಿರಮ್ ।
ಇಂದ್ರಸೇನೋಽಪಿ ರಾಜರ್ಷಿಃ ಕೃತ್ವಾ ರಾಜ್ಯಮಕಂಟಕಮ್ ||೩೫||

ರಾಜ್ಯೇ ನಿವೇಶ್ಯ ತನಯಂ ಜಗಾಮ ತ್ರಿದಿವಂ ಸ್ವಯಮ್ ।
ಇಂದಿರಾವ್ರತಮಾಹಾತ್ಮ್ಯಂ ತವಾಗ್ರೇ ಕಥಿತಂ ಮಯಾ ||೩೬||

ಪಠನಾಚ್ಛ್ರವಣಾಚ್ಚಾಸ್ಯ ಸರ್ವಪಾಪೈಃ ಪ್ರಮುಚ್ಯತೇ ।
ಭುಕ್ತ್ವೇಹ ನಿಖಿಲಾನ್ ಭೋಗಾನ್ ವಿಷ್ಣುಲೋಕೇ ವಸೇಚ್ಚಿರಮ್ ||೩೭||

|| ಇತಿ ಶ್ರೀಬ್ರಹ್ಮವೈವರ್ತಪುರಾಣೇ ಆಶ್ವಿನಕೃಷ್ಣೇಂದಿರೈಕಾದಶೀ
ವ್ರತಮಾಹಾತ್ಮ್ಯಂ ಸಂಪೂರ್ಣಮ್ ||

---

ವ್ರತವನ್ನಾಚರಿಸಿದನು. ||೩೩|| ಅಂತಃಪುರದ ಸ್ತ್ರೀಯರು, ಪುತ್ರರು, ಭೃತ್ಯರಿಂದೊಡಗೂಡಿ ಈ ವ್ರತವನ್ನು ವಿಧಿಪೂರ್ವಕ ಆಚರಿಸಿದಾಕ್ಷಣವೇ ಆಕಾಶದಿಂದ ಪುಷ್ಪವೃಷ್ಟಿಯಾಯಿತು. ||೩೪|| ರಾಜನ ತಂದೆಯು ಗರುಢಾರೂಢನಾಗಿ ಹರಿಮಂದಿರಕ್ಕೆ ಹೋದನು. ಮುಂದೆ ಇಂದ್ರಸೇನರಾಜನೂ ಕೂಡ ತನ್ನ ರಾಜ್ಯವನ್ನು ನಿಷ್ಕಂಟಕವನ್ನಾಗಿ ಮಾಡಿ ||೩೫|| ರಾಜ್ಯದಲ್ಲಿ ತನ್ನ ಮಗನನ್ನು ಪಟ್ಟಾಭಿಷಿಕ್ತನನ್ನಾಗಿ ಮಾಡಿ ತಾನೂ ಕೂಡ ಸ್ವರ್ಗಲೋಕಕ್ಕೆ ಪ್ರಯಾಣ ಬೆಳೆಸಿದನು. ಅಯ್ಯಾ ಯುಧಿಷ್ಠಿರಾ, ಇಂದಿರಾವ್ರತದ ಮಹಾತ್ಮೆಯನ್ನು ನಿನ್ನೆದುರು ತಿಳಿಸಿದ್ದೇನೆ. ||೩೬|| ಈ ಮಹಾತ್ಮೆಯ ಪಠನ ಹಾಗೂ ಶ್ರವಣಗಳಿಂದ ಸರ್ವಪಾಪಗಳೂ ದೂರವಾಗುತ್ತವೆ ಮತ್ತು ಪಠಣ ಶ್ರವಣಗಳನ್ನು ಮಾಡುವವನು ಇಹಲೋಕದಲ್ಲಿ ಸಕಲಭೋಗಗಳನ್ನು ಭೋಗಿಸಿ ಕೊನೆಗೆ ವಿಷ್ಣುಲೋಕದಲ್ಲಿ ಬಹುಕಾಲ ವಾಸಿಸುವನು. ||೩೭||

|| ಇಲ್ಲಿಗೆ ಶ್ರೀಬ್ರಹ್ಮವೈವರ್ತಪುರಾಣದಲ್ಲಿಯ ಆಶ್ವಿನಕೃಷ್ಣಪಕ್ಷದ "ಇಂದಿರೈಕಾದಶೀ"
ವ್ರತಮಹಾತ್ಮೆಯು ಸಮಾಪ್ತವಾಯಿತು ||

|| ಶ್ರೀಕೃಷ್ಣಾರ್ಪಣಮಸ್ತು ||

# ಆಶ್ವಿನಶುಕ್ಲೈಕಾದಶೀ ವ್ರತಕಥಾ

ಯುಧಿಷ್ಠಿರ ಉವಾಚ

ಕಥಯಸ್ವ ಪ್ರಸಾದೇನ ಭಗವನ್ ಮಧುಸೂದನ ।
ಇಷಸ್ಯ ಶುಕ್ಲಪಕ್ಷೇ ತು ಕಿಂ ನಾಮ್ನೈಕಾದಶೀ ಭವೇತ್ ॥೧॥

ಶ್ರೀಕೃಷ್ಣ ಉವಾಚ

ಶೃಣು ರಾಜೇಂದ್ರ ವಕ್ಷ್ಯಾಮಿ ಮಾಹಾತ್ಮ್ಯಂ ಪಾಪನಾಶನಮ್ ।
ಶುಕ್ಲಪಕ್ಷೇ ಚಾಶ್ವಯುಜಿ ಭವೇದೇಕಾದಶೀ ತು ಯಾ ॥೨॥

ಪಾಶಾಂಕುಶೇತಿ ವಿಖ್ಯಾತಾ ಸರ್ವಪಾಪಹರಾ ಪರಾ ।
ಪದ್ಮನಾಭಾಭಿಧಾನಂ ತು ಪೂಜಯೇತ್ತತ್ರ ಮಾನವಃ ॥೩॥

ಸರ್ವಾಭೀಷ್ಟಫಲಪ್ರಾಪ್ತ್ಯೈ ಸ್ವರ್ಗಮೋಕ್ಷಪ್ರದಂ ನೃಣಾಮ್ ।
ತಪಸ್ತಪ್ತ್ವಾ ನರಸ್ತೀವ್ರಂ ಚಿರಂ ಸುನಿಯತೇಂದ್ರಿಯಃ ॥೪॥

ಯತ್ಫಲಂ ಸಮವಾಪ್ನೋತಿ ತನ್ನತ್ವಾ ಗರುಡಧ್ವಜಮ್ ।
ಕೃತ್ವಾಪಿ ಬಹುಶಃ ಪಾಪಂ ನರಾ ಮೋಹಸಮನ್ವಿತಾಃ ॥೫॥

ನ ಯಾಂತಿ ನರಕಂ ಘೋರಂ ನತ್ವಾ ಪಾಪಹರಂ ಹರಿಮ್ ।
ಪೃಥಿವ್ಯಾಂ ಯಾನಿ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ॥೬॥

---

ಭಗವನ್ ಮಧುಸೂದನ, ಅನುಗ್ರಹ ಮಾಡಿ ಇನ್ನು ನನಗೆ ಆಶ್ವಿನ ಶುಕ್ಲಪಕ್ಷದ ಏಕಾದಶಿಯ ಮಹಾತ್ಮೆಯನ್ನು ತಿಳಿಸಬೇಕು. ಈ ಏಕಾದಶಿಯ ಹೆಸರೇನು ಎಂಬುದನ್ನು ತಿಳಿಸು ಎಂದು ಯುಧಿಷ್ಠಿರನು ಪ್ರಾರ್ಥಿಸಲು ॥೧॥ ಶ್ರೀಕೃಷ್ಣನು ಹೇಳುತ್ತಾನೆ - ಹೇ ರಾಜೇಂದ್ರಾ, ಪಾಪನಾಶಕರವಾದ ಮಹಾತ್ಮೆಯನ್ನು ತಿಳಿಸುವೆನು ಕೇಳು. ಆಶ್ವಿನಮಾಸದ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಯು ॥೨॥ "ಪಾಪಾಂಕುಶಾ" ಎಂದು ಕರೆಯಲ್ಪಡುತ್ತದೆ. ಸರ್ವಪಾಪಗಳನ್ನು ನಾಶಮಾಡುವ ಈ ಏಕಾದಶಿಯ ದಿನ ಪದ್ಮನಾಭನಾಮಕ ಶ್ರೀಹರಿಯನ್ನು ಭಕ್ತಿಯಿಂದ ಪೂಜಿಸಬೇಕು. ॥೩॥ ಸಕಲ ಇಚ್ಛಿತ ಫಲಗಳು ದೊರೆಯಬೇಕಾದರೆ ಸ್ವರ್ಗಮೋಕ್ಷಪ್ರದನಾದ ಪದ್ಮನಾಭನನ್ನು ಪೂಜಿಸಬೇಕು. ಇಂದ್ರಿಯ ನಿಗ್ರಹವುಳ್ಳವನಾಗಿ ಘೋರವಾದ ತಪಸ್ಸನ್ನು ಆಚರಿಸುವುದರಿಂದ ॥೪॥ ಯಾವ ಫಲವು ಬರುವದೋ ಅದೇ ಫಲವು ಗರುಡಧ್ವಜನಾದ ಶ್ರೀಹರಿಯನ್ನು ಭಕ್ತಿಪೂರ್ವಕ ಒಮ್ಮೆ ನಮಿಸುವ ಮಾತ್ರದಿಂದ ಪ್ರಾಪ್ತವಾಗುವದು. ಮನುಷ್ಯರು ಬಹುಶಃ ಮೋಹವಶರಾಗಿ (ಅಜ್ಞಾನದಿಂದ) ಪಾಪಕರ್ಮಗಳನ್ನು ಮಾಡಿದರೂ ॥೫॥ ಪಾಪಹರನಾದ ಶ್ರೀಹರಿಯನ್ನು ಭಕ್ತಿಪೂರ್ವಕ ನಮಿಸುವ ಮಾತ್ರದಿಂದ ಘೋರವಾದ ನರಕವನ್ನು ಹೊಂದುವದಿಲ್ಲ. ಪೃಥ್ವಿಯ ಮೇಲೆ ಎಷ್ಟು ತೀರ್ಥಗಳಿವೆಯೋ ಮತ್ತು ಪುಣ್ಯಕ್ಷೇತ್ರಗಳಿವೆಯೋ ॥೬॥ ಅವೆಲ್ಲವುಗಳನ್ನು ಸಂದರ್ಶಿಸಿ ಅಲ್ಲಿ ಸ್ನಾನ, ಕ್ಷೇತ್ರವಿಧಿಗಳನ್ನು

**ತಾನಿ ಸರ್ವಾಣ್ಯವಾಪ್ನೋತಿ ವಿಷ್ಣೋರ್ನಾಮಾನುಕೀರ್ತನಾತ್ ।**
**ದೇವಂ ಶಾರ್ಙ್ಗಧರಂ ವಿಷ್ಣುಂ ಯೇ ಪ್ರಪನ್ನಾ ಜನಾರ್ದನಮ್ ॥೭॥**

**ನ ತೇಷಾಂ ಯಮಲೋಕಶ್ಚ ನೃಣಾಂ ವೈ ಜಾಯತೇ ಕ್ವಚಿತ್ ।**
**ಉಪೋಷ್ಯೈಕಾದಶೀಮೇಕಾಂ ಪ್ರಸಂಗೇನಾಪಿ ಮಾನವಃ ॥೮॥**

**ನ ಯಾತಿ ಯಾತನಾಂ ಯಾಮೀಂ ಪಾಪಂ ಕೃತ್ವಾ ತು ದಾರುಣಮ್ ।**
**ವೈಷ್ಣವಃ ಪುರುಷೋ ಭೂತ್ವಾ ಶಿವನಿಂದಾಂ ಕರೋತಿ ಯಃ ॥೯॥**

**ಯೋ ನಿಂದೇದ್ವೈಷ್ಣವಂ ಲೋಕೇ ಸ ಯಾತಿ ನರಕಂ ಧ್ರುವಮ್ ।**
**ಅಶ್ವಮೇಧಸಹಸ್ರಾಣಿ ರಾಜಸೂಯಶತಾನಿ ಚ ॥೧೦॥**

**ಏಕಾದಶ್ಯುಪವಾಸಸ್ಯ ಕಲಾಂ ನಾರ್ಹಂತಿ ಷೋಡಶೀಮ್ ।**
**ಏಕಾದಶೀಸಮಂ ಪುಣ್ಯಂ ಕಿಂಚಿಲ್ಲೋಕೇ ನ ವಿದ್ಯತೇ ॥೧೧॥**

**ನೇದೃಶಂ ಪಾವನಂ ಕಿಂಚಿತ್ ತ್ರಿಷು ಲೋಕೇಷು ವಿದ್ಯತೇ ।**
**ಯಾದೃಶಂ ಪದ್ಮನಾಭಸ್ಯ ದಿನಂ ಪಾತಕಹಾನಿದಮ್ ॥೧೨॥**

**ಯಾವನ್ನೋಪೋಷ್ಯತೇ ಜಂತುಃ ಪದ್ಮನಾಭದಿನರೆ ಶುಭಮ್ ।**
**ತಾವತ್ಪಾಪಾನಿ ತಿಷ್ಠಂತಿ ದೇಹೇಽಸ್ಮಿನ್ ಮನುಜಾಧಿಪ ॥೧೩॥**

---

ಮಾಡುವುದರಿಂದ ಎಷ್ಟು ಪುಣ್ಯವು ಬರುವದೋ ಅಷ್ಟನ್ನೇ ವಿಷ್ಣುವಿನ ನಾಮಸಂಕೀರ್ತನೆಯಿಂದ ಪಡೆಯಬಹುದು. ಶಾರ್ಙ್ಗಧರನಾದ, ವ್ಯಾಪ್ತನಾದ ಶ್ರೀಜನಾರ್ದನ ದೇವನನ್ನು ಆಶ್ರಯಿಸುವವರಿಗೆ ॥೭॥ ಎಂದಿಗೂ ಯಮಲೋಕದ ದರ್ಶನವಾಗುವದಿಲ್ಲ. ದಾರುಣವಾದ ಪಾಪಕರ್ಮಗಳನ್ನು ಮಾಡಿದವನೂ, ಈ ಏಕಾದಶಿಯ ದಿನ ಪ್ರಸಂಗವಶಾತ್ ಉಪವಾಸಮಾಡಿದರೂ ಯಮಲೋಕದ ಯಾತನೆಯನ್ನು ಹೊಂದುವದೇ ಇಲ್ಲ. ವಿಷ್ಣುಭಕ್ತನಾಗಿದ್ದು ಯಾವನು ಶಿವನ ನಿಂದೆಯನ್ನು ಮಾಡುವನೋ ॥೮॥ ॥೯॥ ಮತ್ತು ಶಿವಭಕ್ತನಾಗಿದ್ದವನು ವಿಷ್ಣುನಿಂದೆಯನ್ನು ಮಾಡುವನೋ ಅವರಿಬ್ಬರೂ ನರಕಭಾಗಿಗಳಾಗುವರು. ಒಂದು ಸಹಸ್ರ ಅಶ್ವಮೇಧಗಳು (ಫಲ) ಮತ್ತು ಒಂದು ನೂರು ರಾಜಸೂಯಗಳು (ಫಲ) ॥೧೦॥ ಈ ಏಕಾದಶೀ ಉಪವಾಸದ ೧೬ನೆಯ ಒಂದು ಭಾಗಕ್ಕೂ ಸಮನಾಗುವದಿಲ್ಲ. ಜಗತ್ತಿನಲ್ಲಿ ಈ ಏಕಾದಶಿಗೆ ಸಮಾನವಾದ ಪುಣ್ಯವು ಇರುವದಿಲ್ಲ. ॥೧೧॥ ಈ ಏಕಾದಶೀವ್ರತದಷ್ಟು ಪವಿತ್ರವಾದ ಬೇರೆ ಯಾವುದೂ ತ್ರಿಲೋಕಗಳಲ್ಲಿ ದೊರೆಯಲಾರದು. ಪದ್ಮನಾಭನ ದಿನವಾದ ಈ ಏಕಾದಶಿಯಂತೆ ಇನ್ನಾವುದೂ ಪಾತಕಗಳನ್ನು ಕಳೆಯಲಾರದು. ॥೧೨॥ ಹೇ ಧರ್ಮರಾಜಾ, ಪದ್ಮನಾಭನ ದಿನವಾದ ಆಶ್ವಿನಶುಕ್ಲ ಏಕಾದಶಿಯ ದಿನ ಉಪವಾಸಮಾಡದಿದ್ದರೆ ದೇಹದಲ್ಲಿಯ ಪಾತಕಗಳು ನಾಶವಾಗದೇ ಹಾಗೇ ಉಳಿದುಕೊಳ್ಳುವವು. ॥೧೩॥ ಈ ಏಕಾದಶಿಗೆ ಸಮಾನವಾದುದು ತ್ರಿಲೋಕಗಳಲ್ಲಿಯೂ

**ನೈಕಾದಶೀಸಮಂ ಕಿಂಚಿತ್ ತ್ರಿಷು ಲೋಕೇಷು ವಿದ್ಯತೇ ।**
**ವ್ಯಾಜೇನಾಽಪಿ ಕೃತಾ ರಾಜನ್ ನ ದರ್ಶಯತಿ ಭಾಸ್ಕರಿಮ್ ॥೧೪॥**

**ಸ್ವರ್ಗಮೋಕ್ಷಪ್ರದಾ ಹ್ಯೇಷಾ ಶರೀರಾರೋಗ್ಯದಾಯಿನೀ ।**
**ಸುಕಲತ್ರಪ್ರದಾ ಹ್ಯೇಷಾ ಧನಧಾನ್ಯಪ್ರದಾಯಿನೀ ॥೧೫॥**

**ನ ಗಂಗಾ ನ ಗಯಾ ರಾಜನ್ ನ ಕಾಶೀ ನ ಚ ಪುಷ್ಕರಮ್ ।**
**ನ ಚಾಪಿ ಕೌರವಂ ಕ್ಷೇತ್ರಂ ಪುಣ್ಯಂ ಭೂಪ ಹರೇರ್ದಿನಾತ್ ॥೧೬॥**

**ರಾತ್ರೌ ಜಾಗರಣಂ ಕೃತ್ವಾ ಸಮುಪೋಷ್ಯ ಹರೇರ್ದಿನಮ್ ।**
**ಅನಾಯಾಸೇನ ಭೂಪಾಲ ಪ್ರಾಪ್ಯತೇ ವೈಷ್ಣವಂ ಪದಮ್ ॥೧೭॥**

**ದಶ ವೈ ಮಾತೃಪಕ್ಷೇ ಚ ದಶ ರಾಜೇಂದ್ರ ಪೈತೃಕೇ ।**
**ಪ್ರಿಯಾಯಾ ದಶ ಪಕ್ಷೇ ತು ಪುರುಷಾನುದ್ಧರೇನ್ನರಃ ॥೧೮॥**

**ಚತುರ್ಭುಜಾ ದಿವ್ಯರೂಪಾ ನಾಗಾರಿಕೃತಕೇತನಾಃ ।**
**ಸ್ರಗ್ವಿಣಃ ಪೀತವಸ್ತ್ರಾಶ್ಚ ಪ್ರಯಾಂತಿ ಹರಿಮಂದಿರಮ್ ॥೧೯॥**

**ಬಾಲತ್ವೇ ಯೌವನತ್ವೇಽಪಿ ವೃದ್ಧತ್ವೇ ಚ ನೃಪೋತ್ತಮ ।**
**ಉಪೋಷ್ಯ ದ್ವಾದಶೀಂ ನೂನಂ ನೈತಿ ಪಾಪೋಽಪಿ ದುರ್ಗತಿಮ್ ॥೨೦॥**

---

ಕಾಣಸಿಗುವದಿಲ್ಲ. ಯಾವುದೋ ಒಂದು ನಿಮಿತ್ತದಿಂದ ಏಕಾದಶೀ ಉಪವಾಸ ಮಾಡಿದ ನರನೂ ಯಮನನ್ನು ಕಾಣುವದಿಲ್ಲ. ॥೧೪॥ ಈ ಏಕಾದಶೀವ್ರತವು ಸ್ವರ್ಗಮೋಕ್ಷಗಳನ್ನು ಕೊಡುವಂಥದೂ, ಶರೀರಕ್ಕೆ ಉತ್ತಮ ಆರೋಗ್ಯವನ್ನು ಕೊಡುವಂಥದೂ, ಗುಣವತಿಯಾದ ಸುಶೀಲೆಯಾದ ಪತ್ನಿಯನ್ನು ಕೊಡುವಂಥದೂ ಹಾಗೂ ಧನಧಾನ್ಯಗಳನ್ನು ಕೊಡುವಂಥದೂ ಆಗಿದೆ. ॥೧೫॥ ಹೇ ಧರ್ಮರಾಜಾ, ಈ ಏಕಾದಶಿಗಿಂತ ಗಂಗಾ, ಗಯಾ, ಕಾಶಿ, ಪುಷ್ಕರ, ಕುರುಕ್ಷೇತ್ರ ಇವಾವೂ ಅಧಿಕಪುಣ್ಯಪ್ರದವಾಗಿರುವದಿಲ್ಲ. ॥೧೬॥ ಏಕಾದಶೀ ದಿನ ಉಪವಾಸದಿಂದಿದ್ದು ರಾತ್ರಿಯಲ್ಲಿ ಜಾಗರಣೆ ಮಾಡಿದರೆ ಅನಾಯಾಸವಾಗಿ ವೈಷ್ಣವಲೋಕವು ಪ್ರಾಪ್ತವಾಗುವದು. ॥೧೭॥ ಈ ಏಕಾದಶೀವ್ರತವನ್ನು ಆಚರಿಸುವವನು ತನ್ನ ಪಿತೃಪಕ್ಷದ ಹತ್ತು, ಮಾತೃಪಕ್ಷದ ಹತ್ತು ಹಾಗೂ ಪತ್ನೀಪಕ್ಷದ ಹತ್ತು ತಲೆಮಾರಿನವರನ್ನು (ಪೀಳಿಗೆಗಳನ್ನು) ಉದ್ಧರಿಸುವನು. ॥೧೮॥ ಈ ಏಕಾದಶೀವ್ರತಾನುಷ್ಠಾನ ಮಾಡಿದವರು ಮರಣಾನಂತರ ದಿವ್ಯರೂಪವುಳ್ಳವರಾಗಿ, ಚತುರ್ಭುಜರಾಗಿ, ದಿವ್ಯಹಾರಗಳನ್ನು ಹಾಗೂ ಪೀತಾಂಬರಗಳನ್ನು ಧರಿಸಿ, ಗರುಡಾರೂಢರಾಗಿ ಹರಿಮಂದಿರಕ್ಕೆ ಹೋಗುತ್ತಾರೆ ॥೧೯॥ ಹೇ ಧರ್ಮರಾಜಾ, ಬಾಲ್ಯಾವಸ್ಥೆಯಲ್ಲಾಗಲೀ, ತಾರುಣ್ಯದಲ್ಲಾಗಲೀ ಅಥವಾ ವೃದ್ಧಾಪ್ಯದಲ್ಲಾಗಲೀ ಈ ಏಕಾದಶಿಯ ದಿನ ಉಪವಾಸಮಾಡುವವನು ಎಷ್ಟೇ ಪಾಪಗಳನ್ನು ಮಾಡಿದವನಾಗಿದ್ದರೂ ದುರ್ಗತಿಯನ್ನು ಹೊಂದುವದಿಲ್ಲ. ॥೨೦॥ "ಪಾಪಾಂಕುಶ" ಏಕಾದಶೀ ದಿನ ಉಪವಾಸದಿಂದ

ಪಾಶಾಂಕುಶಾಮುಪೋಷ್ಯೈವ ಆಶ್ವಿನೇ ಚಾಸಿತೇತರೇ ।
ಸರ್ವಪಾಪವಿನಿರ್ಮುಕ್ತೋ ಹರಿಲೋಕಂ ಸ ಗಚ್ಛತಿ ॥೨೧॥

ದತ್ವಾ ಹೇಮತಿಲಾನ್ ಭೂಮಿಂ ಗಾಮನ್ನಮುದಕಂ ತಥಾ ।
ಉಪಾನದ್ವಸ್ತ್ರಛತ್ರಾದಿ ನ ಪಶ್ಯತಿ ಯಮಂ ನರಃ ॥೨೨॥

ಯಸ್ಯ ಪುಣ್ಯವಿಹೀನಾನಿ ದಿನಾನ್ಯಪಗತಾನಿ ಚ ।
ಲೋಹಕಾರಸ್ಯ ಭಸ್ತ್ರೇವ ಶ್ವಸನ್ನಪಿ ನ ಜೀವತಿ ॥೨೩॥

ಅವಂಧ್ಯಂ ದಿವಸಂ ಕುರ್ಯಾದ್ದರಿದ್ರೋಽಪಿ ನೃಪೋತ್ತಮ ।
ಸದಾಚಾರಾನ್ ಯಥಾಶಕ್ತಿ ಸ್ನಾನದಾನಾದಿಕಾಃ ಕ್ರಿಯಾಃ ॥೨೪॥

ತಡಾಗಾರಾಮಸೌಧಾನಾಂ ಸತ್ರಾಣಾಂ ಪುಣ್ಯಕರ್ಮಣಾಮ್ ।
ಕರ್ತಾರೋ ನೈವ ಪಶ್ಯಂತಿ ಧೀರಾಸ್ತಾಂ ಯಮಯಾತನಾಮ್ ॥೨೫॥

---

ಇರುವವನು ಸರ್ವಪಾಪಗಳಿಂದ ಮುಕ್ತನಾಗಿ ಹರಿಮಂದಿರಕ್ಕೆ ಹೋಗುವನು. ॥೨೧॥ ಸುವರ್ಣದ ತಿಲಗಳನ್ನು, ಭೂಮಿ, ಗೋವು, ಅನ್ನ, ನೀರು, ಪಾದತ್ರಾಣ (ಪಾದರಕ್ಷೆ), ವಸ್ತ್ರ, ಛತ್ರಾದಿಗಳನ್ನು ದಾನಮಾಡುವವನು ಯಮನನ್ನು ಕಾಣುವದಿಲ್ಲ. ॥೨೨॥ ಯಾವನು ಒಂದೂ ಪುಣ್ಯಕರ್ಮವಿಲ್ಲದೇ ದಿನಗಳನ್ನು ಕಳೆದಿರುವನೋ ಅವನು ಕಮ್ಮಾರನ ತಿದಿಯಂತೆ ಉಸಿರಾಡಿಸುತ್ತಿದ್ದರೂ ಜೀವವಿಲ್ಲದಂತೆಯೇ ಸರಿ (ಇದ್ದರೂ ಇಲ್ಲದಂತೆ) ॥೨೩॥ ಹೇ ಧರ್ಮರಾಜಾ, ದರಿದ್ರನಾಗಿದ್ದರೂ ಒಂದು ದಿನವನ್ನು ವ್ಯರ್ಥಕಳೆಯಬಾರದು. ಯಥಾಶಕ್ತಿ ಸ್ನಾನ, ದಾನಾದಿ ಕರ್ಮಗಳನ್ನು ಮತ್ತು ಸದಾಚಾರಗಳನ್ನು ಆಚರಿಸಬೇಕು. ॥೨೪॥ ಕೆರೆ, ಉಪವನ, ವಿಶ್ರಾಂತಿಗೃಹ ಮುಂತಾದವುಗಳನ್ನು ಕಟ್ಟಿಸುವ, ಯಜ್ಞಯಾಗಾದಿ ಪುಣ್ಯಕರ್ಮಗಳನ್ನು ಮಾಡುವ ಧೀರರು (ಜ್ಞಾನಿಗಳು) ಎಂದಿಗೂ ಯಮಯಾತನೆಯನ್ನು ಹೊಂದುವದಿಲ್ಲ. ॥೨೫॥ ಇಂಥ ಪುಣ್ಯಕರ್ಮಿಗಳಾದ ಅವರೇ ಲೋಕದಲ್ಲಿ ದೀರ್ಘಾಯುಷಿಗಳೂ, ಧನಾಢ್ಯರೂ, ಕುಲೀನರೂ, ರೋಗರಹಿತರೂ ಆಗಿರುವದನ್ನು

ದೀರ್ಘಾಯುಷೋ ಧನಾಢ್ಯಾಶ್ಚ ಕುಲೀನಾ ರೋಗವರ್ಜಿತಾ: ।
ದೃಶ್ಯಂತೇ ಮಾನವಾ ಲೋಕೇ ಪುಣ್ಯಕರ್ತಾರ ಈದೃಶಾ: ॥೨೬॥

ಇತಿ ತೇ ಕಥಿತಂ ರಾಜನ್ ಯತ್ಪೃಷ್ಟೋಽಹಂ ತ್ವಯಾಽನಘ ।
ಪಾಶಾಂಕುಶಾಯಾ ಮಾಹಾತ್ಮ್ಯಂ ಕಿಮನ್ಯಚ್ಛ್ರೋತುಮಿಚ್ಛಸಿ ॥೨೭॥

॥ ಇತಿ ಶ್ರೀಬ್ರಹ್ಮವೈವರ್ತಪುರಾಣೇ ಆಶ್ವಿನಶುಕ್ಲೇ ಪಾಶಾಂಕುಶೈಕಾದಶೀ
ವ್ರತಮಾಹಾತ್ಮ್ಯಂ ಸಂಪೂರ್ಣಮ್ ॥

---

ಕಾಣುತ್ತೇವೆ. ॥೨೬॥ ಹೇ ರಾಜನ್, ಇದುವರೆಗೆ ನೀನು ಕೇಳಿದ್ದಕ್ಕೆ ಪಾಪಾಂಕುಶವ್ರತದ ಮಹಾತ್ಮೆಯನ್ನು ತಿಳಿಸಿದ್ದೇನೆ. ಇನ್ನೇನಾದರೂ ಕೇಳಬೇಕೆಂದಿದ್ದರೆ ವಿಚಾರಿಸಬಹುದು. ॥೨೭॥

॥ ಇಲ್ಲಿಗೆ ಶ್ರೀಬ್ರಹ್ಮವೈವರ್ತಪುರಾಣದಲ್ಲಿಯ ಆಶ್ವಿನಶುಕ್ಲಪಕ್ಷದ
"ಪಾಪಾಂಕುಶೈಕಾದಶೀ" ವ್ರತಮಹಾತ್ಮೆಯು ಸಮಾಪ್ತವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

# ಕಾರ್ತೀಕ ಕೃಷ್ಣೈಕಾದಶೀ ವ್ರತ ಕಥಾ

ಯುಧಿಷ್ಠಿರ ಉವಾಚ -
ಕಥಯಸ್ವ ಪ್ರಸಾದೇನ ಮಮ ಸ್ನೇಹಾಜ್ಜನಾರ್ದನ ।
ಕಾರ್ತಿಕಸ್ಯಾಸಿತೇ ಪಕ್ಷೇ ಕಿಂ ನಾಮ್ನೈಕಾದಶೀ ಭವೇತ್ ॥೧॥

ಶ್ರೀಕೃಷ್ಣ ಉವಾಚ -
ಶ್ರೂಯತಾಂ ರಾಜಶಾರ್ದೂಲ ಕಥಯಾಮಿ ತವಾಗ್ರತಃ ।
ಕಾರ್ತಿಕೇ ಕೃಷ್ಣಪಕ್ಷೇ ತು ರಮಾ ನಾಮ್ನೀ ಸುಶೋಭನಾ ॥೨॥

ಏಕಾದಶೀ ಸಮಾಖ್ಯಾತಾ ಮಹಾಪಾಪಹರಾ ಪರಾ ।
ಅಸ್ಯಾಃ ಪ್ರಸಂಗತೋ ರಾಜನ್ ಮಾಹಾತ್ಮ್ಯಂ ಪ್ರವದಾಮಿ ತೇ ॥೩॥

ಮುಚುಕುಂದ ಇತಿ ಖ್ಯಾತೋ ಬಭೂವ ನೃಪತಿಃ ಪುರಾ ।
ದೇವೇಂದ್ರೇಣ ಸಮಂ ಯಸ್ಯ ಮಿತ್ರತ್ವಮಭವನ್ನೃಪ ॥೪॥

ಯಮೇನ ವರುಣೇನೈವ ಕುಬೇರೇಣ ಸಮಂ ತಥಾ ।
ವಿಭೀಷಣೇನ ಚೈತಸ್ಯ ಸಖಿತ್ವಮಭವತ್ಸ ಹ ॥೫॥

ವಿಷ್ಣುಭಕ್ತಃ ಸತ್ಯಸಂಧೋ ಬಭೂವ ನೃಪತಿಃ ಸದಾ ।
ತಸ್ಯೈವಂ ಶಾಸತೋ ರಾಜನ್ ರಾಜ್ಯಂ ನಿಹತಕಂಟಕಮ್ ॥ ೬॥

ಹೇ ಶ್ರೀಕೃಷ್ಣಪರಮಾತ್ಮಾ, ನನ್ನ ಮೇಲೆ ಅನುಗ್ರಹ ಮಾಡಿ ಇನ್ನು ಕಾರ್ತಿಕಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯ ಹೆಸರು ಹಾಗೂ ಮಹಿಮೆಗಳನ್ನು ತಿಳಿಸಬೇಕು. ಎಂದು ಯುಧಿಷ್ಠಿರನು ಪ್ರಾರ್ಥಿಸಲು ॥೧॥ ಶ್ರೀಕೃಷ್ಣನು ಹೇಳುತ್ತಾನೆ- ಹೇ ರಾಜಶ್ರೇಷ್ಠನೇ ಕಾರ್ತಿಕ ಕೃಷ್ಣಪಕ್ಷದ ಏಕಾದಶೀ ಮಹಾತ್ಮೆಯನ್ನು ಹೇಳುವೆನು ಕೇಳು. ಈ ಏಕಾದಶಿಗೆ 'ರಮಾ' ಎಂದು ಕರೆಯುವರು. ॥ ೨॥ ಇದು ಮಹಾಪಾಪಗಳನ್ನು ಕಳೆಯುವಂಥದಾಗಿದೆ. ಹೇ ರಾಜಾ, ಈ ಏಕಾದಶಿಯ ಮಹಾತ್ಮೆಯನ್ನು ಒಂದು ಕಥಾಪ್ರಸಂಗದ ಮೂಲಕ ನಿನಗೆ ತಿಳಿಸುವೆನು. ಕೇಳು. ॥೩॥ ಹಿಂದಕ್ಕೆ ಮುಚುಕುಂದ ಎಂಬ ಹೆಸರಿನ ಒಬ್ಬ ಪ್ರಸಿದ್ಧನಾದ ರಾಜನಿದ್ದನು. ಅವನಿಗೆ ದೇವೇಂದ್ರ ॥ ೪॥ ಯಮ, ವರುಣ, ಕುಬೇರ, ವಿಭೀಷಣನ ಮುಂತಾದವರೊಂದಿಗೆ ವಿಶೇಷವಾದ ಸಖ್ಯವಿತ್ತು. ॥೫॥ ಆ ರಾಜನು ಸದಾ ಸತ್ಯಸಂಧನೂ, ವಿಷ್ಣುಭಕ್ತನೂ ಆಗಿದ್ದನು. ಅವನು ರಾಜ್ಯಭಾರ ಮಾಡುತ್ತಿರಲು ರಾಜ್ಯವು ನಿಷ್ಕಂಟಕವಾಗಿದ್ದಿತು. ॥೬॥ ನದಿಗಳಲ್ಲಿ ಶ್ರೇಷ್ಠಳಾದ ಚಂದ್ರಭಾಗಾ ಎನ್ನುವವಳು ಮುಚುಕುಂದ ಮಹಾರಾಜನ ಮನೆಯಲ್ಲಿ ರಾಜನ ಮಗಳಾಗಿ ಜನಿಸಿದಳು. ಮಹಾರಾಜನು ತನ್ನ ಮಗಳನ್ನು ಚಂದ್ರಸೇನನ ಮಗನಾದ

ಬಭೂವ ದುಹಿತಾ ಗೇಹೇ ಚಂದ್ರಭಾಗಾ ಸರಿದ್ವರಾ ।
ಶೋಭನಾಯ ಚ ಸಾ ದತ್ತಾ ಚಂದ್ರಸೇನಸುತಾಯ ವೈ ॥೭॥

ಸ ಕದಾಚಿತ್ಸಮಾಯಾತಃ ಶ್ವಶುರಸ್ಯ ಗೃಹೇ ನೃಪ ।
ಏಕಾದಶೀವ್ರತಮಿದಂ ಸಮಾಯಾತಂ ಸುಪುಣ್ಯದಮ್ ॥೮॥

ಸಮಾಗತೇ ವ್ರತದಿನೇ ಚಂದ್ರಭಾಗಾ ತ್ವಚಿಂತಯತ್ ।
ಕಿಂ ಭವಿಷ್ಯತಿ ದೇವೇಶ ಮಮ ಭರ್ತಾಽತಿದುರ್ಬಲಃ ॥೯॥

ಕ್ಷುಧಾಂ ನ ಸಹತೇ ಸೋಽಪಿ ಪಿತಾ ಚೈವೋಗ್ರಶಾಸನಃ ।
ಪಟಹಸ್ತಾಡ್ಯತೇ ಯಸ್ಯ ಸಂಪ್ರಾಪ್ತೇ ದಶಮೀದಿನೇ ॥೧೦॥

ನ ಭೋಕ್ತವ್ಯಂ ನ ಭೋಕ್ತವ್ಯಂ ನ ಭೋಕ್ತವ್ಯಂ ಹರೇರ್ದಿನೇ ।
ಶ್ರುತ್ವಾ ಪಟಹನಿರ್ಘೋಷಂ ಶೋಭಕಸ್ತ್ವಬ್ರವೀತ್ ಪ್ರಿಯಾಮ್ ॥೧೧॥

ಕಿಂ ಕರ್ತವ್ಯಂ ಮಯಾ ಕಾಂತೇ ದೇಹಿ ಶಿಕ್ಷಾಂ ಸುಶೋಭನೇ ।
ಕೃತೇನ ಯೇನ ಮೇ ಸಮ್ಯಗ್ ಜೀವಿತಂ ನ ವಿನಶ್ಯತಿ ॥೧೨॥

ಚಂದ್ರಭಾಗೋವಾಚ –
ಮತ್ಪಿತುರ್ವೇಶ್ಮನಿ ವಿಭೋ ಭೋಕ್ತವ್ಯಂ ನೈವ ಕೇನಚಿತ್ ।
ಗಜೈರಶ್ವೈಸ್ತಥಾ ಚಾನ್ಯೈರನ್ಯೈಃ ಪಶುಭಿರೇವ ಚ ॥೧೩॥

ಶೋಭನ ಎನ್ನುವ ವರನಿಗೆ ಕೊಟ್ಟು ಮದುವೆ ಮಾಡಿದನು. ॥೭॥ ಒಮ್ಮೆ ಈ ಶೋಭನನು ತನ್ನ ಮಾವನ ಮನೆಗೆ ಬಂದಾಗ ಮರುದಿನ ಪುಣ್ಯಪ್ರದವಾದ ಏಕಾದಶೀತಿಥಿ ಇದ್ದಿತು. ॥೮॥ ಏಕಾದಶೀವ್ರತದ ದಿನ ಮುಚುಕುಂದ ಮಹಾರಾಜನ ಮನೆಗೆ ಬಂದಿದ್ದ ಚಂದ್ರಭಾಗೆಯು ಚಿಂತಿಸಿದಳು - " ನನ್ನ ಪತಿಯು ಅತಿ ಅಶಕ್ತನಾಗಿರುವನು. ಹೇ ದೇವಾ, ಉಪವಾಸದಿಂದ ಅವನಿಗೇನಾಗುವದೋ ಏನೋ ? ॥೯॥ ಅವನು ಹಸಿವೆಯನ್ನು ಸಹಿಸಲಾರನು. ನನ್ನ ತಂದೆಯಂತೂ ಏಕಾದಶೀ ಉಪವಾಸದ ವಿಷಯದಲ್ಲಿ ಉಗ್ರಶಾಸನ ಮಾಡಿದವನಾಗಿದ್ದಾನೆ. ದಶಮೀ ದಿನ ಬಂದಾಕ್ಷಣವೇ ರಾಜನು ॥೧೦॥ "ಭೋ ಭೋ ಕೇಳಿರಿ, ಕೇಳಿರಿ, ಏಕಾದಶಿಯ ದಿನ ಯಾರೂ ಆಹಾರಸೇವನಾದಿಗಳನ್ನು ಮಾಡಬಾರದು, ಆಹಾರಸೇವನಾದಿಗಳನ್ನು ಮಾಡಬಾರದು, ಆಹಾರಸೇವನಾದಿಗಳನ್ನು ಮಾಡಬಾರದು," ಎಂದು ನಗಾರಿ ಹೊಡೆಸುತ್ತಾನೆ. ಅದೇ ಪ್ರಕಾರವಾಗಿ ಆ ದಿನ ಹೊರಡಿಸಿದ ಆಜ್ಞಾ ಹಾಗೂ ನಗಾರಿ ಸಪ್ಪಳವನ್ನು ಕೇಳಿ ಶೋಭನನು ತನ್ನ ಪ್ರಿಯೆಯನ್ನು ಕುರಿತು ॥೧೧॥ "ಹೇ ಕಾಂತೇ, ಇಂಥ ಪರಿಸ್ಥಿತಿಯಲ್ಲಿ ನಾನೇನು ಮಾಡಬೇಕೆಂಬುದನ್ನು ಸರಿಯಾಗಿ ತಿಳಿಸುವೆಯಾ? ನನ್ನ ಪ್ರಾಣವು ಹೋಗದಿರದಂತೆ ಏನಾದರೊಂದು ಉಪಾಯವನ್ನು ತಿಳಿಸು" ಎಂದು ಕೇಳಲು ॥೧೨॥ ಚಂದ್ರಭಾಗೆಯು

ತೃಣಮನ್ನಂ ತಥಾ ವಾರಿ ನ ಭೋಕ್ತವ್ಯಂ ಹರೇರ್ದಿನೇ ।
ಮಾನವೈಸ್ತು ಕುತಃ ಕಾಂತ ಭುಜ್ಯತೇ ಹರಿವಾಸರೇ ॥೧೪॥
ಯದಿ ತ್ವಂ ಭೋಕ್ಷ್ಯಸೇ ಕಾಂತ ತತೋ ಗೇಹಾತ್ ಪ್ರಯಾಸ್ಯತಾವ್ ।
ಏವಂ ವಿಚಾರ್ಯ ಮನಸಾ ಸದೃಢಂ ಮಾನಸಂ ಕುರು ॥೧೫॥
ಶೋಭನ ಉವಾಚ -
ಸತ್ಯಮೇತತ್ತ್ವಯಾ ಚೋಕ್ತಂ ಕರಿಷ್ಯೇಽಹಮುಪೋಷಣಮ್ ।
ದೈವೇನ ವಿಹಿತಂ ಯದ್ವೈ ತತ್ತಥೈವ ಭವಿಷ್ಯತಿ ॥೧೬॥
ಇತಿ ದಿಷ್ಟೇ ಮತಿಂ ಕೃತ್ವಾ ಚಕಾರ ವ್ರತಮುತ್ತಮಮ್ ।
ಕ್ಷುತ್ತೃಷಾಪೀಡಿತತನುಃ ಸ ಬಭೂವಾತಿದುಃಖಿತಃ ॥೧೭॥
ಏವಂ ವ್ಯಾಕುಲಿತೇ ತಸ್ಮಿನ್ನಾದಿತ್ಯೋಽಸ್ತಮಗಾದ್ಗಿರಿಮ್ ।
ವೈಷ್ಣವಾನಾಂ ನರಾಣಾಂ ಸಾ ನಿಶಾ ಹರ್ಷವಿವರ್ಧಿನೀ ॥೧೮॥
ಹರಿಪೂಜಾರತಾನಾಂ ಚ ಜಾಗರಾಸಕ್ತಚೇತಸಾಮ್ ।
ಬಭೂವ ನೃಪಶಾರ್ದೂಲ ಶೋಭನಸ್ಯಾತಿದುಃಸಹಾ ॥೧೯॥
ರವೇರುದಯವೇಲಾಯಾಂ ಶೋಭನಃ ಪಂಚತಾಂ ಗತಃ ।
ದಾಹಯಾಮಾಸ ರಾಜಾ ತಂ ರಾಜಯೋಗ್ಯೈಶ್ಚ ದಾರುಭಿಃ ॥೨೦॥

---

ಹೇಳಿದಳು- ವಿಭೋ, ನನ್ನ ತಂದೆಯ ಮನೆಯಲ್ಲಂತೂ ಏಕಾದಶಿಯ ದಿನ ಯಾರೂ ಆಹಾರವನ್ನು ಸೇವಿಸುವಂತಿಲ್ಲ. ಗಜಗಳು, ಅಶ್ವಗಳು ಹಾಗೂ ಇತರ ಬೇರೆ ಬೇರೆ ಪಶುಗಳೇ ॥೧೩॥ ಏಕಾದಶಿಯ ದಿನ ಹುಲ್ಲು ಮೊದಲಾದ ಆಹಾರವನ್ನು ಸೇವಿಸಬಾರದೆಂದು ಶಾಸನವಿರುವಾಗ ಹೇ ಕಾಂತ, ಏಕಾದಶಿಯ ದಿನ ಮನುಷ್ಯರೆಂತು ಭೋಜನ ಮಾಡಿಯಾರು? ॥೧೪॥ ಹೇ ಪ್ರಿಯೆ, ನಿಮಗೇನಾದರೂ ತಿನ್ನಬೇಕಾಗಿದ್ದರೆ ಇಲ್ಲಿಂದ ಹೊರಹೊರಡುವುದೇ ಲೇಸು. ಇದೆಲ್ಲವನ್ನು ವಿಚಾರಿಸಿ ಯಾವುದನ್ನಾದರೂ ನಿರ್ಧರಿಸಿರಿ. ॥೧೫॥ ಆಗ ಶೋಭನನು ಅಂದನು- ಹೇ ಪ್ರಿಯೆ, ನೀನು ಸತ್ಯವಾದುದನ್ನೇ ನುಡಿದಿರುವಿ. ನಾನು ಉಪವಾಸ ಮಾಡಬೇಕೆಂದೇ ನಿರ್ಧರಿಸಿದ್ದೇನೆ. ನನ್ನ ಹಣೆಬರಹದಲ್ಲಿದ್ದಂತೆಯೇ ಆಗುವುದು. ॥೧೬॥ ಈ ಪ್ರಕಾರ ಶೋಭನನು ತನ್ನ ದೈವವನ್ನು ನಂಬಿ ಶ್ರೇಷ್ಠವಾದ ಏಕಾದಶೀ ವ್ರತವನ್ನು ಮಾಡಲು ಉದ್ಯುಕ್ತನಾದನು. ದಿನಗಳೆದಂತೆ ಅವನು ಹಸಿವೆ, ನೀರಡಿಕೆಗಳಿಂದ ಬಳಲಿ ಅಶಕ್ತತೆಯಿಂದ ಬಹು ಪೀಡಿತನಾದನು. ॥೧೭॥ ಸೂರ್ಯಾಸ್ತವಾಗಲು ಬಂದ ರಾತ್ರಿಯು ವೈಷ್ಣವರಿಗೆಲ್ಲ ಅತಿ ಹರ್ಷಪ್ರದವಾಯಿತು. ॥೧೮॥ ವೈಷ್ಣವರೆಲ್ಲ ರಾತ್ರಿ ಜಾಗರಣೆ ಮಾಡಿ ಹರಿಸೇವೆಯಲ್ಲಿ ಆಸಕ್ತರಾಗಿರುವಾಗ ಶೋಭನನಿಗಂತೂ ಅದೆಲ್ಲ ಅತಿದುಃಸಹವಾಯಿತು. ॥ ೧೯ ॥ ದ್ವಾದಶೀ ಸೂರ್ಯೋದಯವಾಗುತ್ತಿರುವಂತೆಯೇ ಶೋಭನನು ಕಾಲವಶನಾದನು.

ಚಂದ್ರಭಾಗಾ ನಾತ್ಮದೇಹಂ ದದಾಹ ಪಿತೃವಾರಿತಾ ।
ಕೃತ್ವೌರ್ಧ್ವದೈಹಿಕಂ ತಸ್ಯ ತಸ್ಥೌ ಜನಕವೇಶ್ಮನಿ ॥೨೦॥

ಶೋಭನೋನ ನೃಪಶ್ರೇಷ್ಠ ರಮಾವ್ರತಪ್ರಭಾವತಃ ।
ಪ್ರಾಪ್ತಂ ದೇವಪುರಂ ರಮ್ಯಂ ಮಂದರಾಚಲಸಾನುನಿ ॥೨೨॥

ಅನುತ್ತಮಮನಾಧೃಷ್ಯಮಸಂಖ್ಯೇಯಗುಣಾನ್ವಿತಮ್ ।
ಹೇಮಸ್ತಂಭಮಯೈಃ ಸೌಧೈರ್ವೈಡೂರ್ಯಮಣಿಮಂಡಿತೈಃ ॥೨೩॥

ಸ್ಫಟಿಕೈರ್ವಿವಿಧಾಕಾರೈರ್ವಿಚಿತ್ರೈರುಪಶೋಭಿತಮ್ ।
ಸಿಂಹಾಸನಸಮಾರೂಢಃ ಸುಶ್ವೇತಚ್ಛತ್ರಚಾಮರಃ ॥೨೪॥

ಕಿರೀಟಕುಂಡಲಯುತೋ ಹಾರಕೇಯೂರಭೂಷಿತಃ ।
ಸ್ತೂಯಮಾನಶ್ಚ ಗಂಧರ್ವೈರಪ್ಸರೋಗಣಸೇವಿತಃ ॥೨೫॥

ಶೋಭನಃ ಶೋಭತೇ ತತ್ರ ದೇವರಾಡಪರೋ ಯಥಾ ।
ಸೋಮಶರ್ಮೇತಿ ವಿಖ್ಯಾತೋ ಮುಚುಕುಂದಪುರೇ ವಸನ್ ॥೨೬॥

ತೀರ್ಥಯಾತ್ರಾಪ್ರಸಂಗೇನ ಭ್ರಮನ್ ವಿಪ್ರೋ ದದರ್ಶ ತಮ್ ।
ನೃಪಜಾಮಾತರಂ ಜ್ಞಾತ್ವಾ ತತ್ಸಮೀಪಂ ಜಗಾಮ ಸಃ ॥೨೭॥

---

ಮುಚುಕುಂದ ಮಹಾರಾಜನು ರಾಜಯೋಗ್ಯವಾದ ಇಂಧನಗಳಿಂದ ಅಳಿಯನ ದೇಹಸಂಸ್ಕಾರವನ್ನು ಮಾಡಿದನು. ।೨೦॥ ಪತಿಯ ಚಿತೆಯಲ್ಲಿ ಸತೀ ಹೋಗಲು ಬಯಸಿದ ಚಂದ್ರಭಾಗೆಯನ್ನು ಮುಚುಕುಂದ ಮಹಾರಾಜನು ತಡೆಹಿಡಿದನು. ಅವಳು ತನ್ನ ಪತಿಯ ಔರ್ಧ್ವದೈಹಿಕ ಕ್ರಿಯೆಗಳನ್ನು ಮುಗಿಸಿ ತನ್ನ ತಂದೆಯ ಮನೆಯಲ್ಲೇ ಉಳಿದುಕೊಂಡಳು. ॥೨೧॥ ಇತ್ತ ರಮಾವ್ರತವನ್ನು ಅನುಷ್ಠಾನ ಮಾಡಿದ್ದರಿಂದ ಆ ವ್ರತ ಪ್ರಭಾವದಿಂದ ಶೋಭನನು ಮಂದರಾಚಲದ ಶಿಖರದ ಮೇಲಿರುವ ರಮ್ಯವಾದ ದೇವಪುರವನ್ನು ಸೇರಿದನು. ।೨೨॥ ಅತ್ಯಂತ ಶ್ರೇಷ್ಠವಾದ, ಅಭೇದ್ಯವಾದ, ವಿವಿಧಕಲಾಕೃತಿಗಳಿಂದ ಚಿತ್ತಾಕರ್ಷಕವಾದ, ವೈಡೂರ್ಯಮಣಿಗಳಿಂದ ಖಚಿತವಾದ ಸುವರ್ಣದ ಸ್ತಂಭಗಳಿಂದಲೂ ॥೨೩॥ ವಿವಿಧಾಕಾರದ ವಿಚಿತ್ರ ಸ್ಫಟಿಕಗಳಿಂದಲೂ ಶೋಭಿಸುತ್ತಿರುವ ಆ ಪುರದಲ್ಲಿ ಶೋಭನನು ಶ್ವೇತಛತ್ರ ಹಾಗೂ ಚಾಮರಗಳಿಂದ ಯುಕ್ತವಾದ ಸಿಂಹಾಸನದಲ್ಲಿ ಆರೂಢನಾದನು. ॥ ೨೪॥ ಕಿರೀಟ ಕರ್ಣಕುಂಡಲ, ಹಾರಕೇಯೂರಗಳಿಂದ ಅಲಂಕೃತನಾಗಿ, ಗಂಧರ್ವರಿಂದ ಸ್ತುತಿಸಲ್ಪಡುತ್ತ, ಸುಂದರಿಯರಾದ ಅಪ್ಸರಸ್ತ್ರೀಯರಿಂದ ಸೇವಿಸಲ್ಪಡುತ್ತ ಶೋಭನನು ಆ ಪುರದಲ್ಲಿ ॥ ೨೫॥ ಇನ್ನೊಬ್ಬ ದೇವೇಂದ್ರನಂತೆ ಶೋಭಿಸಿದನು. ಒಮ್ಮೆ ಮುಚುಕುಂದನ ಪುರದಲ್ಲಿರುತ್ತಿದ್ದ ಸೋಮಶರ್ಮ ಎನ್ನುವವನು ॥೨೬॥ ತೀರ್ಥಯಾತ್ರಾ ಪ್ರಸಂಗದಿಂದ ಸಂಚರಿಸುತ್ತ

ಆಸನಾದುತ್ಥಿತಃ ಶೀಘ್ರಂ ನಮಸ್ಕೃತ್ಯ ದ್ವಿಜೋತ್ತಮಮ್ ।
ಚಕಾರ ಕುಶಲಂ ಪ್ರಶ್ನಂ ಶ್ವಶುರಸ್ಯ ನೃಪಸ್ಯ ಚ ॥೨೮॥
ಕಾಂತಾಯಾಶ್ಚಂದ್ರಭಾಗಾಯಾಸ್ತಥೈವ ನಗರಸ್ಯ ಚ ।

ಸೋಮಶರ್ಮೋವಾಚ -

ಕುಶಲಂ ವರ್ತತೇ ರಾಜನ್ ಶ್ವಶುರಸ್ಯ ಗೃಹೇ ತವ ॥೨೯॥
ಚಂದ್ರಭಾಗಾ ಕುಶಲಿನೀ ಸರ್ವತಃ ಕುಶಲಂ ಪುರೇ ।
ಸ್ವವೃತ್ತಂ ಕಥ್ಯತಾಂ ರಾಜನ್ ಆಶ್ಚರ್ಯಂ ಪರಮಂ ಮಮ ॥೩೦॥
ಪುರಂ ವಿಚಿತ್ರಂ ರುಚಿರಂ ನ ದೃಷ್ಟಂ ಕೇನಚಿತ್ ಕ್ವಚಿತ್ ।
ಏತದಾಚಕ್ಷ್ವ ನೃಪತೇ ಕುತಃ ಪ್ರಾಪ್ತಮಿದಂ ತ್ವಯಾ ॥೩೧॥

ಶೋಭನ ಉವಾಚ -

ಕಾರ್ತಿಕಸ್ಯಾಸಿತೇ ಪಕ್ಷೇ ನಾಮ್ನಾ ಚೈಕಾದಶೀ ರಮಾ ।
ತಾಮುಪೋಷ್ಯ ಮಯಾ ಪ್ರಾಪ್ತಂ ದ್ವಿಜೇಂದ್ರ ಪುರಮಧ್ರುವಮ್ ॥೩೨॥
ಧ್ರುವಂ ಭವತಿ ಯೇನೈವ ತತ್ಕುರುಷ್ವ ದ್ವಿಜೋತ್ತಮ ।

ದ್ವಿಜೇಂದ್ರ ಉವಾಚ -

ಕಥಮಧ್ರುವಮೇತದ್ಧಿ ಕಥಂ ಹಿ ಭವತಿ ಧ್ರುವಮ್ ॥೩೩॥

---

ದೇವಪುರಕ್ಕೆ ಬಂದು ಅಲ್ಲಿರುವ ರಾಜನನ್ನು ಕಂಡು ಇವನು ತಮ್ಮ ರಾಜನಾದ ಮುಚುಕುಂದ ಮಹಾರಾಜನ ಅಳಿಯನೇ ಆಗಿರುವನೆಂಬುದನ್ನು ತಿಳಿದು ಅವನ ಸನಿಹಕ್ಕೆ ಹೋದನು. ॥ ೨೭॥ ಆಗ ಶೋಭನನು ಕೂಡಲೇ ತನ್ನ ಆಸನದಿಂದ ಮೇಲೆದ್ದು ಬಂದ ಬ್ರಾಹ್ಮಣನಿಗೆ ನಮಸ್ಕರಿಸಿ ಮಾವನಾದ ಮುಚುಕುಂದ ಮಹಾರಾಜನ ಕ್ಷೇಮಸಮಾಚಾರವನ್ನು ವಿಚಾರಿಸಿದನು. ॥ ೨೮॥ ಅದರಂತೆಯೇ ತನ್ನ ಪತ್ನಿಯಾಗಿದ್ದ ಚಂದ್ರಭಾಗಾ, ನಗರದ ಜನರು ಇವರೆಲ್ಲರ ಕುಶಲ ಪ್ರಶ್ನೆ ಮಾಡಲು ಸೋಮಶರ್ಮನು ಹೇಳಿದನು - ಭೋ ರಾಜನ್, ನಿಮ್ಮ ಮಾವನ ಮನೆಯಲ್ಲಿ ಸರ್ವವೂ ಕುಶಲವಿದೆ. ॥೨೯॥ ಚಂದ್ರಭಾಗಾ ಹಾಗೂ ನಗರದ ಜನ, ಪ್ರಾಣಿ ಎಲ್ಲರೂ ಕ್ಷೇಮದಿಂದ ಇದ್ದಾರೆ. ಹೇ ರಾಜನ್ ಇನ್ನು ನಿನ್ನ ವೃತ್ತಾಂತವನ್ನು ತಿಳಿಸು. ಇದೆಲ್ಲವನ್ನು ಕಂಡು ನನಗೆ ಪರಮಾಶ್ಚರ್ಯವಾಗಿದೆ. ॥೩೦॥ ಇಂಥ ವಿಚಿತ್ರವಾದ, ಮನೋಹರವಾದ ದಿವ್ಯ ನಗರವನ್ನು ಈ ಹಿಂದೆ ನಾನಾಗಲೀ ಇನ್ನಾರೇ ಆಗಲಿ ಕಂಡಿರುವದಿಲ್ಲ. ಹೇ ನೃಪತೇ, ಇದೆಲ್ಲವೂ ನಿನಗೆ ಹೇಗೆ ಪ್ರಾಪ್ತವಾಯಿತು ? ॥೩೧॥ ಆಗ ಶೋಭನನು ಹೇಳಿದನು - ಭೋ ವಿಪ್ರಶ್ರೇಷ್ಠ ಕೇಳು, ಕಾರ್ತಿಕ ಕೃಷ್ಣಪಕ್ಷದಲ್ಲಿ 'ರಮಾ' ಎಂಬ ಹೆಸರಿನ ಏಕಾದಶೀ ಬರುವದಷ್ಟೇ. ಆ ದಿನ ಮಾಡಿದ ಉಪವಾಸದ ಫಲರೂಪವಾಗಿ ಅಸ್ಥಿರವಾಗಿರುವ ಈ ಪುರವನ್ನು ಹೊಂದಿದ್ದೇನೆ. ॥೩೨॥ ಆದರೆ ಹೇ ದ್ವಿಜವರಾ, ಈ ಲೋಕವು

ತತ್ತ್ವಂ ಕಥಯ ರಾಜೇಂದ್ರ ತತ್ಕರಿಷ್ಯಾಮಿ ನಾನ್ಯಥಾ ।
ಶೋಭನ ಉವಾಚ -
ಮಯೈತದ್ವಿಹಿತಂ ವಿಪ್ರ ಶ್ರದ್ಧಾಹೀನಂ ವ್ರತೋತ್ತಮಮ್ ॥೩೪॥
ತೇನಾಹಮಧ್ರುವಂ ಮನ್ಯೇ ಧ್ರುವಂ ಭವತಿ ತಚ್ಛೃಣು ।
ಮುಚುಕುಂದಸ್ಯ ದುಹಿತಾ ಚಂದ್ರಭಾಗಾ ಸುಶೋಭನಾ ॥೩೫॥
ತಸ್ಯೈ ಕಥಯ ವೃತ್ತಾಂತಂ ಧ್ರುವಮೇತದ್ಭವಿಷ್ಯತಿ ।
ತಚ್ಛ್ರುತ್ವಾಽಥ ದ್ವಿಜವರಸ್ತಸ್ಯೈ ಸರ್ವಂ ನ್ಯವೇದಯತ್ ॥೩೬॥
ಶ್ರುತ್ವಾ ಚ ಸಾ ದ್ವಿಜವಚೋ ವಿಸ್ಮಯೋತ್ಫುಲ್ಲಲೋಚನಾ ।
ಪ್ರತ್ಯಕ್ಷಮಥವಾ ಸ್ವಪ್ನಸ್ತ್ವಯಂ ತತ್ಕಥ್ಯತೇ ದ್ವಿಜ ॥೩೭॥
ಸೋಮಶರ್ಮೋವಾಚ -
ಪ್ರತ್ಯಕ್ಷಂ ಪುತ್ರಿ ತ್ವತ್ಕಾಂತೋ ಮಯಾ ದೃಷ್ಟೋ ಮಹಾವನೇ ।
ದೇವತುಲ್ಯಮನಾಧೃಷ್ಯಂ ದೃಷ್ಟಂ ತಸ್ಯ ಪುರಂ ಮಯಾ ॥೩೮॥

---

ಸ್ಥಿರವಾಗಿರುವಂತೆ ಏನಾದರೊಂದು ಉಪಾಯವನ್ನು ಮಾಡು. ರಾಜನ ಮಾತನ್ನು ಕೇಳಿದ ಬ್ರಾಹ್ಮಣನು - ರಾಜನ್, ಅಸ್ಥಿರವಾಗಿರುವ ಇದು ಅದೆಂತು ಸ್ಥಿರವಾಗಲು ಸಾಧ್ಯ ? ॥೩೩॥ ಈ ಬಗ್ಗೆ ನೀನೇನಾದರೂ ಉಪಾಯವನ್ನು ತಿಳಿದಿದ್ದರೆ ಅದನ್ನು ನನಗೆ ತಿಳಿಸು. ಸತ್ಯವಾಗಿ ಅದರಂತೆಯೇ ನಾನು ಮಾಡುವೆನು. ಎಂದೆನಲು ಶೋಭನನು ಹೇಳಿದನು. ಹೇ ವಿಪ್ರವರ, ಶ್ರದ್ಧಾರಹಿತನಾಗಿ ನಾನು ಶ್ರೇಷ್ಠವಾದ ಈ ವ್ರತವನ್ನು ಆಚರಿಸಿದೆನು. ॥೩೪॥ ಆದ್ದರಿಂದಲೇ ಈ ಫಲವು ಅಸ್ಥಿರವಾದುದೆಂದು ತಿಳಿದಿದ್ದೇನೆ. ಈ ಫಲವು ಸುಸ್ಥಿರವಾಗುವ ಉಪಾಯವನ್ನು ತಿಳಿಸುವೆನು ಕೇಳು. ಮುಚುಕುಂದ ಮಹಾರಾಜನಿಗೆ ಸುಶೀಲೆಯಾದ ಚಂದ್ರಭಾಗಾ ಎನ್ನುವ ಮಗಳೇನಿರುವಳೋ ॥೩೫॥ ಅವಳಿಗೆ ನೀನು ಇದೆಲ್ಲ ವೃತ್ತಾಂತವನ್ನು ತಿಳಿಸು. ಆಗ ಇದು ಶಾಶ್ವತವಾಗಿ ಉಳಿಯುವುದು. ಸೋಮಶರ್ಮನು ಶೋಭನರಾಜನ ಮಾತಿನಂತೆ ತಿರುಗಿ ಬಂದು ಚಂದ್ರಭಾಗಾಳಿಗೆ ಎಲ್ಲವನ್ನೂ ನಿವೇದಿಸಿದನು. ॥೩೬॥ ದ್ವಿಜನ ಮಾತುಗಳನ್ನು ಕೇಳಿ ಅವಳು ಆಶ್ಚರ್ಯಚಕಿತಳಾದಳು. ''ಹೇ ದ್ವಿಜವರ, ಇದೇನು ಪ್ರತ್ಯಕ್ಷಘಟನೆಯೋ, ಸ್ವಪ್ನವೋ ಎಂಬುದನ್ನು ಅರಿಯದಾಗಿದ್ದೇನೆ'' ಎಂದೆನಲು ॥೩೭॥ ಸೋಮಶರ್ಮನು - ''ಹೇ ಪುತ್ರಿ, ನಾನು ಕಣ್ಣಾರೆ ಕಂಡದ್ದನ್ನೇ ಹೇಳುತ್ತಿದ್ದೇನೆ. ನಿನ್ನ ಪತಿಯನ್ನು ನಾನು ಮಹಾವನದಲ್ಲಿ ಕಂಡೆನು. ಅವನ ಪುರವು ದೇವಪುರದಂತೆ, ಅಭೇದ್ಯವಾಗಿ ನಯನಮನೋಹರವಾಗಿತ್ತು. ॥೩೮॥ ಆದರೆ ಅದು ಶಾಶ್ವತವಲ್ಲವೆಂದೂ ಮತ್ತು ಸ್ಥಿರವಾಗಿರುವಂತೆ ನೀನು ಏನಾದರೊಂದು ಉಪಾಯವನ್ನು ಮಾಡಬೇಕೆಂದೂ

ಅಧ್ರುವಂ ತೇನ ತತ್ಪ್ರೋಕ್ತಂ ಧ್ರುವಂ ಭವತಿ ತತ್ಕುರು ।
ಚಂದ್ರಭಾಗೋವಾಚ-
ತತ್ರ ಮಾಂ ನಯ ವಿಪ್ರರ್ಷೇ ಪತಿದರ್ಶನಲಾಲಸಾಮ್ ॥೩೯॥

ಆತ್ಮನೋ ವ್ರತಪುಣ್ಯೇನ ಕರಿಷ್ಯಾಮಿ ಪುರಂ ಧ್ರುವಮ್ ।
ಆವಯೋರ್ದ್ವಿಜಸಂಯೋಗೇ ಯಥಾ ಭವತಿ ತತ್ಕುರು ॥೪೦॥

ಪ್ರೋಚ್ಯತೇ ಹಿ ಮಹತ್ಪುಣ್ಯಂ ಕೃತ್ವಾಯೋಗಂ ವಿಯುಕ್ತಯಾ ।
ಇತಿ ಶ್ರುತ್ವಾ ಸಹ ತಯಾ ಸೋಮಶರ್ಮಾ ಜಗಾಮ ಹ ॥೪೧॥

ಆಶ್ರಮಂ ವಾಮದೇವಸ್ಯ ಮಂದರಾಚಲಸನ್ನಿಧೌ ।
ವಾಮದೇವೋಽಶೃಣೋತ್ಸರ್ವಂ ವೃತ್ತಾಂತಂ ಕಥಿತಂ ತಯೋಃ ॥೪೨॥

ಅಭ್ಯಷಿಂಚಚ್ಚಂದ್ರಭಾಗಾಂ ವೇದಮಂತ್ರೈರಥೋಜ್ಜ್ವಲಾಮ್ ।
ಋಷಿಮಂತ್ರಪ್ರಭಾವೇಣ ವಿಷ್ಣುವಾಸರಸೇವನಾತ್ ॥೪೩॥

ದಿವ್ಯದೇಹೋ ಬಭೂವಾಽಸೌ ದಿವ್ಯಾಂ ಗತಿಮವಾಪ ಹ ।
ಪತ್ಯುಃ ಸಮೀಪಮಗಮತ್ ಪ್ರಹರ್ಷೋತ್ಫುಲ್ಲಲೋಚನಾ ॥೪೪॥

ಸಹರ್ಷಃ ಶೋಭನೋಽತೀವ ದೃಷ್ಟ್ವಾ ಕಾಂತಾಂ ಸಮಾಗತಾಮ್ ।
ಸಮಾಹೂಯ ಸ್ವಕೇ ವಾಮೇ ಪಾರ್ಶ್ವೇ ತಾಂ ಸನ್ನ್ಯವೇಶಯತ್ ॥೪೫॥

---

ಅವನು ತಿಳಿಸಿರುವನು ಎಂದೆನಲು ಚಂದ್ರಭಾಗಾ ಹೇಳಿದಳು - ಭೋ ವಿಪ್ರೋತ್ತಮಾ, ನನ್ನ ಪತಿಯನ್ನು ಕಾಣಲು ಉತ್ಕಂಠಿತಳಾಗಿರುವ ನನ್ನನ್ನು ಕೂಡಲೇ ಆ ಪುರಕ್ಕೆ ಕರೆದೊಯ್ಯುವೆಯಾ! ॥೩೯॥ ವ್ರತಾನುಷ್ಠಾನದಿಂದ ಸಂಪಾದಿಸಿದ ನನ್ನ ಪುಣ್ಯದಿಂದ ಆ ಪುರವನ್ನು ಸ್ಥಿರವಾಗಿ ಉಳಿಯುವಂತೆ ಮಾಡುವೆನು. ಹೇ ವಿಪ್ರರ್ಷೇ, ನಮ್ಮಿಬ್ಬರ ಭೇಟಿಯಾಗುವಂತೆ ನೀನು ಅವಶ್ಯವಾಗಿ ಸಹಕರಿಸು. ॥೪೦॥ ವಿಯೋಗಿಗಳನ್ನು ಒಂದುಗೂಡಿಸುವುದರಿಂದ ಮಹಾಪುಣ್ಯವು ಪ್ರಾಪ್ತವಾಗುವದೆಂದು ಹಿರಿಯರು ಹೇಳುತ್ತಾರೆ. ಹೀಗೆ ಅವಳ ಮಾತುಗಳನ್ನು ಕೇಳಿದ ಸೋಮಶರ್ಮನು ಚಂದ್ರಭಾಗಾಳನ್ನು ತನ್ನೊಂದಿಗೆ ಕರೆದುಕೊಂಡು ॥೪೧॥ ಮಂದರಪರ್ವತದಲ್ಲಿದ್ದ ವಾಮದೇವಋಷಿಯ ಆಶ್ರಮಕ್ಕೆ ಬಂದನು. ವಾಮದೇವನು ಅವರಿಬ್ಬರೂ ಹೇಳಿದ ವೃತ್ತಾಂತವನ್ನು ಕೇಳಿ ॥೪೨॥ ನಂತರ ವೇದಮಂತ್ರಗಳಿಂದ ಚಂದ್ರಭಾಗಾದೇವಿಗೆ ಅಭಿಷೇಕ ಮಾಡಿದನು. ಋಷಿಯ ಮಂತ್ರ ಪ್ರಭಾವದಿಂದ ಮತ್ತು ಚಂದ್ರಭಾಗೆಯು ಮಾಡಿದ್ದ ಏಕಾದಶೀವ್ರತದ ಪ್ರಭಾವದಿಂದ ॥ ೪೩ ॥ ಅವಳು ದಿವ್ಯದೇಹವನ್ನು ಮತ್ತು ದಿವ್ಯಗತಿಯನ್ನು ಹೊಂದಿದಳು. ಅತ್ಯಂತ ಹರ್ಷಿತಳಾಗಿ ವಿಕಸಿತನೇತ್ರಗಳುಳ್ಳ ಅವಳು ತನ್ನ ಗಂಡನ ಸಾಮೀಪ್ಯವನ್ನು ಹೊಂದಿದಳು. ॥೪೪॥ ಅಲ್ಲಿ ಬಂದಿರುವ ’ನ್ನ ಕಾಂತೆಯನ್ನು ಕಂಡು ಶೋಭನನೂ ಅತಿ ಹರ್ಷಭರಿತನಾದನು ಮತ್ತು ಅವಳನ್ನು

ಸಾ ಪ್ರೋವಾಚ ಪ್ರಿಯಂ ಹರ್ಷಾಚ್ಚಂದ್ರಭಾಗಾ ಶುಭಂ ವಚಃ ।
ಶೃಣು ಕಾಂತ ಹಿತಂ ವಾಕ್ಯಂ ಯತ್ಪುಣ್ಯಂ ವಿದ್ಯತೇ ಮಯಿ ॥೪೬॥

ಅಷ್ಟವರ್ಷಾಧಿಕಾ ಜಾತಾ ಯದಾಹಂ ಪಿತೃವೇಶ್ಮನಿ ।
ಮಯಾ ತತಃ ಪ್ರಭೃತಿ ಚ ಕೃತಮೇಕಾದಶೀವ್ರತಮ್ ॥೪೭॥

ಯಥೋಕ್ತವಿಧಿಸಂಯುಕ್ತಂ ಶ್ರದ್ಧಾಯುಕ್ತೇನ ಚೇತಸಾ ।
ತೇನ ಪುಣ್ಯಪ್ರಭಾವೇಣ ಭವಿಷ್ಯತಿ ಪುರಂ ಧ್ರುವಮ್ ॥೪೮॥

ಸರ್ವಂ ಕಾಮಸಮೃದ್ಧಂ ಚ ಯಾವದಾಭೂತಸಂಪ್ಲವಮ್ ।
ಏವಂ ಸಾ ನೃಪಶಾರ್ದೂಲ ರಮತೇ ಪತಿನಾ ಸಹ ॥೪೯॥

ದಿವ್ಯಭೋಗಾ ದಿವ್ಯರೂಪಾ ದಿವ್ಯಾಭರಣಭೂಷಿತಾ ।
ಶೋಭನೋಽಪಿ ತಯಾ ಸಾರ್ಧಂ ರಮತೇ ದಿವ್ಯವಿಗ್ರಹಃ ॥೫೦॥

ರಮಾವ್ರತಪ್ರಭಾವೇಣ ಮಂದರಾಚಲಸಾನುನಿ ।
ಚಿಂತಾಮಣಿಸಮಾ ಹ್ಯೇಷಾ ಕಾಮಧೇನುಸಮಾಽಥವಾ ॥೫೧॥

ರಮಾಭಿಧಾನಾ ನೃಪತೇ ತವಾಗ್ರೇ ಕಥಿತಾ ಮಯಾ ।
ಈದೃಶಂ ಚ ವ್ರತಂ ರಾಜನ್ ಯೇ ಕುರ್ವಂತಿ ನರೋತ್ತಮಾಃ ॥೫೨॥

---

ಕರೆದು ಸಿಂಹಾಸನದಲ್ಲಿ ತನ್ನ ಎಡಭಾಗದಲ್ಲಿ ಕೂಡಿಸಿಕೊಂಡನು. ॥ ೪೫॥ ಆಗ ಚಂದ್ರಭಾಗಾ ಮುದದಿಂದ ತನ್ನ ಪ್ರಿಯನಿಗೆ ಹೇಳಿದಳು- ಹೇ ಕಾಂತ, ನಾನು ಹೇಳುವ ಹಿತನುಡಿಗಳನ್ನು ಕೇಳಿರಿ. ॥೪೬॥ ನಾನು ಎಂಟು ವರ್ಷದವಳಾದಾಗಿನಿಂದ ನನ್ನ ತಂದೆಯ ಮನೆಯಲ್ಲಿ ತಪ್ಪದೇ ಏಕಾದಶೀವ್ರತವನ್ನು ಆಚರಿಸಿದ್ದೇನೆ. ॥೪೭॥ ಶ್ರದ್ಧೆಯಿಂದ ಹಾಗೂ ವಿಧಿಪೂರ್ವಕವಾಗಿ ಆಚರಿಸಿದ ಏಕಾದಶೀವ್ರತದ ಪುಣ್ಯಪ್ರಭಾವದಿಂದ ಈ ಪುರವು ಸ್ಥಿರವಾಗಿ ಉಳಿಯುವುದು ನಿಶ್ಚಿತ. ॥ ೪೮॥ ಪ್ರಳಯಕಾಲದ ವರೆಗೆ ಇದು ಸಕಲ ಕಾಮಗಳಿಂದ ಸಮೃದ್ಧವಾಗಿ ಇರುವುದು. ಹೇ ಧರ್ಮರಾಜಾ, ಈ ಪ್ರಕಾರ ಸ್ಥಿರವಾದ ಆ ಪುರದಲ್ಲಿ ಚಂದ್ರಭಾಗಾ ತನ್ನ ಪತಿಯೊಂದಿಗೆ ವಿಹರಿಸುತ್ತ ಮುದದಿಂದ ಇದ್ದಳು. ॥ ೪೯॥ ದಿವ್ಯರೂಪಧಾರಣ ಮಾಡಿ, ದಿವ್ಯಾಭರಣಗಳಿಂದ ಅಲಂಕೃತಳಾದ ಅವಳು ದಿವ್ಯಭೋಗಗಳನ್ನು ಭೋಗಿಸುತ್ತ ಪತಿಯೊಂದಿಗೆ ಮುದದಿಂದ ಕ್ರೀಡಿಸಿದಳು. ದಿವ್ಯದೇಹವನ್ನು ಹೊಂದಿದ ಶೋಭನನೂ ಕೂಡ ಅವಳೊಂದಿಗೆ ರಮಾವ್ರತದ ಪ್ರಭಾವದಿಂದ ಮಂದರಾಚಲದ ಶಿಖರದಲ್ಲಿರುವ ಪುರದಲ್ಲಿ ನಿತ್ಯದಲ್ಲಿ ರಮಿಸುತ್ತ ಸುಖದಿಂದ ಇದ್ದನು. ಹೇ ರಾಜಾ, ಚಿಂತಾಮಣಿ, ಅಥವಾ ಕಾಮಧೇನುವಿಗ ಸಮಾನವಾಗಿರುವ ॥೫೦॥೫೧॥ ಈ ಏಕಾದಶಿಯ ಮಹಾತ್ಮೆಯನ್ನು ನಿನ್ನೆದುರು ಹೇಳಿದ್ದೇನೆ. ಹೇ ರಾಜನ್, ಇಂಥ

ಬ್ರಹ್ಮಹತ್ಯಾದಿಪಾಪಾನಿ ನಾಶಂ ಯಾಂತಿ ನ ಸಂಶಯಃ ।
ಏಕಾದಶೀವ್ರತಾನಾಂ ಚ ಪಕ್ಷಯೋರುಭಯೋರಪಿ ॥೫೩॥

ಯಥಾ ಶುಕ್ಲಾ ತಥಾ ಕೃಷ್ಣಾ ತಿಥಿಭೇದಂ ನ ಕಾರಯೇತ್ ।
ಸೇವಿತ್ವೈಕಾದಶೀ ನೃಣಾಂ ಭುಕ್ತಿಮುಕ್ತಿಪ್ರದಾಯಿನೀ ॥೫೪॥

ಧೇನುಃ ಕೃಷ್ಣಾ ತಥಾ ಶ್ವೇತಾ ಉಭಯೋಃ ಸದೃಶಂ ಪಯಃ ।
ತಥೈವ ತುಲ್ಯಫಲದಂ ಸ್ಮೃತಮೇಕಾದಶೀವ್ರತಮ್ ॥೫೫॥

ಏಕಾದಶೀ ವ್ರತಾನಾಂ ಚ ಮಾಹಾತ್ಮ್ಯಂ ಶೃಣುಯಾನ್ನರಃ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕೇ ಮಹೀಯತೇ ॥೫೬॥

॥ ಇತಿ ಶ್ರೀಬ್ರಹ್ಮವೈವರ್ತಪುರಾಣೇ ಕಾರ್ತಿಕಕೃಷ್ಣೇ ರಮ್ಯೈಕಾದಶೀವ್ರತಮಾಹಾತ್ಮ್ಯಂ ಸಂಪೂರ್ಣಮ್ ॥

---

ಮಹಿಮೋಪೇತವಾದ ವ್ರತವನ್ನು ಯಾರು ಆಚರಿಸುವರೋ ॥೫೨॥ ಅವರು ಬ್ರಹ್ಮಹತ್ಯಾದಿ ಪಾಪಗಳನ್ನು ಮಾಡಿದ್ದರೂ ಅವೆಲ್ಲ ನಿಶ್ಚಿತವಾಗಿ ನಾಶವಾಗಿ ಹೋಗುವವು. ಉಭಯಪಕ್ಷಗಳಲ್ಲಿ ಬರುವ ಏಕಾದಶೀವ್ರತಗಳಲ್ಲಿ ॥೫೩॥ ಇದು ಶುಕ್ಲಪಕ್ಷದ ಏಕಾದಶೀ, ಇದು ಕೃಷ್ಣಪಕ್ಷದ ಏಕಾದಶೀ ಎಂದು ತಿಥಿಭೇದವನ್ನೆಣಿಸಬಾರದು. ಯಾವುದೇ ಏಕಾದಶೀ ಇದ್ದರೂ ಅದನ್ನು ಶ್ರದ್ಧೆಯಿಂದ ಸೇವಿಸಿದರೆ ಭುಕ್ತಿಮುಕ್ತಿಗಳು ಖಂಡಿತವಾಗಿ ದೊರೆಯುವವು. ॥೫೪॥ ಗೋವು ಕಪ್ಪಾಗಿದ್ದರೇನು ? ಬಿಳಿಯಾಗಿದ್ದರೇನು ? ಎರಡೂ ಗೋವುಗಳ ಹಾಲಂತೂ ಒಂದೇ ಆಗಿರುವುದಷ್ಟೇ ! ಅದರಂತೆಯೇ ಉಭಯಪಕ್ಷದ ಏಕಾದಶಿಗಳೂ ಸಮಾನ ಫಲವನ್ನು ಕೊಡಲು ಸಮರ್ಥವಾಗಿರುತ್ತವೆ. ॥೫೫॥ ಏಕಾದಶೀವ್ರತಗಳ ಮಹಾತ್ಮೆಯನ್ನು ಎಲ್ಲರೂ ಕೇಳಬೇಕು. ಅವರು ಶ್ರವಣಮಾತ್ರದಿಂದ ಪಾಪಮುಕ್ತರಾಗಿ ವಿಷ್ಣುಲೋಕವನ್ನು ಪಡೆಯುವರು. ॥೫೬॥

**॥ ಇಲ್ಲಿಗೆ ಶ್ರೀಬ್ರಹ್ಮವೈವರ್ತಪುರಾಣದಲ್ಲಿಯ ಕಾರ್ತಿಕ ಕೃಷ್ಣಪಕ್ಷದ ರಮ್ಯೈಕಾದಶೀವ್ರತದ ಮಹಾತ್ಮೆಯು ಸಮಾಪ್ತವಾಯಿತು. ॥**

॥ ಶ್ರೀಕೃಷ್ಣಾರ್ಪಣಮಸ್ತು ॥

# ಕಾರ್ತಿಕ ಶುಕ್ಲೈಕಾದಶೀವ್ರತಕಥಾ

ಬ್ರಹ್ಮೋವಾಚ

ಪ್ರಬೋಧಿನ್ಯಾಶ್ಚ ಮಾಹಾತ್ಮ್ಯಂ ಪಾಪಘ್ನಂ ಪುಣ್ಯವರ್ಧನಮ್ ।
ಮುಕ್ತಿಪ್ರದಂ ಸುಬುದ್ಧೀನಾಂ ಶೃಣುಷ್ವ ಮುನಿಸತ್ತಮ ॥೧॥

ತಾವದ್ಗರ್ಜಂತಿ ವಿಪ್ರೇಂದ್ರ ಗಂಗಾ ಭಾಗೀರಥೀ ಕ್ಷಿತೌ ।
ಯಾವನ್ನಾಯಾತಿ ಪಾಪಘ್ನೀ ಕಾರ್ತಿಕೇ ಹರಿಬೋಧಿನೀ ॥೨॥

ತಾವದ್ಗರ್ಜಂತಿ ತೀರ್ಥಾನಿ ಹ್ಯಾಸಮುದ್ರಂ ಸರಾಂಸಿ ಚ ।
ಯಾವತ್ಪ್ರಬೋಧಿನೀ ವಿಷ್ಣೋಸ್ತಿಥಿರ್ನಾಯಾತಿ ಕಾರ್ತಿಕೀ ॥೩॥

ಅಶ್ವಮೇಧಸಹಸ್ರಾಣಿ ರಾಜಸೂಯಶತಾನಿ ಚ ।
ಏಕೇನೈವೋಪವಾಸೇನ ಪ್ರಬೋಧಿನ್ಯಾಂ ಲಭೇನ್ನರಃ ॥೪॥

ನಾರದ ಉವಾಚ

ಏಕಭುಕ್ತೇ ಚ ಕಿಂ ಪುಣ್ಯಂ ಕಿಂ ಪುಣ್ಯಂ ನಕ್ತಭೋಜನೇ।
ಉಪವಾಸೇನ ಕಿಂ ಪುಣ್ಯ ತನ್ಮೇ ಬ್ರೂಹಿ ಪಿತಾಮಹ ॥೫॥

---

ಚತುರ್ಮುಖ ಬ್ರಹ್ಮದೇವರು ನಾರದರನ್ನು ಕುರಿತು - ಹೇ ಮುನಿಶ್ರೇಷ್ಠ ನಾರದಾ, ಪಾಪನಾಶಕವಾದ, ಪುಣ್ಯವರ್ಧಕವಾದ ಹಾಗೂ ಸುಜ್ಞಾನಿಗಳಿಗೆ ಮುಕ್ತಿಪ್ರದವಾದ ಪ್ರಬೋಧಿನಿಯ ಮಹಾತ್ಮೆಯನ್ನು ತಿಳಿಸುವೆನು ಕೇಳು. ॥೧॥ ಹೇ ವಿಪ್ರೇಂದ್ರ, ಕಾರ್ತಿಕ ಮಾಸದಲ್ಲಿ ಪಾಪಪರಿಹಾರಕವಾದ ಪ್ರಬೋಧಿನೀ ತಿಥಿಯು ಬರುವವರೆಗೆ ಮಾತ್ರ ಪೃಥ್ವಿಯ ಮೇಲೆ ಗಂಗಾ ಭಾಗೀರಥ್ಯಾದಿ ನದಿಗಳು ತಮ್ಮ ಶ್ರೇಷ್ಠತೆಯಿಂದ ಮೆರೆಯುತ್ತವೆ. ॥೨॥ ಅದರಂತೆ ಸಮುದ್ರಪರ್ಯಂತವಿರುವ ಸಕಲತೀರ್ಥಗಳೂ ಕೂಡ ವಿಷ್ಣುತಿಥಿಯಾದ ಕಾರ್ತಿಕ ಪ್ರಬೋಧಿನಿಯು ಬರುವ ವರೆಗೆ ಮಾತ್ರ ಆಢ್ಯತೆಯಿಂದ ಮೆರೆಯುತ್ತವೆ. ॥೩॥ ಸಹಸ್ರ ಅಶ್ವಮೇಧಗಳಿಂದ, ನೂರಾರು ರಾಜಸೂಯಗಳಿಂದ ಬರುವ ಫಲವೆಲ್ಲ ಪ್ರಬೋಧಿನೀ ಏಕಾದಶೀ ಒಂದು ದಿನ ಉಪವಾಸ ಮಾಡುವಮಾತ್ರದಿಂದ ದೊರೆಯುವದು. ॥೪॥ ಇದನ್ನು ಕೇಳಿ ನಾರದರು - "ಪೂಜ್ಯ ಪಿತಾಮಹರೇ, ಏಕಭುಕ್ತದಿಂದ ಬರುವ ಪುಣ್ಯವೆಷ್ಟು, ನಕ್ತಭೋಜನದಿಂದ ಬರುವ ಪುಣ್ಯವೆಷ್ಟು ಹಾಗೂ ಉಪವಾಸದಿಂದ ಬರುವ ಪುಣ್ಯವೆಷ್ಟು ಇದೆಲ್ಲವನ್ನು ತಿಳಿಸಿರಿ" ಎಂದು ಪ್ರಾರ್ಥಿಸಲು ॥೫॥ ಬ್ರಹ್ಮದೇವರು ಹೇಳಿದರು - ಹೇ ನಾರದಾ, ಏಕಭುಕ್ತದಿಂದ ಒಂದು ಜನ್ಮದ ಪಾಪಗಳು, ನಕ್ತಭೋಜನದಿಂದ ಎರಡು ಜನ್ಮದಲ್ಲಿಯ

ಬ್ರಹ್ಮೋವಾಚ

ಏಕಭುಕ್ತೇನ ಜನ್ಮೋತ್ಥಂ ನಕ್ತೇನ ದ್ವಿಜನುರ್ಭವಮ್ ।
ಸಪ್ತಜನ್ಮಭವಂ ಪಾಪಮುಪವಾಸೇನ ನಶ್ಯತಿ ॥೬॥

ಯದ್ದುರ್ಲಭಂ ಯದಪ್ರಾಪ್ತಂ ತ್ರೈಲೋಕ್ಯೇ ನ ತು ಗೋಚರಮ್ ।
ಯದ್ಯಪ್ಯಪ್ರಾರ್ಥಿತಂ ಪುತ್ರ ದದಾತಿ ಹರಿಬೋಧಿನೀ ॥೭॥

ಮೇರುಮಂದಿರಮಾತ್ರಾಣಿ ಪಾಪಾನ್ಯುಗ್ರಾಣಿ ಯಾನಿ ತು ।
ಏಕೇನೈವೋಪವಾಸೇನ ದಹತೇ ಪಾಪಹಾರಿಣೀ ॥೮॥

ಪೂರ್ವಜನ್ಮಸಹಸ್ರೈಸ್ತು ಯದ್ದುಷ್ಕರ್ಮ ಉಪಾರ್ಜಿತಮ್ ।
ಜಾಗರೇಣ ಪ್ರಬೋಧಿನ್ಯಾಂ ದಹತೇ ತೂಲರಾಶಿವತ್ ॥೯॥

ಉಪವಾಸಂ ಪ್ರಬೋಧಿನ್ಯಾಂ ಯಃ ಕರೋತಿ ಸ್ವಭಾವತಃ ।
ವಿಧಿವನ್ಮುನಿಶಾರ್ದೂಲ ಯಥೋಕ್ತಂ ಲಭತೇ ಫಲಮ್ ॥೧೦॥

ಯಥೋಕ್ತಂ ಸುಕೃತಂ ಯಸ್ತು ವಿಧಿವತ್ಕುರುತೇ ನರಃ ।
ಸ್ವಲ್ಪಂ ಮುನಿವರಶ್ರೇಷ್ಠ ಮೇರುತುಲ್ಯಂ ಭವೇಚ್ಚ ತತ್ ॥೧೧॥

ವಿಧಿಹೀನಂ ತು ಯಃ ಕುರ್ಯಾತ್ಸುಕೃತಂ ಮೇರುಮಾತ್ರಕಮ್ ।
ಅಣುಮಾತ್ರಂ ನ ಚಾಪ್ನೋತಿ ಫಲಂ ಧರ್ಮಸ್ಯ ನಾರದ ॥೧೨॥

---

ಪಾಪಗಳು ಹಾಗೂ ಉಪವಾಸದಿಂದ ಏಳುಜನ್ಮಗಳಲ್ಲಿಯ ಪಾಪವು ನಾಶವಾಗುತ್ತವೆ. ॥೬॥ ಅಯ್ಯಾ ಪುತ್ರನೇ, ಯಾವದು ದುರ್ಲಭವಾಗಿದೆಯೋ ಅಥವಾ ಅಪ್ರಾಪ್ತವಾಗಿರುವದೋ ಅಥವಾ ಯಾವುದು ತ್ರಿಲೋಕಗಳಲ್ಲಿ ಕಾಣಸಿಗುವದೇ ಇಲ್ಲವೋ ಅದನ್ನು ಮತ್ತು ಅಪ್ರಾರ್ಥಿತವಾದುದನ್ನು ಈ ಹರಿಬೋಧಿನಿಯು ಕೊಡಲು ಸಮರ್ಥವಾಗಿದೆ. ॥೭॥ ಪಾಪಪರಿಹಾರಕವಾದ ಈ ಏಕಾದಶಿಯು ಮೇರುಪರ್ವತ, ಮಂದರಪರ್ವತಗಳಷ್ಟು ಎತ್ತರವಾಗಿ ಸಂಚಿತವಾಗಿರುವ ನಮ್ಮ ಉಗ್ರವಾದ ಪಾಪಗಳನ್ನೆಲ್ಲ ಆ ದಿನ ಮಾಡುವ ಉಪವಾಸ ಮಾತ್ರದಿಂದ ಸುಟ್ಟುಹಾಕುವದು. ॥೮॥ ಹಿಂದಿನ ಸಹಸ್ರಜನ್ಮಗಳಲ್ಲಿ ಸಂಚಿತವಾದ ದುಷ್ಕರ್ಮಗಳನ್ನು ಪ್ರಬೋಧಿನೀ ಏಕಾದಶಿಯ ರಾತ್ರಿ ಮಾಡುವ ಜಾಗರಣೆಯು ಹತ್ತಿಯ ರಾಶಿಯಂತೆ ಸುಟ್ಟುಬಿಡುವದು. ॥೯॥ ಹೇ ಮುನಿವರ, ಪ್ರಬೋಧಿನೀ ಏಕಾದಶಿಯ ದಿನ ಯಾವನು ಸ್ವೇಚ್ಛೆಯಿಂದ ಯಥಾವಿಧಿ ಉಪವಾಸ ಮಾಡುವನೋ ಅವನು ಶಾಸ್ತ್ರೋಕ್ತವಾದ ಫಲವನ್ನು ನಿಶ್ಚಿತವಾಗಿ ಪಡೆಯುವನು. ॥೧೦॥ ಅಂದಿನ ದಿನ ವಿಧಿವತ್ ಮಾಡಿದ ಅಲ್ಪಪುಣ್ಯ ಕರ್ಮವೂ ಮೇರುಪರ್ವತದಷ್ಟು ವರ್ಧಿಸುವದು. ॥೧೧॥ ಹೇ ನಾರದಾ, ಇನ್ನು ವಿಧಿಹೀನನಾಗಿ ಮೇರುಪರ್ವತದಷ್ಟು ಸುಕೃತ ಮಾಡಿದರೂ ಅದಕ್ಕೆ ಅಣುಮಾತ್ರವೂ ಫಲವಿಲ್ಲ. ॥೧೨॥

ಸಂಧ್ಯಾಹೀನೇ ವ್ರತಭ್ರಷ್ಟೇ ನಾಸ್ತಿಕೇ ವೇದನಿಂದಕೇ ।
ನೈತೇಷಾಂ ತಿಷ್ಠತೇ ದೇಹೇ ಧರ್ಮಶಾಸ್ತ್ರವಿದೂಷಕೇ ॥೧೩॥

ಪರದಾರರತೇ ಮೂರ್ಖೇ ಕೃತಘ್ನೇ ಬಂಧಕೇ ತಥಾ ।
ಧರ್ಮೋ ನ ತಿಷ್ಠತಿ ದೇಹೇ ಏತೇಷಾಮಪಿ ದೇಹಿನಾಮ್ ॥೧೪॥

ಬ್ರಾಹ್ಮಣೋ ವಾಪಿ ಶೂದ್ರೋ ವಾ ಸೇವತೇ ಪರಯೋಷಿತಮ್ ।
ಬ್ರಾಹ್ಮಣೀಂ ಚ ವಿಶೇಷೇಣ ಚಾಂಡಾಲಸದೃಶಾವುಭೌ ॥೧೫॥

ಸಭರ್ತೃಕಾಂ ವಾ ವಿಧವಾಂ ಬ್ರಾಹ್ಮಣೋ ಬ್ರಾಹ್ಮಣೀಂ ಯದಿ ।
ಸೇವತೇ ಮುನಿಶಾರ್ದೂಲ ಸಾನ್ವಯೋ ಯಾತಿ ಸಂಕ್ಷಯಂ ॥೧೬॥

ಪರದಾರಾಭಿಗಮನಂ ಕುರುತೇ ಯೋ ದ್ವಿಜಾಧಮಃ ।
ಸಂತತಿರ್ನ ಭವೇತ್ತಸ್ಯ ಫಲಂ ಜನ್ಮಾರ್ಜಿತಂ ನ ಹಿ ॥೧೭॥

ಗುರುಣಾ ಸಹ ವಿಪ್ರೈಶ್ಚ ಯೋಽಹಂಕಾರೇಣ ವರ್ತತೇ ।
ಸುಕೃತಂ ನಶ್ಯತೇ ಶೀಘ್ರಂ ಧನಂ ನಾಪ್ನೋತಿ ಸಂತತಿಮ್ ॥೧೮॥

ಆಚಾರಭ್ರಷ್ಟದೇಹಾನಾಂ ವೃಷಲೀಗಾಮಿನಾಂ ತಥಾ ।
ದುರ್ಜನಂ ಸೇವಮಾನಾನಾಂ ಧರ್ಮಸ್ತೇಷಾಂ ಪರಾಙ್ಮುಖಃ ॥೧೯॥

---

ಸಂಧ್ಯಾಹೀನನಾದವನು, ವ್ರತಭ್ರಷ್ಟನು, ನಾಸ್ತಿಕನು ವೇದನಿಂದಕನು, ಧರ್ಮಶಾಸ್ತ್ರದೂಷಕನು. ॥೧೩॥ ಪರಸ್ತ್ರೀರತನು, ಮೂರ್ಖನು, ಕೃತಘ್ನನು ಹಾಗೂ ಬಂಧಕ ಇವರೆಲ್ಲರ ದೇಹದಲ್ಲಿ ಧರ್ಮವು ನಿಲ್ಲುವದಿಲ್ಲ. ॥೧೪॥ ಬ್ರಾಹ್ಮಣನಾಗಲೀ, ಶೂದ್ರನಾದಲೀ ಪರಪತ್ನಿಯಲ್ಲಿ ಆಸಕ್ತನಾದರೆ ಅದರಲ್ಲೂ ಬ್ರಾಹ್ಮಣಸ್ತ್ರೀಯನ್ನು ಕಾಮಿಸಿದರೆ ಅವರಿಬ್ಬರೂ ವರ್ಣಭ್ರಷ್ಟರಾಗಿ ಚಾಂಡಾಲರಂತಾಗುವರು. ॥೧೫॥ ಬ್ರಾಹ್ಮಣನು ಗಂಡನಿರುವ ಪರಬ್ರಾಹ್ಮಣಸ್ತ್ರೀ ಅಥವಾ ಗಂಡನಿರದ ಬ್ರಾಹ್ಮಣಸ್ತ್ರೀಯೊಂದಿಗೆ ಸಂಗಮಾಡಿದರೆ ಆ ಬ್ರಾಹ್ಮಣನು ತನ್ನ ವಂಶಸಮೇತ ನಾಶವಾಗುವನು. ॥೧೬॥ ಪರಸ್ತ್ರೀಗಮನಮಾಡುವ ದ್ವಿಜಾಧಮನು ಸಂತತಿ ಹೀನನಾಗುವನಲ್ಲದೇ ಜನ್ಮಾರ್ಜಿತ ಪುಣ್ಯವನ್ನೆಲ್ಲ ಕಳೆದುಕೊಳ್ಳುವನು. ॥೧೭॥ ಯಾವನು ತನ್ನ ಗುರುವಿನೊಂದಿಗೆ ಮತ್ತು ಬ್ರಾಹ್ಮಣರೊಂದಿಗೆ ಅಹಂಕಾರದಿಂದ ವರ್ತಿಸುವನೋ ಅವನ ಸುಕೃತವೆಲ್ಲ ನಾಶವಾಗುವದು ಮತ್ತು ಅವನೆಂದಿಗೂ ಸಂತತಿ ಹಾಗೂ ಧನವನ್ನು ಪಡೆಯುವದಿಲ್ಲ. ॥೧೮॥ ಆಚಾರಭ್ರಷ್ಟರಾಗಿರುವವರು ಚಾಂಡಾಲಸ್ತ್ರೀಗಮನ ಮಾಡುವವರು ಹಾಗೂ ದುರ್ಜನರನ್ನು ಸೇವಿಸುವವರು ಇವರೆಲ್ಲರಿಂದ ಧರ್ಮವು ದೂರವಿರುವದು. ॥೧೯॥ ಪತಿತರಾದವರ ಮನೆಗೆ ಹೋಗುವವರು ಹಾಗೂ ಅವರೊಂದಿಗೆ ಸಂಗಮಾಡುವವರೆಲ್ಲರೂ

ಪತಿತ್ಯೈಃ ಸಹ ಸಂಗಂ ಚ ತದ್ಗೃಹೇ ಗಮನಂ ತಥಾ ।
ಯೇ ಕುರ್ವಂತಿ ನೃಪಶ್ರೇಷ್ಠ ತೇ ಗಚ್ಛಂತಿ ಯಮಾಲಯೇ ॥೨೦॥

ಧರ್ಮೋ ನಷ್ಟೋ ನೃಣಾಂ ಯೇಷಾಂ ಸ್ವಾಗತಾಸನಭೋಜನ್ಯೈಃ ।
ತೇಷಾಂ ವೈ ನಶ್ಯತೇ ವತ್ಸ ಕೀರ್ತಿರಾಯುಃ ಪ್ರಜಾಃ ಸುಖಮ್ ॥೨೧॥

ಸಾಧೂನಾಮಪಮಾನಂ ತು ಯೇ ಕುರ್ವಂತಿ ನರಾಧಮಾಃ ।
ತ್ರಿವರ್ಗಫಲಹೀನಾಸ್ತೇ ದಹ್ಯಂತೇ ನರಕಾಗ್ನಿನಾ ॥೨೨॥

ಕೃತ್ವಾವಮಾನಂ ಸಾಧೂನಾಂ ಯೇ ಹೃಷ್ಯಂತಿ ನರಾಧಮಾಃ ।
ವಾರಯಂತಿ ನ ಯೇ ಮೂಢಾಸ್ತೇ ಪಶ್ಯಂತಿ ಕುಲಕ್ಷಯಮ್ ॥೨೩॥

ಆಚಾರಭ್ರಷ್ಟದೇಹಸ್ಯ ಪಿಶುನಸ್ಯ ಶಠಸ್ಯ ಚ ।
ದದತೋ ಜುಹ್ವತೋ ವಾಪಿ ಗತಿಸ್ತಸ್ಯ ನ ವಿದ್ಯತೇ ॥೨೪॥

ತಸ್ಮಾನ್ನ ತ್ವಾಚರೇತ್ಕಿಂಚಿದಶುಭಂ ಲೋಕಗರ್ಹಿತಮ್ ।
ಸದಾಚಾರವತಾ ಭಾವ್ಯಂ ಯಥಾ ಧರ್ಮೋ ನ ನಶ್ಯತಿ ॥೨೫॥

ಯೇ ಧ್ಯಾಯಂತಿ ಮನೋವೃತ್ತ್ಯಾ ಕರಿಷ್ಯಾಮಃ ಪ್ರಬೋಧಿನೀಮ್ ।
ತೇಷಾಂ ವಿಲೀಯತೇ ಪಾಪಂ ಪೂರ್ವಜನ್ಮಶತೋದ್ಭವಮ್ ॥೨೬॥

---

ಯಮಸದನವನ್ನು ಸೇರುವರು. ॥೨೦॥ ಹೇ ವತ್ಸಾ, ಸ್ವಾಗತಮಾಡುವಾಗ, ಆಸನಕೊಡುವಾಗ ಹಾಗೂ ಬ್ರಾಹ್ಮಣಭೋಜನಮಾಡಿಸುವಾಗ ಯಾರು ವಿಧಿ ಹಾಗೂ ಧರ್ಮಮೀರಿ ನಡೆಯುವರೋ ಅಂಥವರ ಕೀರ್ತಿ, ಆಯುಷ್ಯ, ಸಂತತಿಸುಖಗಳೆಲ್ಲ ನಷ್ಟವಾದಂತೆಯೇ. ॥೨೧॥ ಸಜ್ಜನರನ್ನು ಅವಮಾನಿಸುವ ನರಾಧಮರು ಇಹದಲ್ಲಿ ಧರ್ಮ, ಅರ್ಥ ಹಾಗೂ ಕಾಮಗಳಿಂದ ರಹಿತರಾಗಿ ಪರತ್ರ ನರಕಾಗ್ನಿಯಿಂದ ಸುಡಲ್ಪಡುವರು. ॥೨೨॥ ಸಜ್ಜನರಿಗೆ ಅವಮಾನವನ್ನು ಮಾಡಿ ಸಂತೋಷಪಡುವ ನರಾಧಮರು ಮತ್ತು ಸಜ್ಜನರಿಗೆ ಅವಮಾನವಾಗುತ್ತಿರುವದನ್ನು ನಿವಾರಿಸದ ಮೂಢರು, ತಮ್ಮ ಕುಲನಾಶಕ್ಕೆ ಕಾರಣರಾಗುತ್ತಾರೆ. ॥೨೩॥ ಆಚಾರ ಭ್ರಷ್ಟನಾದವನು, ಚಾಡೀಹೇಳುವವನು, ಹಾಗೂ ಶಠನು ಏನೇ ದಾನಮಾಡಿದರೂ ಅಥವಾ ಯಜ್ಞಗಳನ್ನು ಮಾಡಿದರೂ ಅವರಿಗೆ ಸದ್ಗತಿ ಎಂಬುದಿಲ್ಲ. ॥೨೪॥ ಆದ್ದರಿಂದ ಲೋಕನಿಂದಿತವಾದ, ಶಾಸ್ತ್ರವಿರುದ್ಧವಾದ ಯಾವ ಅಶುಭಕರ್ಮವನ್ನೂ ಆಚರಿಸಕೂಡದು ಮತ್ತು ಧರ್ಮನಾಶವಾಗದಂತೆ ಸದಾ ಸದಾಚಾರಿಯಾಗಿರಬೇಕು. ॥೨೫॥ ಪ್ರಬೋಧಿನೀ ವ್ರತವನ್ನು ಆಚರಿಸುವುದಾಗಿ ಸಂಕಲ್ಪಮಾಡಿದರೂ ಕೂಡ ಅಂಥವರ ೧೦೦ ಪೂರ್ವಜನ್ಮಗಳ ಪಾಪಗಳು ನಾಶವಾಗುತ್ತವೆ. ॥೨೬॥ ಮತ್ತು ಪ್ರಬೋಧಿನಿಯ ರಾತ್ರಿ ಜಾಗರಣೆ ಮಾಡುವವರ

ಸಮತೀತಂ ಭವಿಷ್ಯಂ ಚ ವರ್ತಮಾನಂ ಕುಲಾಯುತಮ್ ।
ವಿಷ್ಣುಲೋಕಂ ನಯತ್ಯಾಶು ಪ್ರಬೋಧಿನ್ಯಾಂ ತು ಜಾಗರೇ ॥೨೭॥

ವಸಂತಿ ಪಿತರೋ ಹೃಷ್ಟಾ ವಿಷ್ಣುಲೋಕೇಽತ್ಯಲಂಕೃತಾಃ ।
ವಿಮುಕ್ತಾ ನಾರಕೈರ್ದುಃಖೈಃ ಪೂರ್ವಕರ್ಮಸಮುದ್ಭವೈಃ ॥೨೮॥

ಕೃತ್ವಾ ತು ಪಾತಕಂ ಘೋರಂ ಬ್ರಹ್ಮಹತ್ಯಾದಿಕಂ ನರಃ ।
ಕೃತ್ವಾ ತು ಜಾಗರಂ ವಿಷ್ಣೋರ್ಧೌತಪಾಪೋ ಭವೇನ್ಮುನೇ ॥೨೯॥

ದುಷ್ಪ್ರಾಪ್ಯಂ ಯತ್ಫಲಂ ರಮ್ಯೈರಶ್ವಮೇಧಾದಿಭಿರ್ಮಖೈಃ ।
ಪ್ರಾಪ್ಯತೇ ತತ್ಸುಖೇನೈವ ಪ್ರಬೋಧಿನ್ಯಾಂ ತು ಜಾಗರೇ ॥೩೦॥

ಆಪ್ಲುತ್ಯ ಸರ್ವತೀರ್ಥೇಷು ದತ್ವಾ ಗಾಃ ಕಾಂಚನಂ ಮಹೀಮ್ ।
ನ ತತ್ಫಲಮವಾಪ್ನೋತಿ ಯತ್ಕೃತ್ವಾ ಜಾಗರಂ ಹರೇಃ ॥೩೧॥

ಜಾತಃ ಸ ಏಕಃ ಸುಕೃತೀ ಕುಲಂ ತೇನೈವ ಪಾವಿತಮ್ ।
ಕಾರ್ತಿಕೇ ಮುನಿಶಾರ್ದೂಲ ಕೃತಾ ಯೇನ ಪ್ರಬೋಧಿನೀ ॥೩೨॥

---

ಹಿಂದಿನ, ಈಗಿನ ಮತ್ತು ಮುಂದಿನ ಹತ್ತು ಸಹಸ್ರ ಕುಲಗಳ ಜನರು (ಪೀಳಿ ಅಥವಾ ತಲೆಮಾರಿನವರು) ವಿಷ್ಣುಲೋಕವನ್ನು ಸೇರುವರು. ॥೨೭॥ ಅವರ ಪಿತೃಗಳು ಪೂರ್ವಕರ್ಮಗಳಿಂದ ಪ್ರಾಪ್ತವಾದ ನರಕದಲ್ಲಿಯ ಎಲ್ಲ ದುಃಖಗಳಿಂದ ಕೂಡಲೇ ಮುಕ್ತರಾಗಿ ಅತಿ ಸಂತುಷ್ಟರಾಗುವರು ಮತ್ತು ಬಹು ಆಭರಣಾದಿಗಳಿಂದ ಅಲಂಕೃತರಾದವರಾಗಿ ವಿಷ್ಣುಲೋಕದಲ್ಲಿ ಮುದದಿಂದ ಇರುವರು. ॥೨೮॥ ಹೇ ನಾರದಾ, ಬ್ರಹ್ಮಹತ್ಯಾದಿ ಘೋರಪಾತಕಗಳನ್ನು ಮಾಡಿದ್ದ ನರನೂ ಕೂಡ ಪ್ರಬೋಧಿನಿಯ ರಾತ್ರಿ ಜಾಗರ ಮಾಡಿದರೆ ಅವರ ಎಲ್ಲ ಪಾಪಗಳು ತೊಳೆದು ಹೋಗುವವು. ॥೨೯॥ ಅಶ್ವಮೇಧಾದಿ ಯಜ್ಞಗಳನ್ನು ಮಾಡಿದಾಗ ಬಹುಕಷ್ಟಸಾಧ್ಯವಾದ ಯಾವಫಲವು ದೊರೆಯುವದೋ ಅದೇ ಫಲವು ಪ್ರಬೋಧಿನಿಯ ರಾತ್ರಿ ಮಾಡುವ ಜಾಗರ ಮಾತ್ರದಿಂದ ಅನಾಯಾಸವಾಗಿ ದೊರೆಯುವದು. ॥೩೦॥ ಜಾಗರದಿಂದ ಪ್ರಾಪ್ತವಾಗುವ ಫಲವು ಭೂಮಂಡಲದಲ್ಲಿಯ ಸಕಲ ತೀರ್ಥಗಳಲ್ಲಿ ಸ್ನಾನಮಾಡಿಯಾಗಲೀ, ಆಕಳುಗಳು, ಸುವರ್ಣ ಅಥವಾ ಭೂಮಿಯನ್ನು ದಾನಮಾಡಿದಾಗ ಆಗಲೀ ದೊರೆಯಲಾರದು. ॥೩೧॥ ಹೇ ನಾರದ ಮುನಿವರ, ಕಾರ್ತಿಕ ಶುಕ್ಲಪಕ್ಷದಲ್ಲಿ ಬರುವ ಪ್ರಬೋಧಿನೀ ಏಕಾದಶಿಯ ರಾತ್ರಿ ಯಾವನು ಜಾಗರ ಮಾಡುವನೋ ಅವನೇ ನಿಜವಾಗಿ ಹುಟ್ಟಿದವನು, ಅವನೇ ಸುಕೃತಿಯು, ಅವನೊಬ್ಬನಿಂದಲೇ ಸಮಸ್ತಕುಲವು ಪವಿತ್ರಗೊಳಿಸಲ್ಪಟ್ಟಂತೆ ಆಗುವದು. ॥೩೨॥ ಮನುಷ್ಯರಿಗೆ ಮೃತ್ಯು ನಿಶ್ಚಿತವಾಗಿರುವಂತೆ

ಯಥಾ ಧ್ರುವಂ ನೃಣಾಂ ಮೃತ್ಯುರ್ಧನನಾಶಸ್ತಥಾ ಧ್ರುವಮ್ ।
ಇತಿ ಜ್ಞಾತ್ವಾ ಮುನಿಶ್ರೇಷ್ಠ ಕರ್ತವ್ಯಂ ವೈಷ್ಣವಂ ದಿನಮ್ ॥೩೩॥

ಯಾನಿ ಕಾನಿ ಚ ತೀರ್ಥಾನಿ ತ್ರೈಲೋಕ್ಯೇ ಸಂಭವಂತಿ ಚ ।
ತಾನಿ ತಸ್ಯ ಗೃಹೇ ಸಮ್ಯಕ್ ಯಃ ಕರೋತಿ ಪ್ರಬೋಧಿನೀಮ್ ॥೩೪॥

ಸರ್ವಂ ಕೃತ್ಯಂ ಪರಿತ್ಯಜ್ಯ ತುಷ್ಟ್ಯರ್ಥಂ ಚಕ್ರಪಾಣಿನಃ ।
ಉಪೋಷ್ಯೈಕಾದಶೀ ರಮ್ಯಾ ಕಾರ್ತಿಕೇ ಹರಿಬೋಧಿನೀ ॥೩೫॥

ಸ ಜ್ಞಾನೀ ಸ ಚ ಯೋಗೀ ಚ ಸ ತಪಸ್ವೀ ಜಿತೇಂದ್ರಿಯಃ ।
ಭೋಗೇ ಭೋಗಶ್ಚ ತಸ್ಯಾಸ್ತಿ ಹ್ಯುಪಾಸ್ತೇ ಹರಿಬೋಧಿನೀಮ್ ॥೩೬॥

ವಿಷ್ಣುಪ್ರಿಯತರಾ ಹ್ಯೇಷಾ ಧರ್ಮಸಾರಸ್ಯ ದಾಯಿನೀ ।
ಸಕೃದೇನಾಮುಪೋಷ್ಯೈವ ಮುಕ್ತಿಭಾಕ್ಚ ಭವೇನ್ನರಃ ॥೩೭॥

ಪ್ರಬೋಧಿನೀಮುಪೋಷಿತ್ವಾ ನ ಗರ್ಭೇ ವಿಶತೇ ನರಃ ।
ಸರ್ವಧರ್ಮಾನ್ ಪರಿತ್ಯಜ್ಯ ತಸ್ಮಾತ್ಕುರ್ವೀತ ನಾರದ ॥೩೮॥

ಕರ್ಮಣಾ ಮನಸಾ ವಾಚಾ ಪಾಪಂ ಯತ್ಸಮುಪಾರ್ಜಿತಮ್ ।
ತತ್ಕ್ಷಾಲಯತಿ ಗೋವಿಂದಃ ಪ್ರಬೋಧಿನ್ಯಾಂ ತು ಜಾಗರೇ ॥೩೯॥

---

ಧನನಾಶವೂ ನಿಶ್ಚಿತವಾಗಿದೆ. ಸಂಪಾದಿಸಿದ ದ್ರವ್ಯ ಸಂಪತ್ತು ಮುಂತಾದವುಗಳು ಶಾಶ್ವತವಾಗಿ ಉಳಿಯಲಾರವು. ಈ ವಿಷಯವನ್ನು ಮನಗಂಡು ಹರಿದಿನವನ್ನು ಹಾಗೂ ರಾತ್ರಿ ಜಾಗರವನ್ನು ತಪ್ಪದೇ ಆಚರಿಸಬೇಕು. ॥೩೩॥ ತ್ರಿಲೋಕಗಳಲ್ಲಿ ಎಷ್ಟು ತೀರ್ಥಗಳಿವೆಯೋ ಅವೆಲ್ಲವೂ ಪ್ರಬೋಧಿನೀ ವ್ರತವನ್ನಾಚರಿಸುವವನ ಮನೆಯಲ್ಲಿ ಸನ್ನಿಹಿತವಾಗಿರುವವು. ॥೩೪॥ ಇತರ ಎಲ್ಲ ಕರ್ಮಗಳನ್ನು (ನೈಮಿತ್ತಿಕ ಕರ್ಮ, ವ್ರತಾದಿಗಳು ಇತ್ಯಾದಿ) ಬಿಟ್ಟು ಚಕ್ರಪಾಣಿಯ ಪ್ರೀತ್ಯರ್ಥವಾಗಿ ಕಾರ್ತಿಕ ಪ್ರಬೋಧಿನೀ ಏಕಾದಶಿಯ ದಿನ ಉಪವಾಸ ಒಂದನ್ನು ಮಾಡಿದವನೇ ॥೩೫॥ ಜ್ಞಾನಿಯು, ಯೋಗಿಯು, ಅವನೇ ತಪಸ್ವಿಯೂ ಹಾಗೂ ಜಿತೇಂದ್ರಿಯನೆಂದು ಜ್ಞಾನಿಗಳಿಂದ ಗಣಿಸಲ್ಪಡುತ್ತಾನೆ. ಹರಿಪ್ರಬೋಧಿನಿಯ ದಿನ ಉಪವಾಸ ಮಾಡುವವನ ಭೋಗದಲ್ಲಿ ನಿಜವಾದ ಭೋಗ (ಸುಖ)ವಿರುವುದು. ॥೩೬॥ ಇದು ವಿಷ್ಣುವಿಗೆ ಅತಿಪ್ರಿಯವಾಗಿದೆ, ಧರ್ಮಸಾರವನ್ನು ತಿಳಿಸಿ ಅದರ ಫಲವನ್ನು ಕೊಡುವಂಥದ್ದಾಗಿದೆ, ಒಮ್ಮೆ ಮಾತ್ರ ಈ ವ್ರತವನ್ನು ಆಚರಿಸುವ ಮನುಷ್ಯನು ಮುಕ್ತಿಭಾಗಿಯಾಗುತ್ತಾನೆ. ॥೩೭॥ ಹೇ ನಾರದಾ, ಪ್ರಬೋಧಿನೀ ಉಪವಾಸವನ್ನು ಮಾಡಿದವನು ಮತ್ತೆ ಗರ್ಭವಾಸವನ್ನು ಹೊಂದಲಾರನು. ಆದ್ದರಿಂದ ಸರ್ವಧರ್ಮಗಳನ್ನು ಪರಿತ್ಯಜಿಸಿ ಈ ದಿನ ಉಪವಾಸವನ್ನು ಮಾಡಬೇಕು. ॥೩೮॥ ಪ್ರಬೋಧಿನೀ ಜಾಗರವನ್ನು ಮಾಡಿದಲ್ಲಿ ಶ್ರೀಹರಿ ಗೋವಿಂದನು ಪ್ರಸನ್ನನಾಗಿ ಕಾಯಾ ವಾಚಾ ಮನಸಾ ಘಟಿಸಿದ ಪಾಪಗಳನ್ನೆಲ್ಲ ನಾಶಗೊಳಿಸುವನು. ॥೩೯॥

ಸ್ನಾನಂ ದಾನಂ ಜಪೋ ಹೋಮಃ ಸಮುದ್ದಿಶ್ಯ ಜನಾರ್ದನಮ್ ।
ನರೈರ್ಯತ್ಕ್ರಿಯತೇ ವತ್ಸ ಪ್ರಬೋಧಿನ್ಯಾಂ ತದಕ್ಷಯಮ್ ||೪೦||

ಯೇಽರ್ಚಯಂತಿ ನರಾಸ್ತಸ್ಯಾಂ ಭಕ್ತ್ಯಾ ದೇವಂ ಚ ಮಾಧವಮ್ ।
ಸಮುಪೋಷ್ಯ ಪ್ರಮುಚ್ಯಂತೇ ಪಾಪೈಸ್ತು ಶತಜನ್ಮನಿ ||೪೧||

ಮಹಾವ್ರತಮಿದಂ ಪುತ್ರ ಮಹಾಪಾಪೌಘನಾಶನಮ್ ।
ಪ್ರಬೋಧವಾಸರೇ ವಿಷ್ಣೋರ್ವಿಧಿವತ್ಸಮುಪೋಷಯೇತ್ ||೪೨||

ವ್ರತೇನಾನೇನ ದೇವೇಶಂ ಪರಿತೋಷ್ಯ ಜನಾರ್ದನಮ್ ।
ವಿರಾಜಯನ್ ದಿಶಃ ಸರ್ವಾಃ ಪ್ರಯಾತಿ ಭವನಂ ಹರೇಃ ||೪೩||

ಕರ್ತವ್ಯೈಷಾ ಪ್ರಯತ್ನೇನ ನರೈಃ ಕಾಂತಿಮಭೀಪ್ಸುಭಿಃ ।
ದ್ವಾದಶೀ ದ್ವಿಪದಾಂ ಶ್ರೇಷ್ಠ ಕಾರ್ತಿಕೇ ತು ಪ್ರಬೋಧಿನೀ ||೪೪||

ಬಾಲ್ಯೇ ಯಚ್ಚಾರ್ಜಿತಂ ವತ್ಸ ಯೌವನೇ ವಾರ್ಧಕೇ ತಥಾ ।
ಶತಜನ್ಮಕೃತಂ ಪಾಪಂ ಸ್ವಲ್ಪಂ ವಾ ಯದಿ ವಾ ಬಹು ||೪೫||

ಶುಷ್ಕಮಾರ್ದ್ರಂ ಮುನಿಶ್ರೇಷ್ಠ ಸ್ವಗುಹ್ಯಮಪಿ ನಾರದ ।
ತತ್ಕ್ಷಾಲಯತಿ ಗೋವಿಂದಮಸ್ಯಾಮಭ್ಯರ್ಚ್ಯ ಭಕ್ತಿತಃ ||೪೬||

---

ಹೇ ವತ್ಸ, ಪ್ರಬೋಧಿನಿಯ ದಿನ ಶ್ರೀಜನಾರ್ದನನನ್ನು ಉದ್ದೇಶಿಸಿ ಮಾಡುವ ಸ್ನಾನ, ದಾನ, ಜಪ ಹೋಮಾದಿಗಳು ಅಕ್ಷಯವಾದ ಫಲವನ್ನು ಕೊಡುವವು. ||೪೦|| ಆ ದಿನ ಉಪವಾಸ ಮಾಡಿ ಯಾರು ದೇವೋತ್ತಮನಾದ ಶ್ರೀಮಾಧವನನ್ನು ಭಕ್ತಿಯಿಂದ ಪೂಜಿಸುವರೋ ಅವರು ಹಿಂದಿನ ನೂರುಜನ್ಮಗಳಲ್ಲಿ ಮಾಡಿದ ಸಕಲಪಾಪಗಳಿಂದ ಮುಕ್ತರಾಗುವರು. ||೪೧|| ಹೇ ಪುತ್ರ, ಇದೇನು ಸಾಮಾನ್ಯ ವ್ರತವೇ! ಇದೊಂದು ಮಹಾಮಹಾಪಾಪಗಳನ್ನು ನಾಶಗೊಳಿಸುವ ಮಹಾವ್ರತವಾಗಿದೆ. ಪ್ರಬೋಧಿನಿಯ ದಿನ ವಿಧಿಪೂರ್ವಕ ಉಪವಾಸ ಮಾಡಬೇಕು. ||೪೨|| ಈ ವ್ರತದಿಂದ ದೇವೋತ್ತಮನಾದ ಶ್ರೀಜನಾರ್ದನನನ್ನು ಪ್ರಸನ್ನಗೊಳಿಸಿದರೆ ಆ ವ್ರತಿಯು ಸಕಲ ದಿಕ್ಕುಗಳನ್ನು ಪ್ರಕಾಶಗೊಳಿಸುತ್ತ ವೈಕುಂಠಲೋಕಕ್ಕೆ ಹೋಗುವನು. ||೪೩|| ಹೇ ದ್ವಿಜವರ ನಾರದಾ, ಕಾಂತಿಯನ್ನು ಬಯಸುವವರು ಕಾರ್ತಿಕದಲ್ಲಿ ಪ್ರಬೋಧಿನೀ ಏಕಾದಶೀ ಮತ್ತು ದ್ವಾದಶೀ ಪಾರಣೆಗಳನ್ನು ಯಥಾವಿಧಿ ಆಚರಿಸಬೇಕು. ||೪೪|| ಹೇ ವತ್ಸಾ, ಬಾಲ್ಯದಲ್ಲಿ, ಯೌವನದಲ್ಲಿ ಹಾಗೂ ವೃದ್ಧಾಪ್ಯದಲ್ಲಿ ಹಿಂದಿನ ನೂರುಜನ್ಮಗಳಲ್ಲಿ ಸಂಚಿತವಾದ ಪಾಪಗಳು ಚಿಕ್ಕವಾಗಿರಲಿ, ದೊಡ್ಡದಾಗಿರಲಿ ಎಲ್ಲವೂ ಈ ವ್ರತದ ಪ್ರಭಾವದಿಂದ ನಾಶವಾಗುವವು. ||೪೫|| ಧನಧಾನ್ಯಗಳನ್ನು ತಂದುಕೊಡುವ, ಸರ್ವಪಾಪನಾಶಕವಾದ ಹಾಗೂ ಪುಣ್ಯಪ್ರದವಾದ

ಧನಧಾನ್ಯವಹಾ ಪುಣ್ಯಾ ಸರ್ವಪಾಪಹರಾ ಪರಾ ।
ತಾಮುಪೋಷ್ಯ ಹರೇರ್ಭಕ್ತ್ಯಾ ದುರ್ಲಭಂ ನ ಭವೇತ್ ಕ್ವಚಿತ್ ॥೪೭॥

ಚಂದ್ರಸೂರ್ಯೋಪರಾಗೇ ಚ ಯತ್ಫಲಂ ಪರಿಕೀರ್ತಿತಮ್ ।
ತತ್ಸಹಸ್ರಗುಣಂ ಪ್ರೋಕ್ತಂ ಪ್ರಬೋಧಿನ್ಯಾಂ ತು ಜಾಗರಾತ್ ॥೪೮॥

ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯೋಽಭ್ಯರ್ಚನಂ ಹರೇಃ ।
ತತ್ಸರ್ವಂ ಕೋಟಿತುಲ್ಯಂ ತು ಪ್ರಬೋಧಿನ್ಯಾಂ ತು ಯತ್ಕೃತಮ್ ॥೪೯॥

ಜನ್ಮಪ್ರಭೃತಿ ಯತ್ಪುಣ್ಯಂ ನರೇಣಾಭ್ಯರ್ಜಿತಂ ಭವೇತ್ ।
ವೃಥಾ ಭವತಿ ತತ್ಸರ್ವಮಕೃತ್ವಾ ಕಾರ್ತಿತವ್ರತಮ್ ॥೫೦॥

ಅಕೃತ್ವಾ ನಿಯಮಂ ವಿಷ್ಣೋಃ ಕಾರ್ತಿಕೇ ಯಃ ಕ್ಷಿಪೇನ್ನರಃ ।
ಜನ್ಮಾರ್ಜಿತಸ್ಯ ಪುಣ್ಯಸ್ಯ ಫಲಂ ನಾಪ್ನೋತಿ ನಾರದ ॥೫೧॥

ತಸ್ಮಾತ್ತ್ವಯಾ ಪ್ರಯತ್ನೇನ ದೇವದೇವೋ ಜನಾರ್ದನಃ ।
ಉಪಾಸನೀಯೋ ವಿಪ್ರೇಂದ್ರ ಸರ್ವಕಾಮಫಲಪ್ರದಃ ॥೫೨॥

ಪರಾನ್ನಂ ವರ್ಜಯೇದ್ಯಸ್ತು ಕಾರ್ತಿಕೇ ವಿಷ್ಣುತತ್ಪರಃ ।
ಪರಾನ್ನವರ್ಜನಾದ್ವತ್ಸ ಚಾಂದ್ರಾಯಣಫಲಂ ಲಭೇತ್ ॥೫೩॥

---

ಈ ಏಕಾದಶಿಯ ದಿನ ಶ್ರೀಹರಿಯನ್ನು ಭಕ್ತಿಯಿಂದ ಪೂಜಿಸಿದರೆ ಯಾವುದೂ ದುರ್ಲಭವಾಗುವದಿಲ್ಲ, ಎಲ್ಲವೂ ಸುಲಭಸಾಧ್ಯವಾಗುವದು. ॥೪೭॥ ಚಂದ್ರಗ್ರಹಣ, ಸೂರ್ಯಗ್ರಹಣಗಳಿದ್ದಾಗ ಮಾಡುವ ಸ್ನಾನದಾನಾದಿಗಳಿಗೆ ಯಾವ ಫಲವು ಹೇಳಲ್ಪಟ್ಟಿದೆಯೋ ಅದಕ್ಕಿಂತ ಸಾವಿರಪಟ್ಟು ಅಧಿಕವಾದ ಫಲವು ಪ್ರಬೋಧಿನೀ ಜಾಗರಕ್ಕೆ ಹೇಳಲ್ಪಟ್ಟಿದೆ. ॥೪೮॥ ಪ್ರಬೋಧಿನಿಯ ದಿನ ಮಾಡುವ ಸ್ನಾನ, ದಾನ, ಜಪ, ಹೋಮ, ಸ್ವಾಧ್ಯಾಯ, ಶ್ರೀಹರಿಪೂಜೆ ಇವೆಲ್ಲವುಗಳು ಕೋಟಿಪಟ್ಟು ಅಧಿಕವಾದ ಫಲವನ್ನು ಕೊಡುವವು. ॥೪೯॥ ಮನುಷ್ಯನು ತಾನು ಹುಟ್ಟಿದಾಗಿನಿಂದ ಸಂಪಾದಿಸಿದ ಪುಣ್ಯವೆಲ್ಲ ಕಾರ್ತಿಕ ಪ್ರಬೋಧಿನೀ ವ್ರತವನ್ನು ಆಚರಿಸದಿದ್ದರೆ ನಿಷ್ಫಲವಾಗುವದು. ॥೫೦॥ ಹೇ ನಾರದಾ, ಯಾವನು ವಿಷ್ಣುವ್ರತವನ್ನು ಆಚರಿಸದೇ ಕಾರ್ತಿಕದ ಪ್ರಬೋಧಿನಿಯನ್ನು ವ್ಯರ್ಥವಾಗಿ ಕಳೆಯುವನೋ ಅವನು ಜನ್ಮದಾರಭ್ಯ ಸಂಪಾದಿಸಿದ ಪುಣ್ಯಕರ್ಮಗಳ ಫಲವನ್ನು ಪಡೆಯುವದಿಲ್ಲ. ॥೫೧॥ ಈ ಎಲ್ಲ ಕಾರಣಗಳಿಂದ ನೀನು ದೇವದೇವೋತ್ತಮನಾದ ಹಾಗೂ ಸರ್ವಾಭೀಷ್ಟಗಳನ್ನು ಕೊಡುವ ಜನಾರ್ದನನನ್ನು ಆರಾಧಿಸಬೇಕು. ॥೫೨॥ ವಿಷ್ಣುಭಕ್ತನಾದವನು ಕಾರ್ತಿಕದಲ್ಲಿ ಪರಾನ್ನವನ್ನು ವರ್ಜಿಸಬೇಕು ಹಾಗೂ ಪರಾನ್ನವರ್ಜನೆಯಿಂದ ಚಾಂದ್ರಾಯಣವ್ರತದ ಫಲವು ಪ್ರಾಪ್ತವಾಗುವದು. ॥೫೩॥ ಕಾರ್ತಿಕದಲ್ಲಿ ಶ್ರೀಹರಿಮಧುಸೂದನನು ನಮ್ಮ ಶಾಸ್ತ್ರಾರ್ಥ

ನ ತಥಾ ತುಷ್ಯತೇ ಯಜ್ಞೈಃ ನ ದಾನೈರ್ವಾ ಗಜಾದಿಭಿಃ ।
ಯಥಾ ಶಾಸ್ತ್ರಕಥಾಲಾಪೈಃ ಕಾರ್ತಿಕೇ ಮಧುಸೂದನಃ ॥೫೪॥

ಯೇ ಕುರ್ವಂತಿ ಕಥಾಂ ವಿಷ್ಣೋರ್ಯೇ ಶೃಣ್ವಂತಿ ಸಮಾಹಿತಾಃ ।
ಶ್ಲೋಕಾರ್ಧಂ ಶ್ಲೋಕಪಾದಂ ವಾ ಕಾರ್ತಿಕೇ ಗೋಶತಂ ಫಲಮ್ ॥೫೫॥

ಸರ್ವಧರ್ಮಾನ್ ಪರಿತ್ಯಜ್ಯ ಮಮಾಗ್ರೇ ಕಾರ್ತಿಕೇ ನರೈಃ ।
ಶಾಸ್ತ್ರಾವಧಾರಣಂ ಕಾರ್ಯಂ ಶ್ರೋತವ್ಯಂ ಚ ಸದಾ ಮುನೇ ॥೫೬॥

ಶ್ರೇಯಸಾ ಲೋಭಬುದ್ಧ್ಯಾ ವಾ ಯಃ ಕರೋತಿ ಹರೇಃ ಕಥಾಮ್ ।
ಕಾರ್ತಿಕೇ ಮುನಿಶಾರ್ದೂಲ ಕುಲಾನಾಂ ತಾರಯೇಚ್ಛತಮ್ ॥೫೭॥

ನಿತ್ಯಂ ಶಾಸ್ತ್ರವಿನೋದೇನ ಕಾರ್ತಿಕೇ ಯಃ ಕ್ಷಿಪೇನ್ನರಃ ।
ನಿರ್ದಹೇತ್ಸರ್ವಪಾಪಾನಿ ಯಜ್ಞಾಯುತಫಲಂ ಲಭೇತ್ ॥೫೮॥

ನಿಯಮೇನ ನರೋ ಯಸ್ತು ಶೃಣುತೇ ವೈಷ್ಣವೀಂ ಕಥಾಮ್ ।
ಕಾರ್ತಿಕೇ ತು ವಿಶೇಷೇಣ ಗೋಸಹಸ್ರಫಲಂ ಲಭೇತ್ ॥೫೯॥

---

ವಿಚಾರಗಳಿಂದ ಪ್ರಸನ್ನನಾಗುವಂತೆ ಇತರ ಯಜ್ಞಗಳಿಂದಾಗಲೀ, ದಾನಗಳಿಂದಾಗಲೀ, ಗಜಾದಿ ದಾನಗಳಿಂದಲೂ ಕೂಡ ಪ್ರೀತನಾಗುವದಿಲ್ಲ. ॥೫೪॥ ಯಾರು ಕಾರ್ತಿಕದಲ್ಲಿ ಶ್ರೀಹರಿಕಥೆಗಳನ್ನು ಮಾಡುವರೋ ಮತ್ತು ಯಾರು ಏಕಾಗ್ರಚಿತ್ತದಿಂದ ಕಥಾಶ್ರವಣ ಮಾಡುವರೋ, ಶ್ಲೋಕಾರ್ಧವನ್ನಾಗಲೀ ಅಥವಾ ಶ್ಲೋಕಪಾದವನ್ನಾಗಲೀ ಹೇಳಿ ಅಥವಾ ಕೇಳಿದರೂ ನೂರು ಗೋದಾನ ಮಾಡಿದಷ್ಟು ಫಲವು ಬರುವದು. ॥೫೫॥ ಹೇ ನಾರದಾ, ಕಾರ್ತಿಕದಲ್ಲಿ ಮನುಷ್ಯನು ಇತರ ಎಲ್ಲ ಧರ್ಮಗಳನ್ನು ಪರಿತ್ಯಜಿಸಿ ನನ್ನ ಸಮ್ಮುಖದಲ್ಲಿ ಕುಳಿತು ಸದಾ ಶಾಸ್ತ್ರಗಳ ಪಾಠಪ್ರವಚನಗಳನ್ನು ಶಾಸ್ತ್ರಾರ್ಥಶ್ರವಣಗಳನ್ನು ಮಾಡಬೇಕು. ॥೫೬॥ ಹೇ ಮುನಿವರ, ಪ್ರಸಿದ್ಧಿಗಾಗಿಯಾಗಲೀ ಅಥವಾ ಲೋಭ ಬುದ್ಧಿಯಿಂದಾಗಲೀ ಕಾರ್ತಿಕದಲ್ಲಿ ಶ್ರೀಹರಿಯ ಕಥೆಗಳನ್ನು ಹೇಳುವ ಅಥವಾ ಕೇಳುವದನ್ನು ಮಾಡುವವನು ತನ್ನ ನೂರು ಕುಲಗಳನ್ನು ಉದ್ಧರಿಸುವನು. ॥೫೭॥ ನಿತ್ಯ ಶಾಸ್ತ್ರವಿನೋದದಿಂದ ಕಾರ್ತಿಕಮಾಸವನ್ನು ಕಳೆಯುವ ಪುರುಷನು ತನ್ನೆಲ್ಲ ಪಾಪಗಳನ್ನು ಸುಟ್ಟುಹಾಕುವನಲ್ಲದೇ ಹತ್ತುಸಹಸ್ರ ಯಜ್ಞಗಳ ಅನುಷ್ಠಾನದಿಂದ ಬರುವ ಪುಣ್ಯವನ್ನು ಸಂಪಾದಿಸುವನು. ॥೫೮॥ ಯಾವನು ಪ್ರತಿದಿನ ನಿಯಮದಿಂದ ಶ್ರೀವಿಷ್ಣುವಿನ ಮಹಿಮಾ ಕಥೆಗಳನ್ನು ಕೇಳುವನೋ ಅದರಲ್ಲೂ ಕಾರ್ತಿಕಮಾಸದಲ್ಲಿ ಕೇಳುವನೋ ಅವನು ಸಹಸ್ರ ಗೋವುಗಳ ದಾನದಿಂದ ಬರುವ ಪುಣ್ಯವನ್ನು ಸಂಪಾದಿಸುವನು. ॥೫೯॥ ಹೇ ನಾರದಾ, ಪ್ರಬೋಧಿನಿಯ ದಿನ ಶ್ರೀವಿಷ್ಣುವಿನ ಕಥೆಗಳನ್ನು

ಪ್ರಬೋಧವಾಸರೇ ವಿಷ್ಣೋಃ ಕುರುತೇ ಯೋ ಹರೇಃ ಕಥಾಮ್ ।
ಸಪ್ತದ್ವೀಪವತೀದಾನೇ ತತ್ಫಲಂ ಲಭತೇ ಮುನೇ ||೬೦||

ಶ್ರುತ್ವಾ ವಿಷ್ಣುಕಥಾಂ ದಿವ್ಯಾಂ ಯೋಽರ್ಚಯಂತಿ ಕಥಾವಿದಮ್ ।
ಸ್ವಶಕ್ತ್ಯಾ ಮುನಿಶಾರ್ದೂಲ ತೇಷಾಂ ಲೋಕಾಃ ಸನಾತನಾಃ ||೬೧||

ಬ್ರಹ್ಮಣೋ ವಚನಂ ಶ್ರುತ್ವಾ ನಾರದಃ ಪುನರಬ್ರವೀತ್ ।

ನಾರದ ಉವಾಚ

ವಿಧಾನಂ ಬ್ರೂಹಿ ಮೇ ಸ್ವಾಮಿನ್ ಏಕಾದಶ್ಯಾಃ ಸುರೋತ್ತಮ ||೬೨||

ಚೀರ್ಣೇನ ಯೇನ ಭಗವನ್ ಯಾದೃಶಂ ಫಲಮಾಪ್ನುಯಾತ್ ।
ನಾರದಸ್ಯ ವಚಃ ಶ್ರುತ್ವಾ ಬ್ರಹ್ಮಾ ವಚನಮಬ್ರವೀತ್ ||೬೩||

ಬ್ರಹ್ಮೋವಾಚ

ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಹ್ಯೇಕಾದಶ್ಯಾಂ ದ್ವಿಜೋತ್ತಮ ।
ಸ್ನಾನಂ ಚೈವ ಪ್ರಕರ್ತವ್ಯಂ ದಂತಧಾವನಪೂರ್ವಕಮ್ ||೬೪||

ನದ್ಯಾಂ ತಡಾಗೇ ಕೂಪೇ ವಾ ವಾಪ್ಯಾಂ ಗೇಹೇ ತಥೈವ ಚ ।
ಕೇಶವಂ ಚೈವ ಸಂಪೂಜ್ಯ ಕಥಾಯಾಃ ಶ್ರವಣಂ ತಥಾ ||೬೫||

---

ಹೇಳುವವನು ಮತ್ತು ಕೇಳುವವನು ಸಪ್ತದ್ವೀಪಗಳಿಂದ ಯುಕ್ತವಾದ ಭೂದಾನ ಮಾಡಿದಷ್ಟು ಫಲವನ್ನು ಪಡೆಯುವನು. ||೬೦|| ವಿಷ್ಣುವಿನ ದಿವ್ಯವಾದ ಕಥೆಯನ್ನು ಕೇಳಿದ ಶ್ರೋತೃಗಳು ಕಥಾವಿದನನ್ನು ಅಥವಾ ಪೌರಾಣಿಕನನ್ನು ಯಥಾಶಕ್ತಿ ಪೂಜಿಸಿದರೆ ಅವರಿಗೆ ಶಾಶ್ವತವಾದ ಲೋಕಗಳು ಕಾಯ್ದಿರಿಸಲ್ಪಟ್ಟಿರುತ್ತವೆ. ||೬೧|| ಚತುರ್ಮುಖ ಬ್ರಹ್ಮದೇವರು ಹೇಳಿದುದೆಲ್ಲವನ್ನು ಕೇಳಿದ ನಾರದರು ಭೋ ಸ್ವಾಮಿನ್, ಇಂಥ ಮಹಿಮೋಪೇತವಾದ ಏಕಾದಶಿಯನ್ನು ಆಚರಿಸುವ ವಿಧಾನವನ್ನು ತಿಳಿಸಿರಿ. ||೬೨|| ಈ ವ್ರತವನ್ನು ಯಥಾವಿಧಿ ಆಚರಿಸುವದರಿಂದ ಬರುವ ಫಲವನ್ನು ತಿಳಿಸಿರಿ ಎಂದು ಪ್ರಾರ್ಥಿಸಲು ಬ್ರಹ್ಮದೇವರು ಹೇಳಿದರು. ||೬೩|| ಹೇ ದ್ವಿಜಶ್ರೇಷ್ಠ ನಾರದಾ, ಏಕಾದಶಿಯ ದಿನ ಬ್ರಾಹ್ಮೀಮುಹೂರ್ತದಲ್ಲೆದ್ದು ದಂತಧಾವನಾದಿಗಳನ್ನು ಮಾಡಿಕೊಂಡು, ನದಿಯಲ್ಲಾಗಲೀ, ತಟಾಕದಲ್ಲಾಗಲೀ, ಇಳಿಯುವ ಬಾವಿಯಲ್ಲಾಗಲೀ, ಸೇದುವ ಬಾವಿಯ ಮೇಲಾಗಲೀ ಅಥವಾ ಮನೆಯಲ್ಲೇ ಆಗಲೀ ಸ್ನಾನ ಮಾಡಬೇಕು. ಅನಂತರ ಶ್ರೀಕೇಶವನನ್ನು ಭಕ್ತಿಯಿಂದ ಪೂಜಿಸಿ ಶ್ರೀಹರಿಯ ಮಹಿಮಾ ಕಥೆಗಳನ್ನು ಶ್ರವಣ ಮಾಡಬೇಕು. ||೬೪||೬೫|| ಅಂದಿನ ದಿನ ನಿಯಮಗ್ರಹಣ ಮಾಡುವಾಗ - "ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾಽಹನಿ ಪರೇ ಹ್ಯಹಂ । ಭೋಕ್ಷ್ಯಾಮಿ

ನಿಯಮಾರ್ಥೇ ಮಹಾಭಾಗ ಇಮಂ ಮಂತ್ರಮುದೀರಯೇತ್ ।
ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾಽಹನಿ ಪರೇ ಹ್ಯಹಮ್ ॥೬೬॥

ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ।
ಅಮುಂ ಮಂತ್ರಂ ಸಮುಚ್ಚಾರ್ಯ ದೇವದೇವಸ್ಯ ಚಕ್ರಿಣಃ ॥೬೭॥

ಭಕ್ತಿಭಾವೇನ ತುಷ್ಟಾತ್ಮಾ ಹ್ಯುಪವಾಸಂ ಸಮರ್ಪಯೇತ್ ।
ರಾತ್ರೌ ಜಾಗರಣಂ ಕಾರ್ಯಂ ದೇವದೇವಸ್ಯ ಸನ್ನಿಧೌ ॥೬೮॥

ಗೀತಂ ನೃತ್ಯಂ ಚ ವಾದ್ಯಂ ಚ ತಥಾ ಕೃಷ್ಣಕಥಾಂ ಮುನೇ ।
ಯಃ ಕರೋತಿ ಸ ಪುಣ್ಯಾತ್ಮಾ ತ್ರೈಲೋಕ್ಯೋಪರಿ ಸಂಸ್ಥಿತಃ ॥೬೯॥

ಬಹುಪುಷ್ಪೈರ್ಬಹುಫಲೈಃ ಕರ್ಪೂರಾಗರುಕುಂಕುಮೈಃ ।
ಹರೇಃ ಪೂಜಾ ವಿಧಾತವ್ಯಾ ಕಾರ್ತಿಕ್ಯಾಂ ಬೋಧವಾಸರೇ ॥೭೦॥

ವಿತ್ತಶಾಠ್ಯಂ ನ ಕರ್ತವ್ಯಂ ಸಂಪ್ರಾಪ್ತೇ ಹರಿವಾಸರೇ ।
ಯಸ್ಮಾತ್ಪುಣ್ಯಮಸಂಖ್ಯಾತಂ ಪ್ರಾಪ್ಯತೇ ಮುನಿಸತ್ತಮ ॥೭೧॥

ಫಲೈರ್ನಾನಾವಿಧೈರ್ದಿವ್ಯೈಃ ಪ್ರಬೋಧಿನ್ಯಾಂ ತು ಜಾಗರೇ ।
ಶಂಖೇ ತೋಯಂ ಸಮಾದಾಯ ಹ್ಯರ್ಘ್ಯೋ ದೇಯೋ ಜನಾರ್ದನೇ ॥೭೨॥

---

ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ" ॥ - (ಹೇ ಪುಂಡರೀಕಾಕ್ಷ, ಏಕಾದಶಿಯ ದಿನ ನಿರಾಹಾರಿಯಾಗಿದ್ದು ಮರುದಿನ ಪಾರಣೆ ಮಾಡುವೆನು. ಹೇ ಅಚ್ಯುತ ನೀನು ನನಗೆ ರಕ್ಷಕನಾಗು) ಎಂಬ ಮಂತ್ರವನ್ನು ಹೇಳಬೇಕು. ದೇವದೇವೋತ್ತಮನಾದ ಚಕ್ರಪಾಣಿಯನ್ನು ಈ ಮಂತ್ರೋಚ್ಚಾರಣೆ ಪೂರ್ವಕ ॥೬೬॥೬೭॥ ಭಕ್ತಿಭಾವದಿಂದ ಪ್ರಾರ್ಥಿಸಿ ಪ್ರಸನ್ನಚಿತ್ತದಿಂದ ಉಪವಾಸವನ್ನು ಮಾಡಬೇಕು. ಶ್ರೀಹರಿಯ ಸನ್ನಿಧಿಯಲ್ಲಿ ಕುಳಿತು ರಾತ್ರಿಜಾಗರಣವನ್ನು ಮಾಡಬೇಕು. ॥೬೮॥ ಜಾಗರ ಸಮಯದಲ್ಲಿ ಶ್ರೀಹರಿಯ ಪ್ರೀತ್ಯರ್ಥವಾಗಿ ಗೀತ, ನೃತ್ಯ, ವಾದ್ಯ ಮುಂತಾದ ಸೇವೆಗಳನ್ನು ಸಲ್ಲಿಸಿ ಶ್ರೀಕೃಷ್ಣನ ಕಥೆಯನ್ನು ಕೇಳಬೇಕು. ಹೀಗೆ ಮಾಡುವ ಪುಣ್ಯಾತ್ಮನು ಮರಣಾನಂತರ ತ್ರಿಲೋಕಗಳ ಮೇಲಿರುವ ಸತ್ಯಲೋಕದಲ್ಲಿ ವಾಸಮಾಡುವನು. ॥೬೯॥ ಕಾರ್ತಿಕದ ಪ್ರಬೋಧಿನಿಯ ದಿನ ಬಹುಪುಷ್ಪಗಳಿಂದ, ಬಹುಫಲಗಳಿಂದ ಹಾಗೂ ಕರ್ಪೂರ, ಅಗರು, ಕುಂಕುಮಾದಿಗಳಿಂದ ಶ್ರೀಹರಿಯನ್ನು ಭಕ್ತಿಯಿಂದ ಪೂಜಿಸಬೇಕು. ॥೭೦॥ ಹರಿವಾಸರವು ಬಂದಾಗ ವಿತ್ತಶಾಠ್ಯವನ್ನು ಮಾಡದೇ ಈ ರೀತಿ ನಡೆದರೆ ಅಸಂಖ್ಯವಾದ ಪುಣ್ಯವು ಲಭಿಸುವದು. ॥೭೧॥ ಪ್ರಬೋಧಿನಿಯ ಜಾಗರದಲ್ಲಿ ಶ್ರೀಹರಿಗೆ ದಿವ್ಯವಾದ ನಾನಾವಿಧ ಫಲಗಳನ್ನು ಸಮರ್ಪಿಸಿ ನಂತರ ಶಂಖದಲ್ಲಿ ನೀರನ್ನು ಹಾಕಿ ಅರ್ಘ್ಯಗಳನ್ನು ಕೊಡಬೇಕು. ॥೭೨॥ ಸಕಲ ತೀರ್ಥಗಳಲ್ಲಿ ಸ್ನಾನಮಾಡುವವರಿಂದ ಮತ್ತು ಸರ್ವಪ್ರಕಾರದ ದಾನಗಳನ್ನು

ಯತ್ಫಲಂ ಸರ್ವತೀರ್ಥೇಷು ಸರ್ವದಾನೇಷು ತತ್ಫಲಮ್ ।
ತತ್ಫಲಂ ಕೋಟಿಗುಣಿತಂ ದತ್ವಾರ್ಘ್ಯಂ ಬೋಧವಾಸರೇ ॥೭೩॥

ಅಗಸ್ತ್ಯಕುಸುಮೈರ್ದಿವ್ಯೈಃ ಪೂಜಯೇದ್ಯೋ ಜನಾರ್ದನಮ್ ।
ದೇವೇಂದ್ರೋಽಪಿ ಮುನಿಶ್ರೇಷ್ಠ ಕರೋತಿ ಕರಸಂಪುಟಮ್ ॥೭೪॥

ನ ತತ್ಕರೋತಿ ವಿಪ್ರೇಂದ್ರ ತಪಸಾ ತೋಷಿತೋ ಹರಿಃ ।
ಯತ್ಕರೋತಿ ಹೃಷೀಕೇಶೋ ಮುನಿಪುಷ್ಪೈರಲಂಕೃತಃ ॥೭೫॥

ಬಿಲ್ವಪತ್ರೈಶ್ಚ ಯೇ ಕೃಷ್ಣಂ ಕಾರ್ತಿಕೇ ಕಲಿವರ್ಧನ ।
ಪೂಜಯಂತಿ ಮಹಾಭಕ್ತ್ಯಾ ಮುಕ್ತಿಸ್ತೇಷಾಂ ಮಯೋದಿತಾ ॥೭೬॥

ತುಲಸೀದಲಪುಷ್ಪೈಶ್ಚ ಪೂಜಯಂತಿ ಜನಾರ್ದನಂ ।
ಕಾರ್ತಿಕೇ ಸಕಲಂ ವತ್ಸ ಪಾಪಂ ಜನ್ಮಾಯುತಂ ದಹೇತ್ ॥೭೭॥

ದೃಷ್ಟ್ವಾ ಸ್ಪೃಷ್ಟ್ವಾಽಥವಾ ಧ್ಯಾತಾ ಕೀರ್ತಿತಾ ನಮಿತಾಸ್ತುತಾ ।
ರೋಪಿತಾ ಸೇಚಿತಾ ನಿತ್ಯಂ ಪೂಜಿತಾ ತುಲಸೀ ಶುಭಾ ॥೭೮॥

ನವಧಾ ತುಲಸೀಭಕ್ತಿಂ ಯೇ ಕುರ್ವಂತಿ ದಿನೇ ದಿನೇ ।
ಯುಗಕೋಟಿ ಸಹಸ್ರಾಣಿ ತೇ ವಸಂತಿ ಹರೇರ್ಗೃಹೇ ॥೭೯॥

---

ಕೊಡುವದರಿಂದ ಏನು ಫಲವಿದೆಯೋ ಆ ಫಲದ ಕೋಟಿಪಟ್ಟು ಅಧಿಕವಾದ ಫಲವು ಪ್ರಬೋಧಿನಿಯ ಜಾಗರದಲ್ಲಿ ಮಾಡುವ ಅರ್ಘ್ಯಪ್ರದಾನದಿಂದ ಲಭಿಸುವದು. ॥೭೩॥ ಹೇ ಮುನಿವರ, ದಿವ್ಯವಾದ ಅಗಸ್ತ್ಯ ಪುಷ್ಪಗಳಿಂದ ಶ್ರೀಜನಾರ್ದನನನ್ನು ಪೂಜಿಸುವವನನ್ನು ದೇವೇಂದ್ರನೂ ಕೂಡ ಕೈಜೋಡಿಸಿ ನಮಿಸುವನು. ॥೭೪॥ ಹೇ ವಿಪ್ರೇಂದ್ರ ನಾರದಾ, ಅಗಸ್ತ್ಯ ಪುಷ್ಪಗಳಿಂದ ಅಲಂಕೃತನಾದ ಶ್ರೀಹರಿಯು ಎಷ್ಟು ಅನುಗ್ರಹ ಮಾಡುವನೋ ಅಷ್ಟು ಉಗ್ರವಾದ ತಪಸ್ಸಿನಿಂದ ಸಂತುಷ್ಟಗೊಳಿಸಿದರೂ ಮಾಡಲಾರನು. ॥೭೫॥ ಕಾರ್ತಿಕದಲ್ಲಿ ಯಾರು ಬಿಲ್ವಪತ್ರಗಳಿಂದ ಶ್ರೀಕೃಷ್ಣನನ್ನು ಮಹಾಭಕ್ತಿಯಿಂದ ಪೂಜಿಸುವರೋ ಅವರಿಗೆ ಮುಕ್ತಿಯು ನಿಶ್ಚಿತವಾದುದು. ॥೭೬॥ ಕಾರ್ತಿಕದಲ್ಲಿ ತುಲಸೀದಲಗಳಿಂದ ಮತ್ತು ಪುಷ್ಪಗಳಿಂದ ಶ್ರೀದಾಮೋದರನನ್ನು ಪೂಜಿಸಿದರೆ ಹತ್ತು ಸಹಸ್ರಜನ್ಮಗಳಲ್ಲಿ ಮಾಡಿದ ಪಾಪಗಳೆಲ್ಲ ಸುಟ್ಟು ಭಸ್ಮವಾಗುವವು. ॥೭೭॥ ಕಾರ್ತಿಕದಲ್ಲಿ ಪ್ರತಿದಿನ ಶ್ರೀತುಲಸಿಯ ದರ್ಶನ, ಸ್ಪರ್ಶನ, ಧ್ಯಾನ, ಕೀರ್ತನ, ನಮನ, ಸ್ತುತಿ, ರೋಪಣ, ಸೇಚನ ಮತ್ತು ಪೂಜೆ ॥೭೮॥ ಈ ಪ್ರಕಾರ ಎಂಟು ವಿಧಗಳಿಂದ ತುಲಸಿಯಲ್ಲಿ ಭಕ್ತಿಯನ್ನು ಮಾಡುವವರು ಸಹಸ್ರಕೋಟಿ ಯುಗಗಳವರೆಗೆ ಶ್ರೀಹರಿಯ ವೈಕುಂಠ ಮಂದಿರದಲ್ಲಿ ವಾಸಿಸುವರು. ॥೭೯॥ ಬೆಳೆಸಿದ ತುಲಸೀಗಿಡವು

ರೋಪಿತಾ ತುಲಸೀ ಯಾವತ್ಕುರುತೇ ಮೂಲವಿಸ್ತರಂ ।
ತಾವದ್ಯುಗಸಹಸ್ರಾಣಿ ತನೋತಿ ಸುಕೃತಂ ಮುನೇ ॥೮೦॥

ಯಾವಚ್ಛಾಖಾಪ್ರಶಾಖಾಭಿರ್ಬೀಜಪುಷ್ಪದಲೈರ್ಮುನೇ ।
ರೋಪಿತಾ ತುಲಸೀ ಪುಂಭಿರ್ವರ್ಧತೇ ವಸುಧಾತಲೇ ॥೮೧॥

ಕುಲೇ ತೇಷಾಂ ತು ಯೇ ಜಾತಾ ಯೇ ಭವಿಷ್ಯಂತಿ ಯೇ ಗತಾಃ ।
ಆಕಲ್ಪಯುಗಸಾಹಸ್ರಂ ತೇಷಾಂ ವಾಸೋ ಹರೇರ್ಗೃಹೇ ॥೮೨॥

ಕದಂಬಕುಸುಮೈರ್ದೇವಂ ಯೇಽರ್ಚಯಂತಿ ಜನಾರ್ದನಮ್ ।
ತೇಷಾಂ ಯಮಾಲಯೋ ನೈವ ಪ್ರಸಾದಾಚ್ಚಕ್ರಪಾಣಿನಃ ॥೮೩॥

ದೃಷ್ಟ್ವಾ ಕದಂಬಕುಸುಮಂ ಪ್ರೀತೋ ಭವತಿ ಕೇಶವಃ ।
ಕಿಂ ಪುನಃ ಪೂಜಿತೋ ವಿಪ್ರ ಸರ್ವಕಾಮಪ್ರದೋ ಹರಿಃ ॥೮೪॥

ಯಃ ಪುನಃ ಪಾಟಲೀಪುಷ್ಪೈಃ ಕಾರ್ತಿಕೇ ಗರುಡಧ್ವಜಮ್ ।
ಅರ್ಚಯೇತ್ ಪರಯಾ ಭಕ್ತ್ಯಾ ಮುಕ್ತಿಭಾಗೀ ಭವೇದ್ಧಿ ಸಃ ॥೮೫॥

ಬಕುಲಾಶೋಕಕುಸುಮೈರ್ಯೇಽರ್ಚಯಂತಿ ಜಗತ್ಪತಿಮ್ ।
ವಿಶೋಕಾಸ್ತೇ ಭವಿಷ್ಯಂತಿ ಯಾವಚ್ಚಂದ್ರದಿವಾಕರೌ ॥೮೬॥

---

ಎಷ್ಟು ದಿನಗಳವರೆಗೆ ತನ್ನ ಬೇರುಗಳನ್ನು ವಿಸ್ತರಿಸುತ್ತ ಜೀವಿಸಿರುವದೋ ಅಷ್ಟು ದಿನಗಳ ಸಂಖ್ಯೆಯ ಸಹಸ್ರ ಯುಗಗಳವರೆಗೆ ತುಲಸೀ ಗಿಡವನ್ನು ಹಚ್ಚಿ ಬೆಳೆಸಿದವನ ಸುಕೃತವು ವರ್ಧಿಸುವದು. ॥೮೦॥ ಭೂಮಿಯನ್ನು ನೆಟ್ಟು ಬೆಳೆಸಿದ ತುಲಸೀಗಿಡವು ಶಾಖಾ, ಪ್ರಶಾಖಾ, ಬೀಜ, ಪುಷ್ಪದಳಗಳಿಂದ ಎಷ್ಟು ದಿನ ವರ್ಧಿಸುವದೋ ॥೮೧॥ ಅಷ್ಟು ದಿನಗಳ ಸಂಖ್ಯೆಯ ಸಹಸ್ರಯುಗಗಳ ವರೆಗೆ ತುಲಸೀಗಿಡವನ್ನು ನೆಟ್ಟವನ ಕುಲದಲ್ಲಿ ಹುಟ್ಟಿ ಗತಿಸಿದವರು, ಇದ್ದವರು ಮತ್ತು ಹುಟ್ಟುವವರೆಲ್ಲರೂ ಶ್ರೀಹರಿಯ ಮಂದಿರದಲ್ಲಿ ವಾಸವನ್ನು ಪಡೆಯುವರು. ॥೮೨॥ ಕದಂಬ ಕುಸುಮಗಳಿಂದ ಜನಾರ್ದನನನ್ನು ಪೂಜಿಸುವವರು ಚಕ್ರಪಾಣಿಯಾದ ವಿಷ್ಣುವಿನ ಪ್ರಸಾದದಿಂದ ಯಮಲೋಕವನ್ನು ನೋಡುವದೇ ಇಲ್ಲ. ॥೮೩॥ ಹೇ ನಾರದಾ, ಕದಂಬ ಪುಷ್ಪಗಳನ್ನು ನೋಡುವ ಮಾತ್ರದಿಂದಲೇ ಪ್ರಸನ್ನನಾಗುವ ಶ್ರೀಹರಿಯು ಅವುಗಳಿಂದ ಪೂಜಿಸಲ್ಪಟ್ಟಾಗ ಪ್ರಸನ್ನನಾಗಿ ಸರ್ವಾಭೀಷ್ಟಗಳನ್ನು ಕೊಟ್ಟೇ ಕೊಡುವನೆಂದೇನು ಹೇಳುವದು. ॥೮೪॥ ಇನ್ನು ಕಾರ್ತಿಕದಲ್ಲಿ ಗರುಡಧ್ವಜನಾದ ಶ್ರೀಹರಿಯನ್ನು ಪಾಟಲೀ ಪುಷ್ಪಗಳಿಂದ, ಪರಮಭಕ್ತಿಯಿಂದ ಪೂಜಿಸುವವನು ನಿಶ್ಚಿತವಾಗಿ ಮುಕ್ತಿಭಾಗಿಯಾಗುವನು. ॥೮೫॥ ಜಗತ್ಪತಿಯಾದ ವಿಷ್ಣುವನ್ನು ಬಕುಲ ಅಶೋಕಪುಷ್ಪಗಳಿಂದ ಪೂಜಿಸುವವರು ಸೂರ್ಯಚಂದ್ರರಿರುವವರೆಗೆ ದುಃಖರಹಿತರಾಗಿ ಸುಖದಿಂದ ಇರುವರು. ॥೮೬॥ ಜಗನ್ನಾಥನನ್ನು

ಯೇಽರ್ಚಯಂತಿ ಜಗನ್ನಾಥಂ ಕರವೀರೈಃ ಸಿತಾಸಿತೈಃ ।
ಚತುರ್ಯುಗಾನಿ ವಿಪ್ರೇಂದ್ರ ಪ್ರೀತೋ ಭವತಿ ಕೇಶವಃ ॥೮೭॥

ಮಂಜರೀಂ ಸಹಕಾರಸ್ಯ ಕೇಶವೋಪರಿ ಯೇ ನರಾಃ ।
ಯಚ್ಛಂತಿ ತೇ ಮಹಾಭಾಗಾಃ ಗೋಕೋಟಿಫಲಭಾಗಿನಃ ॥೮೮॥

ದೂರ್ವಾಂಕುರೈರ್ಹರೇರ್ಯಸ್ತು ಪೂಜಾಂ ಕಾಲೇ ಪ್ರಯಚ್ಛತಿ ।
ಪೂಜಾಫಲಂ ಶತಗುಣಂ ಸಮ್ಯಗಾಪ್ನೋತಿ ಮಾನವಃ ॥೮೯॥

ಶಮೀಪತ್ರೈಸ್ತು ಯೇ ದೇವಂ ಪೂಜಯಂತಿ ಸುಖಪ್ರದಮ್ ।
ಯಮಮಾರ್ಗೋ ಮಹಾಘೋರೋ ನಿಸ್ತೀರ್ಣಸ್ತೈಸ್ತು ನಾರದ ॥೯೦॥

ವರ್ಷಾಕಾಲೇ ತು ದೇವೇಶಂ ಕುಸುಮೈಶ್ಚಂಪಕೋದ್ಭವೈಃ ।
ಯೇಽರ್ಚಯಂತಿ ನ ತೇ ಮರ್ತ್ಯಾಃ ಸಂಸರೇಯುಃ ಪುನರ್ಭವೇ ॥೯೧॥

ಕುಂಭೀಪುಷ್ಪಂ ತು ವಿಪ್ರರ್ಷೇ ಯೇ ಪ್ರಯಚ್ಛಂತಿ ಜನಾರ್ದನೇ ।
ಸುವರ್ಣಪಲಮಾತ್ರಂ ತೇ ಲಭಂತೇ ವೈ ಫಲಂ ಮುನೇ ॥೯೨॥

ಸುವರ್ಣಕೇತಕೀಪುಷ್ಪಂ ಯೋ ದದಾತಿ ಜನಾರ್ದನೇ ।
ಕೋಟಿಜನ್ಮಾರ್ಜಿತಂ ಪಾಪಂ ದಹತೇ ಗರುಡಧ್ವಜಃ ॥೯೩॥

---

ಬಿಳಿ ಹಾಗೂ ಕರಿ ಬಣ್ಣದ ಕರವೀರ ಪುಷ್ಪಗಳಿಂದ ಪೂಜಿಸಿದರೆ ಚತುರ್ಯುಗಗಳು ಇರುವವರೆಗೆ ಕೇಶವನು ಪ್ರಸನ್ನನಾಗಿರುವನು. ॥೮೭॥ ಯಾವ ಮನುಷ್ಯರು ಶ್ರೀಕೇಶವನ ಮೇಲೆ ಮಾವಿನ ಚಿಗುರಗಳನ್ನು ಏರಿಸಿ ಪೂಜಿಸುವರೋ ಆ ಪುಣ್ಯಾತ್ಮರು ಒಂದು ಕೋಟಿ ಗೋದಾನದ ಫಲವನ್ನು ಪಡೆಯುವರು. ॥೮೮॥ ಪೂಜಾಸಮಯದಲ್ಲಿ ದುರ್ವಾಂಕುರಗಳನ್ನು ಸಮರ್ಪಿಸಿದರೆ ನಿತ್ಯಪೂಜೆಯ ಒಂದು ನೂರು ಪಟ್ಟು ಅಧಿಕಫಲವು ಲಭಿಸುವದು. ॥೮೯॥ ಹೇ ನಾರದಾ, ಸುಖಪ್ರದನಾದ ಶ್ರೀಹರಿಯನ್ನು ಶಮೀಪತ್ರಗಳಿಂದ ಯಾರು ಪೂಜಿಸುವರೋ ಅವರು ಮಹಾಘೋರವಾದ ಯಮಮಾರ್ಗವನ್ನು ದಾಟಿಹೋಗುವರು. ॥೯೦॥ ವರ್ಷಾಕಾಲದಲ್ಲಿ ಚಂಪಕಪುಷ್ಪಗಳಿಂದ ದೇವೋತ್ತಮ ಶ್ರೀಹರಿಯನ್ನು ಪೂಜಿಸುವವರು ಜನನ ಮರಣ ರೂಪವಾದ ಸಂಸಾರದಲ್ಲಿ ಮತ್ತೆ ಜನಿಸುವದಿಲ್ಲ. ॥೯೧॥ ಕುಂಭೀಪುಷ್ಪಗಳಿಂದ ಶ್ರೀಹರಿ ಜನಾರ್ದನನನ್ನು ಪೂಜಿಸುವವರು ನಾಲ್ಕು ಕರ್ಷ (೧ ಪಲ = ನಾಲ್ಕು ಕರ್ಷ) ಭಾರ ಸುವರ್ಣದಿಂದ ಪೂಜಿಸಿದ ಫಲವನ್ನು ಪಡೆಯುವರು. ॥೯೨॥ ಸುವರ್ಣದ ಕೇತಕೀ ಪುಷ್ಪವನ್ನು ಸಮರ್ಪಿಸಿದರೆ ಗರುಡಧ್ವಜ ಶ್ರೀಹರಿಯು ಕೋಟಿಜನ್ಮಗಳಲ್ಲಿ ಸಂಗ್ರಹವಾದ ಪಾಪಗಳನ್ನೆಲ್ಲ ಸುಟ್ಟುಹಾಕುವನು. ॥೯೩॥ ಕುಂಕುಮದಂತೆ ಕೆಂಪುವರ್ಣದ ಹಾಗೂ ಸುಗಂಧಯುಕ್ತವಾದ

ಕುಂಕುಮಾಗುರುವರ್ಣಾಂ ಚ ಗಂಧಾಢ್ಯಾಂ ಶತಪತ್ರಿಕಾಮ್ ।
ಯೋ ದದಾತಿ ಜಗನ್ನಾಥೇ ಶ್ವೇತದ್ವೀಪಾಲಯೇ ವಸೇತ್ ॥೯೪॥

[illegible] ರಾತ್ರೌ ಚ ಕೇಶವಂ ಮುಕ್ತಿಭುಕ್ತಿದಮ್ ।
ಪ್ರಾತರುತ್ಥಾಯ ಚ ಬ್ರಹ್ಮನ್ ಗತ್ವಾ ತು ಸಜಲಾಂ ನದೀಮ್ ॥೯೫॥

ತತ್ರ ಸ್ನಾತ್ವಾ ಜಪಿತ್ವಾ ಚ ಕೃತ್ವಾ ಪೌರ್ವಾಹ್ಣಿಕೀಃ ಕ್ರಿಯಾಃ ।
ಗೃಹೇ ಗತ್ವಾ ಚ ಸಂಪೂಜ್ಯ ಕೇಶವಂ ವಿಧಿವನ್ನರಃ ॥೯೬॥

ವ್ರತಸ್ಯ ಪಾರಣಾರ್ಥಾಯ ಬ್ರಾಹ್ಮಣಾನ್ ಭೋಜಯೇತ್ ಸುಧೀಃ ।
ಕ್ಷಮಾಪಯೇಚ್ಚ ಶಿರಸಾ ಭಕ್ತಿಯುಕ್ತೇನ ಚೇತಸಾ ॥೯೭॥

ಗುರುಪೂಜಾ ತತಃ ಕಾರ್ಯಾ ಭೋಜನಾಚ್ಛಾದನಾದಿಭಿಃ ।
ದಕ್ಷಿಣಾ ಗಾಶ್ಚ ದಾತವ್ಯಾ ತುಷ್ಟ್ಯರ್ಥಂ ಚಕ್ರಪಾಣಿನಃ ॥೯೮॥

ಭೂಯಸೀ ಚೈವ ದಾತವ್ಯಾ ಬ್ರಾಹ್ಮಣೇಭ್ಯಃ ಪ್ರಯತ್ನತಃ ।
ನಿಯಮಶ್ಚೈವ ಸಂತ್ಯಾಜ್ಯೋ ಬ್ರಾಹ್ಮಣಾಗ್ರೇ ಪ್ರಯತ್ನತಃ ॥೯೯॥

---

ಶತಪತ್ರಿಕೆಯನ್ನು ಜಗನ್ನಾಥನಿಗೆ ಸಮರ್ಪಿಸುವವನು ಶ್ವೇತದ್ವೀಪದಲ್ಲಿ ವಾಸಿಸುವನು. ॥೯೪॥ ಈ ಪ್ರಕಾರ ಏಕಾದಶೀ ರಾತ್ರಿ ವಿವಿಧ ಪುಷ್ಪಾದಿಗಳಿಂದ ಭುಕ್ತಿ ಮುಕ್ತಿಪ್ರದನಾದ ಕೇಶವನನ್ನು ಪೂಜಿಸಿ ದ್ವಾದಶೀ ಉಷಃಕಾಲದಲ್ಲೆದ್ದು ಹರಿಯುತ್ತಿರುವ ನದಿಗೆ ಸ್ನಾನಕ್ಕೆ ಹೋಗಬೇಕು. ॥೯೫॥ ಪ್ರಾತರ್ವಿಧಿಗಳಾದ ನಂತರ ನದೀ ಜಲದಲ್ಲಿ ಸ್ನಾನಮಾಡಿ ಸಂಧ್ಯಾಜಪತರ್ಪಣಾದಿ ಪ್ರಾತರಾಹ್ನಿಕಗಳನ್ನು ಮುಗಿಸಿ ಮನೆಗೆ ಬಂದು ಶ್ರೀಹರಿ ಕೇಶವನನ್ನು ವಿಧಿಪೂರ್ವಕ ಪೂಜಿಸಬೇಕು. ॥೯೬॥ ಪಾರಣೆ ಭೋಜನಕ್ಕೋಸ್ಕರ ಬ್ರಾಹ್ಮಣರನ್ನು ಆಮಂತ್ರಿಸಿ ಭೋಜನ ಮಾಡಿಸಬೇಕು. ಶ್ರದ್ಧಾಭಕ್ತಿಯುತನಾದ ವ್ರತಿಯು ಶಿರಸಾ ವಂದಿಸಿ ತಾನು ಏನಾದರೂ ಅಪರಾಧಗಳನ್ನು ಮಾಡಿದ್ದರೆ ಕ್ಷಮಿಸುವಂತೆ ಬ್ರಾಹ್ಮಣರನ್ನು ಪ್ರಾರ್ಥಿಸಬೇಕು. ॥೯೭॥ ಅನಂತರ ಭೋಜನಾಚ್ಛಾದನಾದಿಗಳಿಂದ ಗುರುಪೂಜೆಯನ್ನು ಮಾಡಬೇಕು. ಚಕ್ರಪಾಣಿ ಶ್ರೀಹರಿಯ ಪ್ರೀತ್ಯರ್ಥವಾಗಿ ಗುರುಬ್ರಾಹ್ಮಣರಿಗೆ ಯಥಾಶಕ್ತಿ ದಕ್ಷಿಣಾ ಹಾಗೂ ಗೋವುಗಳನ್ನು ಕೊಡಬೇಕು. ॥೯೮॥ ಅನಂತರ ಬ್ರಾಹ್ಮಣರ ಸಮ್ಮುಖದಲ್ಲಿ ಏಕಾದಶೀ ವ್ರತದ ನಿಯಮವನ್ನು ತ್ಯಜಿಸಿ ವ್ರತಸಮಾಪ್ತಿಯನ್ನು ಮಾಡಬೇಕು. ॥೯೯॥ ತಾನು ವ್ರತಸಮಾಪ್ತಿ ಮಾಡುತ್ತಿರುವ ವಿಷಯವನ್ನು ಬ್ರಾಹ್ಮಣರಿಗೆ ತಿಳಿಸಿ ಅವರ ಅನುಜ್ಞೆಯನ್ನು ಪಡೆದು ಸಮಾಪ್ತಿ ಮಾಡಿದನಂತರ ಬ್ರಾಹ್ಮಣರಿಗೆ ಯಥಾಶಕ್ತಿ ದಕ್ಷಿಣೆಯನ್ನು ಕೊಡಬೇಕು. ನಕ್ತವ್ರತ ಮಾಡಿದವನು ಕೊನೆಯ

ಕಥಯಿತ್ವಾ ದ್ವಿಜೇಭ್ಯಸ್ತದ್ದದ್ಯಾಚ್ಛಕ್ತ್ಯಾ ಚ ದಕ್ಷಿಣಾಮ್ |
ನಕ್ತಭೋಜೀ ನರೋ ರಾಜನ್ ಬ್ರಾಹ್ಮಣಾನ್ ಭೋಜಯೇಚ್ಛುಭಾನ್ ||೧೦೦||

ಅಯಾಚಿತೇ ಬಲೀವರ್ದಂ ಸಹಿರಣ್ಯಂ ಪ್ರದಾಪಯೇತ್ |
ಅಮಾಂಸಾಶೀ ನರೋ ಯಸ್ತು ಪ್ರದದೇದ್ಗಾಂ ಸದಕ್ಷಿಣಾಮ್ ||೧೦೧||

ಧಾತ್ರೀಸ್ನಾಯೀ ನರೋ ದದ್ಯಾದ್ದಧಿಮಾಕ್ಷಿಕಮೇವ ಚ |
ಫಲಾನಾಂ ನಿಯಮೇ ರಾಜನ್ ಫಲದಾನಂ ಸಮಾಚರೇತ್ ||೧೦೨||

ತೈಲಸ್ಥಾನೇ ಘೃತಂ ದೇಯಂ ಘೃತಸ್ಥಾನೇ ಪಯಃ ಸ್ಮೃತಮ್ |
ಧಾನ್ಯಾನಾಂ ನಿಯಮೇ ರಾಜನ್ ದೀಯಂತೇ ಶಾಲಿತಂಡುಲಾಃ ||೧೦೩||

ದದ್ಯಾದ್ಭೂಶಯನೇ ಶಯ್ಯಾಂ ಸತೂಲಾಂ ಸಪರಿಚ್ಛದಾಮ್ |
ಪತ್ರಭೋಜೀ ನರೋ ರಾಜನ್ ಭಾಜನಂ ಘೃತಸಂಯುತಮ್ ||೧೦೪||

ಮೌನೀ ಘಂಟಾಂ ತಿಲಾಂಶ್ಚೈವ ಸಹಿರಣ್ಯಂ ಪ್ರದಾಪಯೇತ್ |
ದಂಪತ್ಯೋರ್ಭೋಜನಂ ದೇಯಂ ನಿಃಸ್ನೇಹಂ ಸರ್ಪಿಷಾಯುತಮ್ ||೧೦೫||

---

ದಿನ ಬ್ರಾಹ್ಮಣರ ಭೋಜನ ಮಾಡಿಸಬೇಕು. ||೧೦೦|| ಅಯಾಚಿತ ವ್ರತ ಮಾಡಿದವನು ಶ್ರೇಷ್ಠ ಜಾತಿಯ ಒಂದು ಎತ್ತನ್ನು ಸುವರ್ಣದೊಂದಿಗೆ ದಾನಮಾಡಬೇಕು. ಮಾಂಸಾಹಾರಿ ಯಾಗದವನು ಅರ್ಥಾತ್ ಸದಾ ಶಾಖಾಹಾರಿಯಾಗಿದ್ದವನು ದಕ್ಷಿಣಾಸಹಿತ ಗೋದಾನ ಮಾಡಬೇಕು. ||೧೦೧|| ಧಾತ್ರಿ ಸ್ನಾನ ಮಾಡಿದವನು (ಕಾರ್ತಿಕದಲ್ಲಿ ನಿತ್ಯ ನೆಲ್ಲೀಕಾಯಿ ಹಚ್ಚಿಕೊಂಡು ಸ್ನಾನ ಮಾಡಿದವನು) ಕೊನೆಯದಿನ ಬ್ರಾಹ್ಮಣರಿಗೆ ಮೊಸರು ಮತ್ತು ಜೇನುತುಪ್ಪವನ್ನು ದಾನಮಾಡಬೇಕು. ಕೇವಲ ಫಲಗಳನ್ನು ತಿನ್ನುವ ನಿಯಮವಿದ್ದವರು ಫಲದಾನಮಾಡಬೇಕು. ||೧೦೨|| ಚಾತುರ್ಮಾಸ್ಯದಲ್ಲಿ ಎಣ್ಣೆಯನ್ನು ಬಿಟ್ಟವನು ಘೃತವನ್ನು, ಘೃತವನ್ನು ಬಿಟ್ಟವನು ಹಾಲನ್ನು ದಾನವಾಗಿ ಕೊಡಬೇಕು. ಯಾವುದಾದರೂ ಧಾನ್ಯನಿಯಮವಿದ್ದರೆ ಸವಣಕ್ಕಿಯ ದಾನಮಾಡಬೇಕು. ||೧೦೩|| ಭೂಶಯನದ ನಿಯಮವಿದ್ದರೆ ಮೆತ್ತಗಿನ ಅರಳೆ ಹಾಸಿಗೆ. ತಲೆದಿಂಬು, ಹೊದ್ದುಕೊಳ್ಳುವ ಶಾಲು ಮುಂತಾದ ಪರಿಚ್ಛದಗಳನ್ನು ಬ್ರಾಹ್ಮಣನಿಗೆ ಕೊಡಬೇಕು. ಪತ್ರಾವಳೀ ಭೋಜನದ ವ್ರತವಿದ್ದವನು ಘೃತದಿಂದ ತುಂಬಿದ ಪಾತ್ರೆಯನ್ನು ಕೊಡಬೇಕು. ||೧೦೪|| ಮೌನವ್ರತಧಾರಣ ಮಾಡಿದವನು ಘಂಟೆ, ಎಳ್ಳು, ಹಾಗೂ ಹಿರಣ್ಯ ದಾನಮಾಡಬೇಕು. ಇದಲ್ಲದೇ ಎಣ್ಣೆಯನ್ನು ಉಪಯೋಗಿಸದೇ ಕೇವಲ ಕರಗಿದ ತುಪ್ಪದಲ್ಲಿ (ಸರ್ಪಿಸ್ = ಕರಗಿದ ತುಪ್ಪ, ಘೃತ = ಗಟ್ಟಿಯಾದ ತುಪ್ಪ) ಮಾಡಿದ ಪದಾರ್ಥಗಳಿಂದ ದಂಪತೀ ಭೋಜನ ಮಾಡಿಸಬೇಕು. ||೧೦೫|| ಚಾತುರ್ಮಾಸ್ಯದಲ್ಲಿ

ಧಾರಣೇ ತು ಸ್ವಕೇಶಾನಾಮಾದರ್ಶಂ ದಾಪಯೇದ್ಬುಧಃ ।
ಉಪಾನಹೌ ಪ್ರದಾತವ್ಯೇ ಉಪಾನತ್ಪರಿವರ್ಜನಾತ್ ॥೧೦೬॥

ಲವಣಸ್ಯ ಚ ಸಂತ್ಯಾಗೇ ಶರ್ಕರಾಂ ಚ ಪ್ರದಾಪಯೇತ್ ।
ನಿತ್ಯಂ ದೀಪಃ ಪ್ರದೇಯಸ್ತು ವಿಷ್ಣೋರ್ವಾ ವಿಬುಧಾಲಯೇ ॥೧೦೭॥

ಸದೀಪಂ ಸಘೃತಂ ತಾಮ್ರಂ ಕಾಂಚನಂ ವಾ ದಶಾಯುತಮ್ ।
ಪ್ರದದ್ಯಾದ್ವಿಷ್ಣುಭಕ್ತಾಯ ವ್ರತಸಂಪೂರ್ತಿಹೇತವೇ ॥೧೦೮॥

ಏಕಾಂತರೋಪವಾಸೇ ತು ಕುಂಭಾನಷ್ಟೌ ಪ್ರದಾಪಯೇತ್ ।
ಸವಸ್ತ್ರಾನ್ ಕಾಂಚನೋಪೇತಾನ್ ಸರ್ವಾನ್ ಸಾಲಂಕೃತಾನ್ ಶುಭಾನ್ ॥೧೦೯॥

ಸರ್ವೇಷಾಮಪ್ಯಲಾಭೇ ತು ಯಥೋಕ್ತಕರಣಂ ವಿನಾ ।
ದ್ವಿಜವಾಕ್ಯಂ ಸ್ಮೃತಂ ರಾಜನ್ ಸಂಪೂರ್ಣವ್ರತಸಿದ್ಧಿದಮ್ ॥೧೧೦॥

ನತ್ವಾ ವಿಸರ್ಜಯೇದ್ವಿಪ್ರಾಂಸ್ತತೋ ಭುಂಜೀತ ಚ ಸ್ವಯಮ್ ।
ಯತ್ತ್ಯಕ್ತಂ ಚತುರೋ ಮಾಸಾನ್ ಸಮಾಪ್ತಂ ತಸ್ಯ ಚಾಚರೇತ್ ॥೧೧೧॥

---

ಅಥವಾ ಕಾರ್ತಿಕದಲ್ಲಿ ಕ್ಷೌರಮಾಡಿಸಿ ಕೊಳ್ಳದೇ ಕೂದಲುಗಳನ್ನು ಇಟ್ಟುಕೊಂಡವನು ಕೊನೆಯದಿನ ಬ್ರಾಹ್ಮಣನಿಗೆ ದರ್ಪಣ (ಕನ್ನಡಿ) ದಾನವನ್ನು, ಪಾದರಕ್ಷೆಗಳನ್ನು ಬಿಟ್ಟವನು ೨ ಪಾದರಕ್ಷೆಗಳನ್ನು ಕೊಡಬೇಕು. ॥೧೦೬॥ ಉಪ್ಪು ಬಿಟ್ಟವನು ಸಕ್ಕರೆಯ ದಾನವನ್ನು ಮಾಡಬೇಕು ಮತ್ತು ಪ್ರತಿದಿನ ವಿಷ್ಣುಮಂದಿರದಲ್ಲಿಯಾಗಲೀ ಅಥವಾ ದೇವಾಲಯದಲ್ಲಾಗಲೀ ದೀಪವನ್ನು ಹಚ್ಚಿಡಬೇಕು. ॥೧೦೭॥ ಈ ರೀತಿ ದೇವಾಲಯದಲ್ಲಿ ಒಂದು ಲಕ್ಷತುಪ್ಪದ ದೀಪಗಳನ್ನು ತಾಮ್ರದ ಅಥವಾ ಸುವರ್ಣದ ಪಾತ್ರೆಗಳಲ್ಲಿ ಹಚ್ಚಿಟ್ಟು ವ್ರತಸಂಪೂರ್ತಿಗಾಗಿ ವಿಷ್ಣುಭಕ್ತನಿಗೆ ದೀಪದಾನವನ್ನು ಕೊಡಬೇಕು. ॥೧೦೮॥ ಧಾರಣೆ ಪಾರಣೆ ಮಾಡಿದವರು ಎಂಟು ಕುಂಭಗಳನ್ನು ವಸ್ತ್ರಗಳಿಂದ ಹೊದಿಸಿ ಚೆನ್ನಾಗಿ ಅಲಂಕರಿಸಿ ಒಳಗೆ ಸುವರ್ಣನಾಣ್ಯಗಳನ್ನು ಹಾಕಿ ಸತ್ಪಾತ್ರನಾದ ಬ್ರಾಹ್ಮಣನಿಗೆ ದಾನಮಾಡಬೇಕು. ॥೧೦೯॥ ಹೇ ರಾಜನ್, ಇದುವರೆಗೆ ಹೇಳಿದ ಪದಾರ್ಥಗಳಾವೂ ಸಿಗದಿದ್ದಾಗ ವಿಧ್ಯುಕ್ತವಾಗಿ ಮಾಡದಾಗದಿದ್ದರೆ ಅಲ್ಲಿದ್ದ ಬ್ರಾಹ್ಮಣರು ಹೇಳಿದಂತೆ ನಡೆಯುವದರಿಂದ ಮಾಡಿದ ವ್ರತವು ಸಂಪೂರ್ಣವಾಗಿ ಫಲಕಾರಿಯಾಗುವದು. ॥೧೧೦॥ ಅಲ್ಲಿದ್ದ ಬ್ರಾಹ್ಮಣರಿಗೆ ನಮಸ್ಕರಿಸಿ ಹಿಡಿದ ವ್ರತವನ್ನು ವಿಸರ್ಜಿಸಬೇಕು. ಅನಂತರ ದ್ವಾದಶೀಪಾರಣೆಯನ್ನು ಮಾಡಬೇಕು. ಚಾತುರ್ಮಾಸ್ಯದಲ್ಲಿ ನಾಲ್ಕುತಿಂಗಳು ಯಾವದು ತ್ಯಜಿಸಲ್ಪಟ್ಟಿರುತ್ತದೆಯೋ ಅದರ ಸಮಾಪ್ತಿಯನ್ನು ಪ್ರಬೋಧಿನೀ ದ್ವಾದಶಿಯ ದಿನ ಆಚರಿಸಬೇಕು. ॥೧೧೧॥ ಹೇ ರಾಜೇಂದ್ರ, ಈ ಪ್ರಕಾರ ಆಚರಿಸುವವನು

ಏವಂ ಯ ಆಚರೇತ್ ಪ್ರಾಜ್ಞಃ ಸೋऽನಂತಫಲಮಾಪ್ನುಯಾತ್ ।
ಅವಸಾನೇ ತು ರಾಜೇಂದ್ರ ವಾಸುದೇವಪುರಂ ವ್ರಜೇತ್ ॥೧೧೨॥

ಯಶ್ಚಾವಿಘ್ನಂ ಸಮಾಪ್ಯೈವ ಚಾತುರ್ಮಾಸ್ಯ ವ್ರತಂ ನೃಪ ।
ಸ ಭವೇತ್ಕೃತ ಕೃತ್ಯಸ್ತು ನ ಪುನರ್ಮಾನುಷೋ ಭವೇತ್ ॥೧೧೩॥

ಏತತ್ಕೃತ್ವಾ ಮಹೀಪಾಲ ಪರಿಪೂರ್ಣಂ ವ್ರತಂ ಭವೇತ್ ।
ವ್ರತವ್ಯೆಕಲ್ಯಮಾಸಾದ್ಯ ಹ್ಯಂಧಃ ಕುಷ್ಠೀ ಪ್ರಜಾಯತೇ ॥೧೧೪॥

ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟೋऽಹಮಿಹ ತ್ವಯಾ ।
ಪಠನಾಚ್ಛ್ರವಣಾದ್ವಾಪಿ ಭವೇದ್ಗೋದಾನಜಂ ಫಲಮ್ ॥೧೧೫॥

॥ ಇತಿ ಶ್ರೀಸ್ಕಂದಪುರಾಣೇ ಕಾರ್ತಿಕಶುಕ್ಲಪ್ರಬೋಧಿನ್ಯೇಕಾದಶೀ ವ್ರತಮಾಹಾತ್ಮ್ಯಂ ಸಂಪೂರ್ಣಮ್ ॥

---

ಅನಂತವಾದ ಫಲವನ್ನು ಹೊಂದಿ ಅವಸಾನದ ನಂತರ ವಾಸುದೇವನ ವೈಕುಂಠಲೋಕಕ್ಕೆ ಹೋಗುತ್ತಾನೆ. ॥೧೧೨॥ ಹೇ ರಾಜಾ, ಚಾತುರ್ಮಾಸ್ಯ ವ್ರತವನ್ನು ನಿರ್ವಿಘ್ನವಾಗಿ ಸಮಾಪ್ತಿಗೊಳಿಸುವವನೇ ಕೃತಕೃತ್ಯನು ಮತ್ತು ಅವನೆಂದಿಗೂ ಪುನಃ ಮರ್ತ್ಯಲೋಕದಲ್ಲಿ ಜನಿಸುವುದಿಲ್ಲ. ॥೧೧೩॥ ಈ ರೀತಿ ವಿಧ್ಯುಕ್ತವಾಗಿ ಸಮಾಪ್ತಿಯನ್ನು (ಉದ್ಯಾಪನೆ) ಆಚರಿಸಿದವನ ವ್ರತವೇ ಪರಿಪೂರ್ಣವಾಗಿ ಫಲಕಾರಿಯಾಗುತ್ತದೆ. ವ್ರತಭಂಗವಾದರೆ ಅಂಥವನು ಅಂಧನೂ, ಕುಷ್ಠರೋಗಿಯೂ ಆಗಿ ಜನಿಸುವನು. ॥೧೧೪॥ ಹೇ ಧರ್ಮರಾಜಾ, ನಿನ್ನ ಎಲ್ಲ ಪ್ರಶ್ನೆಗಳಿಗೆ ಉತ್ತರಿಸಿದ್ದೇನೆ. ಪ್ರಬೋಧಿನೀ ಏಕಾದಶೀ ಮಹಾತ್ಮೆಯ ಪಠನ ಹಾಗೂ ಶ್ರವಣದಿಂದ ಗೋದಾನದ ಫಲವು ಪ್ರಾಪ್ತವಾಗುವದು. ॥೧೧೫॥

॥ ಇಲ್ಲಿಗೆ ಶ್ರೀಸ್ಕಂದಪುರಾಣದಲ್ಲಿಯ ಕಾರ್ತಿಕಶುಕ್ಲ "ಪ್ರಬೋಧಿನೀ ಏಕಾದಶೀ" ವ್ರತಮಹಾತ್ಮೆಯು ಸಮಾಪ್ತವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

# ಅಧಿಕ ಮಾಸ ಶುಕ್ಲೈಕಾದಶೀ ವ್ರತ ಕಥಾ

ಯುಧಿಷ್ಠಿರ ಉವಾಚ

ಮಲಿಮ್ಲುಚಸ್ಯ ಮಾಸಸ್ಯ ಕಾ ವಾ ಏಕಾದಶೀ ಭವೇತ್ ।
ಕಿಂ ನಾಮ ಕೋ ವಿಧಿಸ್ತಸ್ಯಾಃ ಕಥಯಸ್ವ ಜನಾರ್ದನ ॥೧॥

ಶ್ರೀಕೃಷ್ಣ ಉವಾಚ

ಮಲಮಾಸಸ್ಯ ಯಾ ಪುಣ್ಯಾ ಪ್ರೋಕ್ತಾ ನಾಮ್ನಾ ಚ ಪದ್ಮಿನೀ ।
ಸೋಪೋಷಿತಾ ಪ್ರಯತ್ನೇನ ಪದ್ಮನಾಭಪುರಂ ನಯೇತ್ ॥೨॥

ಮಲಮಾಸೇ ಮಹತ್ಪುಣ್ಯಾ ಕೀರ್ತಿತಾ ಕಲ್ಮಷಾಪಹಾ ।
ತಸ್ಯಾಃ ಫಲಂ ಕಥಯಿತುಂ ನ ಶಕ್ತಶ್ಚತುರಾನನಃ ॥೩॥

ನಾರದಾಯ ಪುರಾ ಪ್ರೋಕ್ತಂ ವಿಧಿನಾ ವ್ರತಮುತ್ತಮಮ್ ।
ಪದ್ಮಿನ್ಯಾಃ ಪಾಪರಾಶಿಘ್ನಂ ಭುಕ್ತಿಮುಕ್ತಿಫಲಪ್ರದಮ್ ॥೪॥

ಶ್ರುತ್ವಾ ವಾಕ್ಯಂ ಮುರಾರೇಸ್ತು ಪ್ರೋವಾಚ ಮುದಿತಾನ್ವಿತಃ ।
ಯುಧಿಷ್ಠಿರೋ ಜಗನ್ನಾಥಂ ವಿಧಿಂ ಪಪ್ರಚ್ಛ ಧರ್ಮವಿತ್ ॥೫॥

---

"ಹೇ ಶ್ರೀಕೃಷ್ಣ ಪರಮಾತ್ಮಾ, ಜನಾರ್ದನಾ, ಅಧಿಕಮಾಸದಲ್ಲಿ ಬರುವ ಏಕಾದಶಿಯ ಹೆಸರೇನು ? ಆ ದಿನ ಆಚರಿಸಬೇಕಾದ ನಿಯಮಗಳಾವವು ? ಈ ಏಕಾದಶಿಯ ಮಹಿಮೆಯನ್ನು ತಿಳಿಸಿ ಅನುಗ್ರಹಿಸು" ಎಂದು ಯುಧಿಷ್ಠಿರನು ಪ್ರಾರ್ಥಿಸಲು ॥೧॥ ಶ್ರೀ ಕೃಷ್ಣನು ಹೇಳುತ್ತಾನೆ - ಹೇ ಯುಧಿಷ್ಠಿರ, ಅಧಿಕ ಮಾಸದಲ್ಲಿ ಬರುವ ಅಧಿಕ ಪುಣ್ಯಪ್ರದವಾದ ಏಕಾದಶಿಗೆ "ಪದ್ಮಿನೀ" ಎಂದು ಹೆಸರು. ಇದು ಅಂದಿನ ದಿನ ಉಪವಾಸ ಮಾಡುವವನನ್ನು ಪದ್ಮನಾಭನ ವೈಕುಂಠ ಲೋಕಕ್ಕೆ ಕರೆದೊಯ್ಯುವದು. ॥೨॥ ಕಲ್ಮಷಗಳನ್ನೆಲ್ಲ ಕಳೆದು ಮಹತ್ಪುಣ್ಯವನ್ನು ಕೊಡುವ ಈ ಪದ್ಮಿನೀ ಏಕಾದಶಿಯ ಮಹಿಮೆಯನ್ನು ಹಾಗೂ ವ್ರತಾನುಷ್ಠಾನದ ಫಲವನ್ನು ಹೇಳಲು ಚತುರ್ಮುಖನಾದ ಬ್ರಹ್ಮನಿಗೂ ಸಾಧ್ಯವಾಗುವದಿಲ್ಲ. ॥೩॥ ಹಿಂದಕ್ಕೆ ಚತುರ್ಮುಖ ಬ್ರಹ್ಮನು ಪಾಪರಾಶಿಗಳನ್ನು ಕಳೆಯುವ ಮತ್ತು ಭುಕ್ತಿ ಮುಕ್ತಿ ಫಲಗಳನ್ನು ಕೊಡುವ ಪದ್ಮಿನೀ ವ್ರತದ ಬಗ್ಗೆ ನಾರದನಿಗೆ ತಿಳಿಸಿದ್ದನು ॥೪॥ ಮುರಾರಿಯಾದ ಶ್ರೀ ಕೃಷ್ಣನ ಈ ಮಾತುಗಳನ್ನು ಕೇಳಿ ಹರ್ಷಿತನಾದ ಧರ್ಮಜ್ಞ ಯುಧಿಷ್ಠಿರನು ಪದ್ಮಿನೀ ವ್ರತ ಅನುಷ್ಠಾನದ ವಿಧಾನವನ್ನು ತಿಳಿಸುವಂತೆ ಶ್ರೀಕೃಷ್ಣನನ್ನು ಪ್ರಾರ್ಥಿಸಿದನು ॥೫॥ ಆಗ ರಾಜನ ಇಂಗಿತವನ್ನರಿತ ಶ್ರೀಕೃಷ್ಣನು ಪ್ರೀತಿಯಿಂದ ತನ್ನೆರಡು ನೇತ್ರ ಕಮಲಗಳನ್ನು ಅರಳಿಸಿ ಹೇಳಿದನು - ಹೇ ರಾಜನ್, ಮುನಿಗಳಿಗೂ

ಶ್ರುತ್ವಾ ರಾಜ್ಞಸ್ತು ವಚನಂ ಪ್ರೀತ್ಯುತ್ಫುಲ್ಲಾಂಬುಜೇಕ್ಷಣಃ ।
ಶೃಣು ರಾಜನ್ ಪ್ರವಕ್ಷ್ಯಾಮಿ ಮುನೀನಾಮಪ್ಯಗೋಚರಮ್ ॥೬॥

ದಶಮೀದಿವಸೇ ಪ್ರಾಪ್ತೇ ವ್ರತಾರಂಭೋ ವಿಧೀಯತೇ ।
ಕಾಂಸ್ಯಮಾಂಸಮಸೂರಾಂಶ್ಚ ಚಣಕಾನ್ ಕೋದ್ರವಾಂಸ್ತಥಾ ॥೭॥

ಶಾಕಂ ಮಧು ಪರಾನ್ನಂ ಚ ದಶಮ್ಯಾಮಷ್ಟ ವರ್ಜಯೇತ್ ।
ಹವಿಷ್ಯಾನ್ನಂ ಚ ಭುಂಜೀತ ಅಕ್ಷಾರಲವಣಂ ತಥಾ ॥೮॥

ಭೂಮಿಶಾಯೀ ಬ್ರಹ್ಮಚಾರೀ ಭವೇಚ್ಚ ದಶಮೀದಿನೇ ॥೯॥

ಏಕಾದಶೀದಿನೇ ಪ್ರಾಪ್ತೇ ಪ್ರಾತರುತ್ಥಾಯ ಸಾದರಮ್ ।
ವಿಧಾಯ ಚ ಮಲೋತ್ಸರ್ಗಂ ನ ಕುರ್ಯಾದ್ದಂತಧಾವನಮ್ ॥೧೦॥

ಕೃತ್ವಾ ದ್ವಾದಶಗಂಡೂಷಾನ್ ಶುಚಿರ್ಭೂತ್ವಾ ಸಮಾಹಿತಃ ।
ಸೂರ್ಯೋದಯೇ ಶುಭೇ ತೀರ್ಥೇ ಸ್ನಾನಾರ್ಥಂ ಪ್ರವ್ರಜೇತ್ಸುಧೀಃ ॥೧೧॥

ಗೋಮಯಂ ಮೃತ್ತಿಕಾಂ ಗೃಹ್ಯ ತಿಲಾನ್ ದರ್ಭಾನ್ ಶುಚಿಸ್ತಥಾ ।
ಚೂರ್ಣೈರಾಮಲಕೀಭೂತ್ಯೈರ್ವಿಧಿನಾ ಸ್ನಾನಮಾಚರೇತ್ ॥೧೨॥

---

ಕೂಡ ಅಗೋಚರವಾದ ಪದ್ಮಿನೀ ವ್ರತದ ಬಗ್ಗೆ ತಿಳಿಸುವೆನು ಕೇಳು. ॥೬॥ ದಶಮೀ ದಿನ ಈ ವ್ರತದ ಪ್ರಾರಂಭವಾಗುತ್ತದೆ. ಆ ದಿನ, ಕಂಚಿನಪಾತ್ರೆ, ಮಾಂಸ, ಮಸೂರ (ಕಾಡುಗಡಲೆ), ಕಡಲೆ (ಚಣಕ), ಕೋದ್ರವ (ಹಾರಕ ಧಾನ್ಯ). ॥೭॥ ಸಲ್ಯೆ, ಜೇನು ತುಪ್ಪ ಮತ್ತು ಪರಾನ್ನ ಈ ಎಂಟು ಪದಾರ್ಥಗಳನ್ನು ವರ್ಜಿಸಬೇಕು. ಅಂದು ಹವಿಷ್ಯಾನ್ನವನ್ನು ಮತ್ತು ಸೈಂಧಲವಣವನ್ನು ಸ್ವೀಕರಿಸಬೇಕು ॥೮॥ ದಶಮೀ ರಾತ್ರಿ ಬ್ರಹ್ಮಚಾರಿಯಾಗಿದ್ದು ನೆಲದ ಮೇಲೆ ಮಲಗಬೇಕು ॥೯॥ ಮರುದಿನ ಏಕಾದಶೀ ಬರಲು ಪ್ರಾತಃಕಾಲದಲ್ಲೆದ್ದು ವಿಧಿಪೂರ್ವಕ ಮಲೋತ್ಸರ್ಜನಾದಿಗಳನ್ನು ಮಾಡಿ ದಂತಧಾವನವನ್ನು ಮಾಡಿಕೊಳ್ಳಬಾರದು ॥೧೦॥ ಆದರೆ ಹನ್ನೆರಡು ಸಲ ನೀರಿನಿಂದ ಬಾಯಿ ಮುಕ್ಕಳಿಸಿ ದಂತ ಶುದ್ಧಿಯನ್ನು ಮಾಡಿಕೊಳ್ಳಬೇಕು. ಸೂರ್ಯೋದಯವಾದಾಕ್ಷಣ ಸ್ನಾನಕ್ಕಾಗಿ ಬಹಿರ್ಜಲಾಶಯಕ್ಕೆ ಹೊರಡಬೇಕು. ॥೧೧॥ ಗೋಮಯ, ಮೃತ್ತಿಕಾ, ತಿಲ, ದರ್ಭ ಇವುಗಳನ್ನು ತೆಗೆದುಕೊಂಡು ಶುಚಿರ್ಭೂತನಾಗಿ ಆಮಲಚೂರ್ಣವನ್ನು ಮೈಗೆ ಲೇಪಸಿಕೊಂಡು ವಿಧ್ಯುಕ್ತವಾಗಿ ಸ್ನಾನಮಾಡಬೇಕು. ॥೧೨॥ ಹೇ ಮೃತ್ತಿಕೆ, ಶತಬಾಹುಗಳುಳ್ಳ ವರಾಹರೂಪಿ ಶ್ರೀಕೃಷ್ಣನಿಂದ ನೀನು ಸಾಗರದೊಳಗಿಂದ ಮೇಲೆ ಎತ್ತಿಹಿಡಿಯಲ್ಪಟ್ಟು ಚತುರ್ಮುಖ ಬ್ರಹ್ಮನಿಗೆ ಸೃಷ್ಟಿಕಾರ್ಯಕ್ಕಾಗಿ ಕೊಡಲ್ಪಟ್ಟಿರುವಿ.

ಉದ್ಧೃತಾಸಿ ವರಾಹೇಣ ಕೃಷ್ಣೇನ ಶತಬಾಹುನಾ ।
ಮೃತ್ತಿಕೇ ಬ್ರಹ್ಮದತ್ತಾಸಿ ಕಾಶ್ಯಪೇನಾಭಿಮಂತ್ರಿತಾ ॥೧೩॥

ತ್ವಂ ಮೇ ಕುರು ಪವಿತ್ರಾಂಗಂ ಲಗ್ನಾ ನೇತ್ರೇ ಶಿರೋರುಹೇ ।
ಹರಿಪೂಜನಯೋಗ್ಯಂ ಮಾಂ ಮೃತ್ತಿಕೇ ಕುರು ತೇ ನಮಃ ॥೧೪॥

ಸರ್ವೌಷಧಿಸಮುತ್ಪನ್ನಂ ಗವೋದರಮಧಿಷ್ಠಿತಮ್ ।
ಪವಿತ್ರಕರಣಂ ಭೂಮೇರ್ಮಾಂ ಪಾವಯತು ಗೋಮಯಮ್ ॥೧೫॥

ಬ್ರಹ್ಮಷ್ಠೀವನಸಂಭೂತಾ ಧಾತ್ರೀ ಭುವನಪಾವನೀ ।
ಸಂಸ್ಪೃಷ್ಟಾ ಪಾವಯಾಂಗಂ ಮೇ ನಿರ್ಮಲಂ ಕುರು ತೇ ನಮಃ ॥೧೬॥

ದೇವದೇವ ಜಗನ್ನಾಥ ಶಂಖಚಕ್ರಗದಾಧರ ।
ದೇಹಿ ವಿಷ್ಣೋ ಮಮಾನುಜ್ಞಾಂ ತವ ತೀರ್ಥಾವಗಾಹನೇ ॥೧೭॥

ವಾರುಣಾಂಶ್ಚ ಜಪೇನ್ಮಂತ್ರಾನ್ ಸ್ನಾನಂ ಕುರ್ಯಾದ್ವಿಧಾನತಃ ।
ಗಂಗಾದಿತೀರ್ಥಂ ಸಂಸ್ಮೃತ್ಯ ಯತ್ರ ಕುತ್ರ ಜಲಾಶಯೇ ॥೧೮॥

ಪಶ್ಚಾತ್ಸಂಮಾರ್ಜಯೇದ್ಗಾತ್ರಂ ವಿಧಿನಾ ನೃಪಸತ್ತಮ ।
ಮುಖೇ ಪೃಷ್ಠೇ ಚ ಹೃದಯೇ ಬಾಹ್ವೋಃ ಶಿರಸಿ ಚಾಪ್ಯಧಃ ॥೧೯॥

---

ಕಾಶ್ಯಪ ಋಷಿಗಳಿಂದ ಅಭಿಮಂತ್ರಿತಳಾಗಿರುವಿ ॥೧೩॥ ಹೇ ಮೃತ್ತಿಕೆ, ನನ್ನ ನೇತ್ರಗಳ ಮತ್ತು ತಲೆಗೂದಲುಗಳ ಮೇಲೆ ಧಾರಣ ಮಾಡಲ್ಪಟ್ಟ ನೀನು ನನ್ನನ್ನು ಪವಿತ್ರಗೊಳಿಸು. ಶ್ರೀ ಹರಿಯ ಪೂಜೆಯನ್ನು ಮಾಡುವ ಯೋಗ್ಯತೆಯನ್ನು ತಂದುಕೊಡು. ಹೇ ಮೃತ್ತಿಕೆ ನಿನಗೆ ನಮಸ್ಕರಿಸುತ್ತೇನೆ ॥೧೪॥ ಗೋವಿನ ಉದರದಲ್ಲಿರುವ, ಸಮಸ್ತಭೂಮಿಯನ್ನೇ ಪವಿತ್ರಗೊಳಿಸುವ, ಸರ್ವ ಔಷಧಿಗಳಿಂದ ಉತ್ಪನ್ನವಾದ ಗೋಮಯವು ನನ್ನನ್ನು ಪಾವನಗೊಳಿಸಲಿ ॥೧೫॥ ಬ್ರಹ್ಮದೇವರ ಷ್ಠೀವನದಿಂದ(ಉಗುಳುವುದರಿಂದ) ಉತ್ಪನ್ನಳಾದ, ಭುವನ ಪಾವನಿಯಾದ ಧಾತ್ರಿಯೇ, ನನ್ನಿಂದ ಧಾರಣ ಮಾಡಲ್ಪಟ್ಟ ನೀನು ನನ್ನ ದೇಹವನ್ನೆಲ್ಲ ಪವಿತ್ರಗೊಳಿಸು. ನಿನಗೆ ನಮಿಸುತ್ತೇನೆ. ॥೧೬॥ ಹೇ ದೇವದೇವ, ಜಗನ್ನಾಥ, ಶಂಖಚಕ್ರಗಧಾಧರ, ಹೇ ವಿಷ್ಣೋ, ನಿನ್ನ ತೀರ್ಥದಲ್ಲಿ ಸ್ನಾನಮಾಡಲು ನನಗೆ ಅನುಜ್ಞೆಯನ್ನು ಕೊಡು. ॥೧೭॥ ಈ ರೀತಿ ಪ್ರಾರ್ಥನೆಗಳನ್ನು ಸಲ್ಲಿಸಿ, ವಾರುಣಮಂತ್ರಗಳನ್ನು ಜಪಿಸಿ ವಿಧಿಪೂರ್ವಕ ಸ್ನಾನವನ್ನು ಮಾಡಬೇಕು. ಯಾವುದೇ ಜಲಾಶಯವಿದ್ದರೂ ಅಲ್ಲಿ ಗಂಗಾದಿತೀರ್ಥಗಳನ್ನು ಸ್ಮರಿಸಿ ಪೂರ್ವೋಕ್ತ ಪ್ರಾರ್ಥನೆಗಳನ್ನು ಸಲ್ಲಿಸಿ ಸ್ನಾನಮಾಡಬೇಕು. ॥೧೮॥ ಹೇ ಧರ್ಮರಾಜಾ, ಮುಖ, ಪೃಷ್ಠ, ಹೃದಯ, ಬಾಹುಗಳು, ಶಿರಸ್ಸು ಮತ್ತು ಕೆಳಗೆ ಹೀಗೆ ದೇಹದ ಎಲ್ಲೆಡೆ ಚೆನ್ನಾಗಿ ತಿಕ್ಕಿ ತೊಳೆದುಕೊಂಡು ಸ್ನಾನಮಾಡಿ ॥೧೯॥ ನಂತರ ಶುದ್ಧ ವಸ್ತ್ರದಿಂದ ಒರೆಸಿಕೊಂಡು ಅಖಂಡಿತವಾದ (ಹರಿಯದಿರುವ) ಬಿಳಿ

**ಪರಿಧಾಯ ಸುಖಂ ವಾಸಃ ಶುಕ್ಲಂ ಶುಚಿ ಹ್ಯಖಂಡಿತಮ್ ।**
**ತತಃ ಕುರ್ಯಾದ್ಧರೇಃ ಪೂಜಾಂ ಮಹಾಪಾಪಂ ವಿನಶ್ಯತಿ ॥೨೦॥**

**ಸಂಧ್ಯಾಮುಪಾಸ್ಯ ವಿಧಿನಾ ತರ್ಪಯೇಚ್ಚ ಪಿತೄನ್ ಸುರಾನ್ ।**
**ಹರೇರ್ಮಂದಿರಮಾಗತ್ಯ ಪೂಜಯೇತ್ಕಮಲಾಪತಿಮ್ ॥೨೧॥**

**ಸ್ವರ್ಣಮಾಷಕೃತಂ ದೇವಂ ರಾಧಿಕಾಸಹಿತಂ ಹರಿಮ್ ।**
**ಪಾರ್ವತ್ಯಾ ಸಹಿತಂ ದೇವಂ ಪೂಜಯೇದ್ವಿಧಿಪೂರ್ವಕಮ್ ॥೨೨॥**

**ಕುಂಭೋಪರಿ ನ್ಯಸೇದ್ದೇವಂ ತಾಮ್ರಪಾತ್ರೇಽಥ ಮೃಣ್ಮಯೇ ।**
**ದಿವ್ಯರತ್ನಸಮಾಯುಕ್ತೇ ದಿವ್ಯಗಂಧಾನುವಾಸಿತೇ ॥೨೩॥**

**ತಸ್ಯೋಪರಿ ನ್ಯಸೇತ್ಪಾತ್ರಂ ತಾಮ್ರಂ ರೌಪ್ಯಂ ಹಿರಣ್ಮಯಮ್ ।**
**ತಸ್ಮಿನ್ ಸಂಸ್ಥಾಪಯೇದ್ದೇವಂ ವಿಧಿನಾ ಪೂಜಯೇತ್ತತಃ ॥೨೪॥**

**ಸಂಸ್ಥಾಪ್ಯ ಸಲಿಲೈಃ ಶ್ರೇಷ್ಠೈರ್ಗಂಧಧೂಪಾದಿವಾಸಿತೈಃ ।**
**ಚಂದನಾಗರುಕರ್ಪೂರೈಃ ಪೂಜಯೇದ್ದೇವಮೀಶ್ವರಮ್ ॥೨೫॥**

---

ವಸ್ತ್ರಗಳನ್ನು ಉಟ್ಟುಕೊಳ್ಳಬೇಕು. ಆಮೇಲೆ ಸಂಧ್ಯಾವಂದನ ಹರಿಪೂಜಾದಿಗಳನ್ನು ಮಾಡುವದರಿಂದ ಮಹಾಪಾಪವು ನಾಶವಾಗುವದು ॥೨೦॥ ವಿಧಿಪೂರ್ವಕ ಸಂಧ್ಯಾವಂದನೆಯನ್ನು ಮಾಡಿ ದೇವಮಂದಿರಕ್ಕೆ ಬಂದು ದೇವಪೂಜೆಯನ್ನು ಮಾಡಬೇಕು (ಏಕಾದಶೀ ತರ್ಪಣಗಳಿಲ್ಲ. ಇಲ್ಲಿ ಪಿತೃತರ್ಪಣ, ದೇವತರ್ಪಣಗಳು ನಿತ್ಯ ಕರ್ಮಗಳೆಂದು ಉಕ್ತವಾಗಿದ್ದು ಅವುಗಳನ್ನು ದ್ವಾದಶೀ ಕೊಡಬೇಕು.) ॥೨೧॥ ಒಂದು ಮಾಸ ಸುವರ್ಣದಿಂದ ನಿರ್ಮಿತವಾದ ರಾಧಾಸಹಿತ ಶ್ರೀಕೃಷ್ಣನನ್ನು ಮೊದಲು ವಿಧಿಪೂರ್ವಕ ಪೂಜಿಸಬೇಕು. ಅದರಂತೆ ಪಾರ್ವತೀಸಹಿತ ಶಿವನನ್ನೂ ಪೂಜಿಸಬೇಕು ॥೨೨॥ ಈ ಸುವರ್ಣ ಪ್ರತಿಮೆಯನ್ನು ಒಂದು ಪೂರ್ಣಕಲಶದ ಮೇಲ್ಭಾಗದಲ್ಲಿಡಬೇಕು. ತಾಮ್ರದಿಂದಾಗಲೀ ಅಥವಾ ಮಣ್ಣಿನಿಂದಾಗಲೀ ಮಾಡಿದ ಕಲಶಕ್ಕೆ ದಿವ್ಯವಾದ ಗಂಧವನ್ನು ಲೇಪಿಸಿ, ಉತ್ತಮವಾದ ವಸ್ತ್ರಗಳನ್ನು ಹೊದಿಸಿ ಅಲಂಕರಿಸಬೇಕು. ॥೨೩॥ ಆ ಕಲಶದ ಮೇಲ್ಭಾಗದಲ್ಲಿ ತಾಮ್ರದ ಅಥವಾ ಬೆಳ್ಳಿಯ ಅಥವಾ ಸುವರ್ಣದ ಪಾತ್ರೆಯನ್ನಿಟ್ಟು ಅದರಲ್ಲಿ ದೇವಪ್ರತಿಮೆಯನ್ನು ಸ್ಥಾಪಿಸಿ ಪೂಜಿಸಬೇಕು ॥೨೪॥ ಶುದ್ಧೋದಕ ಸ್ನಾನ, ಶ್ರೇಷ್ಠವಾದ ಗಂಧ, ಧೂಪ, ದೀಪ, ಚಂದನ, ಅಗರು, ಕರ್ಪೂರ ಮುಂತಾದವುಗಳಿಂದ ರಾಧಾಕೃಷ್ಣನನ್ನು ಪೂಜಿಸಬೇಕು ॥೨೫॥ ನಾನಾ ಪ್ರಕಾರದ ಪುಷ್ಪಗಳು, ಕಸ್ತೂರೀ,

ನಾನಾಕುಸುಮಕಸ್ತೂರಿಕುಂಕುಮೇನ ಸಿತಾಂಬುಜೈಃ ।
ತತ್ಕಾಲಜಾತೈಃ ಕುಸುಮೈಃ ಪೂಜಯೇತ್ಪರಮೇಶ್ವರಮ್ ॥೨೬॥

ನೈವೇದ್ಯೈರ್ವಿವಿಧೈಃ ಶಕ್ತ್ಯಾ ತಥಾ ನೀರಾಜನಾದಿಭಿಃ ।
ಧೂಪೈರ್ದೀಪೈಃ ಸಕರ್ಪೂರೈಃ ಪೂಜಯೇತ್ಕೇಶವಂ ಶಿವಮ್ ॥೨೭॥

ನೃತ್ಯಗೀತಂ ತದಗ್ರೇ ತು ಕುರ್ಯಾದ್ಭಕ್ತಿಪುರಃಸರಮ್ ।
ನಾಲಪೇತ್ಪತಿತಾನ್ ಪಾಪಾಂಸ್ತಸ್ಮಿನ್ನಹನಿ ನ ಸ್ಪೃಶೇತ್ ॥೨೮॥

ನಾನೃತಂ ಹಿ ವದೇದ್ವಾಕ್ಯಂ ಸತ್ಯಪೂತಂ ವಚೋ ವದೇತ್ ।
ರಜಸ್ವಲಾಂ ನ ಸ್ಪೃಶೇಚ್ಚ ನ ನಿಂದೇದ್ಬ್ರಾಹ್ಮಣಂ ಗುರುಮ್ ॥೨೯॥

ಪುರಾಣಂ ಪುರತೋ ವಿಷ್ಣೋಃ ಶೃಣುಯಾತ್ ಸಹ ವೈಷ್ಣವೈಃ ।
ನಿರ್ಜಲಾ ಸಾ ಪ್ರಕರ್ತವ್ಯಾ ಯಾ ಚ ಶುಕ್ಲೇ ಮಲಿಮ್ಲುಚೇ ॥೩೦॥

ಜಲಪಾನೇನ ವಾ ಕುರ್ಯಾತ್ ದುಗ್ಧಾಹಾರೇಣ ನಾನ್ಯಥಾ ।
ರಾತ್ರೌ ಜಾಗರಣಂ ಕುರ್ಯಾದ್ಗೀತವಾದಿತ್ರಸಂಯುತಮ್ ॥೩೧॥

---

ಶ್ವೇತಕಮಲ ಮತ್ತು ಆ ಋತುವಿನಲ್ಲಿ ಉತ್ಪನ್ನವಾದ ನಾನಾ ಕುಸುಮಗಳು ಇವುಗಳಿಂದ ಪರಮಾತ್ಮನನ್ನು ಪೂಜಿಸಬೇಕು ॥೨೬॥ ಯಥಾಶಕ್ತಿ ವಿವಿಧ ಪದಾರ್ಥಗಳನ್ನು ನಿವೇದಿಸಿ, ಧೂಪ, ದೀಪ, ಕರ್ಪೂರ ಸಹಿತ ನೀರಾಜನಾದಿಗಳನ್ನು ಸಮರ್ಪಿಸಿ ಕೇಶವನನ್ನು ಹಾಗೂ ಶಿವನನ್ನು ತಾರತಮ್ಯದಿಂದ ಪೂಜಿಸಬೇಕು ॥೨೭॥ ದೇವರ ಸಮ್ಮುಖದಲ್ಲಿ ಭಕ್ತಿಪುರಸ್ಸರ ನೃತ್ಯ ಗೀತ ಸೇವೆಗಳನ್ನು ಸಮರ್ಪಿಸಬೇಕು. ಪತಿತರೊಂದಿಗೆ ಆ ದಿನ ಸಂಭಾಷಣೆ ಮಾಡ ಬಾರದು ಮತ್ತು ಅವರನ್ನು ಸ್ಪರ್ಶಿಸಲೂ ಬಾರದು ॥೨೮॥ ಏಕಾದಶಿಯ ದಿನ ಅಸತ್ಯವನ್ನು ನುಡಿಯದೇ ಸತ್ಯವಾದ ಹಾಗೂ ಹಿತವಾದ ಮಾತುಗಳನ್ನೇ ಆಡಬೇಕು. ರಜಸ್ವಲೆಯನ್ನು ಮುಟ್ಟಬಾರದು, ಬ್ರಾಹ್ಮಣರನ್ನು ಗುರುಗಳನ್ನು ನಿಂದಿಸಬಾರದು॥೨೯॥ ವಿಷ್ಣುವಿನ ಸಮ್ಮುಖದಲ್ಲಿ ಕುಳಿತು ವೈಷ್ಣವರೊಂದಿಗೆ ಪುರಾಣ ಶ್ರವಣಮಾಡಬೇಕು. ಅಧಿಕಮಾಸದಲ್ಲಿ ಬರುವ ಶುಕ್ಲೈಕಾದಶಿಯನ್ನು ನಿರಾಹಾರನಾಗಿದ್ದು ಕಳೆಯಬೇಕು. ॥೩೦॥ ಇದು ಸಾಧ್ಯವಾಗದಿದ್ದರೆ ಜಲಪಾನ ಮಾಡಿಯಾಗಲೀ ಅಥವಾ ಹಾಲನ್ನು ಕುಡಿದಾಗಲೀ ಏಕಾದಶೀ ವ್ರತವನ್ನು ಆಚರಿಸಬೇಕು. ನೀರು ಅಥವಾ ಹಾಲನ್ನು ಬಿಟ್ಟು ಇತರ ಯಾವ ಪದಾರ್ಥವನ್ನೂ ಸ್ವೀಕರಿಸ ಕೂಡದು. ಆ ದಿನ ರಾತ್ರಿ ಗೀತಗಳನ್ನು ಹೇಳುತ್ತ ವಾದ್ಯಗಳನ್ನು ಬಾರಿಸುತ್ತ ಜಾಗರಣೆಯನ್ನು ಮಾಡಬೇಕು॥೩೧॥ ಪ್ರಥಮ ಪ್ರಹರದಲ್ಲಿ ಮಾಡುವ ಪರಮಾತ್ಮನ ಪೂಜಾ ಸಮಯದಲ್ಲಿ ತೆಂಗಿನ ನೀರಿನಿಂದ ಶ್ರೀಹರಿಗೆ ಅರ್ಘ್ಯಗಳನ್ನು ಕೊಡಬೇಕು. ಅದರಂತೆ ೨ನೇಯ ಪ್ರಹರದಲ್ಲಿ

ಪ್ರಥಮೇ ಪ್ರಹರೇ ಪೂಜಾ ನಾರಿಕೇಲಾರ್ಘ್ಯಮುತ್ತಮಮ್ ।
ದ್ವಿತೀಯೇ ಶ್ರೀಫಲೈಶ್ಚೈವ ತೃತೀಯೇ ಬೀಜಪೂರಕೈಃ ॥೩೨॥

ಚತುರ್ಥೇ ಪೂಜಯೇತ್ ಪೂಗೈರ್ನಾರಿಂಗೈಶ್ಚ ವಿಶೇಷತಃ ।
ಪ್ರಥಮೇ ಪ್ರಹರೇ ಪುಣ್ಯಮಗ್ನಿಷ್ಟೋಮಸ್ಯ ಜಾಯತೇ ॥೩೩॥

ದ್ವಿತೀಯೇ ವಾಜಪೇಯಸ್ಯ ತೃತೀಯೇ ಹಯಮೇಧಜಮ್ ।
ಚತುರ್ಥೇ ರಾಜಸೂಯಸ್ಯ ಜಾಗ್ರತೋ ಜಾಯತೇ ಫಲಮ್ ॥೩೪॥

ನಾತಃ ಪರತರಂ ಪುಣ್ಯಂ ನಾತಃ ಪರತರಾ ಮುಖಾಃ ।
ನಾತಃ ಪರತರಾ ವಿದ್ಯಾ ನಾತಃ ಪರತರಂ ತಪಃ ॥೩೫॥

ಪೃಥಿವ್ಯಾಂ ಯಾನಿ ತೀರ್ಥಾನಿ ಕ್ಷೇತ್ರಾಣ್ಯಾಯತನಾನಿ ಚ ।
ತೇನ ಸ್ನಾತಾನಿ ದೃಷ್ಟಾನಿ ಯೇನಾಕಾರಿ ಹರೇರ್ವ್ರತಮ್ ॥೩೬॥

ಏವಂ ಜಾಗರಣಂ ಕುರ್ಯಾದ್ಯಾವತ್ಸೂರ್ಯೋದಯೋ ಭವೇತ್ ।
ಸೂರ್ಯೋದಯೇ ಶುಭೇ ತೀರ್ಥೇ ಗತ್ವಾ ಸ್ನಾನಂ ಸಮಾಚರೇತ್ ॥೩೭॥

---

ಶ್ರೀಫಲಗಳಿಂದಲೂ ಮೂರನೇಯ ಪ್ರಹರದಲ್ಲಿ ಬೀಜಪೂರ ಫಲ (ಮಾದಳ ಹಣ್ಣು) ಗಳಿಂದಲೂ॥೩೨॥ಹಾಗೂ ನಾಲ್ಕನೆಯ ಪ್ರಹರದಲ್ಲಿ ಪೂಗಫಲ (ಅಡಿಕೆ) ಗಳಿಂದಲೂ ಅದರಲ್ಲೂ ವಿಶೇಷವಾಗಿ ನಾರಿಂಗ ಫಲಗಳಿಂದಲೂ ಪೂಜಿಸಬೇಕು. (ಆ ಆ ಫಲಗಳನ್ನು ನಿವೇದಿಸಬೇಕು ಎಂದು ಅರ್ಥ). ಪ್ರಥಮ ಪ್ರಹರದಲ್ಲಿ ಮಾಡುವ ಪೂಜೆಯಿಂದ ಅಗ್ನಿಷ್ಟೋಮ ಮಾಡಿದ ಪುಣ್ಯವೂ ॥೩೩॥ ೨ನೇ ಪ್ರಹರದ ಪೂಜೆಯಿಂದ ವಾಜಪೇಯದ ಫಲವೂ, ಮೂರನೆಯ ಪ್ರಹರದ ಪೂಜೆಯಿಂದ ಅಶ್ವಮೇಧದ ಫಲವೂ ಹಾಗೂ ನಾಲ್ಕನೆಯ ಪ್ರಹರದ ಪೂಜೆಯಿಂದ ರಾಜಸೂಯದ ಫಲವೂ ಪ್ರಾಪ್ತವಾಗುವವು ॥೩೪॥ ಈ ವ್ರತಕ್ಕಿಂತಲೂ ಅಧಿಕವಾದ ಪುಣ್ಯಸಾಧನವಿಲ್ಲ. ಅಧಿಕವಾದ ಯಜ್ಞಗಳಿಲ್ಲ, ಅಧಿಕವಾದ ವಿದ್ಯೆಯಿಲ್ಲ ಹಾಗೂ ಇದಕ್ಕಿಂತಲೂ ಶ್ರೇಷ್ಠವಾದ ತಪವೆಂಬುದಿಲ್ಲ ॥೩೫॥ ಯಾವನು ಅಧಿಕಮಾಸದ ಈ ಏಕಾದಶೀ ವ್ರತವನ್ನು ಆಚರಿಸುವನೋ ಅವನು ಭೂಮಂಡಲದಲ್ಲಿರುವ ಸಕಲತೀರ್ಥಗಳಲ್ಲಿ ಸ್ನಾನ ಮಾಡಿದ ಪುಣ್ಯವನ್ನೂ, ಕ್ಷೇತ್ರಗಳ ಹಾಗೂ ದೇವಮಂದಿರಗಳ ಸಂದರ್ಶನ ಮಾಡಿದ ಪುಣ್ಯವನ್ನೂ ಪಡೆಯುವನು. ॥೩೬॥ ಏಕಾದಶೀ ರಾತ್ರಿ ಸೂರ್ಯೋದಯವಾಗುವವರೆಗೆ ಜಾಗರಣೆಯನ್ನು ಮಾಡಿ ನಂತರ ಪ್ರಾತರ್ವಿಧಿಗಳನ್ನು ಮುಗಿಸಿ ಶ್ರೇಷ್ಠವಾದ ತೀರ್ಥದಲ್ಲಿ ಸ್ನಾನವನ್ನು ಮಾಡಬೇಕು. ॥೩೭॥ ಸ್ನಾನಾನಂತರ ಮನೆಗೆ ಬಂದು ಭಕ್ತಿಭಾವದಿಂದ ಶ್ರೀಹರಿಯ ಷೋಡಶೋಪ

ಸ್ನಾತ್ವೈವಾಗತ್ಯ ಭಾವೇನ ಪೂಜಯೇದ್ದೇವಮೀಶ್ವರಮ್ ।
ಪೂರ್ವೋದಿತೇನ ವಿಧಿನಾ ಭೋಜಯೇತ್ ಬ್ರಾಹ್ಮಣಾನ್ ಶುಭಾನ್ ॥೩೮॥

ಕುಂಭಾದಿಕಂ ಚ ಯತ್ಸರ್ವಂ ಪ್ರತಿಮಾಂ ಕೇಶವಸ್ಯ ಚ ।
ಪೂಜಯಿತ್ವಾ ವಿಧಾನೇನ ಬ್ರಾಹ್ಮಣಾಯ ಸಮರ್ಪಯೇತ್ ॥೩೯॥

ಏವಂ ವಿಧಂ ವ್ರತಂ ಯೋ ವೈ ಕುರುತೇ ಭುವಿ ಮಾನವಃ ।
ಸಫಲಂ ಜಾಯತೇ ತಸ್ಯ ವ್ರತಂ ಮುಕ್ತಿಫಲಪ್ರದಮ್ ॥೪೦॥

ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟೋಽಹಂ ತ್ವಯಾನಘ ।
ಮಲಿಮ್ಲುಚಸ್ಯ ಮಾಸಸ್ಯ ಶುಕ್ಲಾಯಾ ವಿಧಿಮುತ್ತಮಮ್ ॥೪೧॥

ವ್ರತಾನಿ ತೇನ ಚೀರ್ಣಾನಿ ಸರ್ವಾಣಿ ನೃಪನಂದನ ।
ಪದ್ಮಿನ್ಯಾಃ ಪ್ರೀತಿಯುಕ್ತೋ ಯಃ ಕುರುತೇ ವ್ರತಮುತ್ತಮಮ್ ॥೪೨॥

ಕೃಷ್ಣಾಯಾ ಮಲಮಾಸಸ್ಯ ವಿಧಿಸ್ತಸ್ಯಾಪಿ ತಾದೃಶಃ ।
ಪರಮಾ ಸಾ ತು ವಿಜ್ಞೇಯಾ ಸರ್ವಪಾಪಕ್ಷಯಂಕರೀ ॥೪೩॥

ಅತ್ರ ತೇ ಕಥಯಿಷ್ಯಾಮಿ ಕಥಾಮೇಕಾಂ ಮನೋರಮಾಮ್ ।
ನಾರದಾಯ ಪುಲಸ್ತ್ಯೇನ ವಿಸ್ತರೇಣ ನಿವೇದಿತಾಮ್ ॥೪೪॥

---

ಹಾರ ಪೂಜೆಯನ್ನು ಪೂರ್ವೋಕ್ತವಿಧಾನದಂತೆ ಮಾಡಿ ದ್ವಿಜಶ್ರೇಷ್ಠರಿಗೆ ಭೋಜನ ಮಾಡಿಸಬೇಕು ॥೩೮॥ ಪೂಜೆಗಾಗಿ ಸ್ಥಾಪಿಸಿದ ಕುಂಭಾದಿಗಳನ್ನು ಹಾಗೂ ಕೇಶವನ ಪ್ರತಿಮೆಯನ್ನು ಮನೆಗೆ ಆಮಂತ್ರಿತನಾದ ಬ್ರಾಹ್ಮಣನನ್ನು ಪೂಜಿಸಿ ಅವನಿಗೆ ಸಮರ್ಪಿಸಬೇಕು. ॥೩೯॥ ಜಗತ್ತಿನಲ್ಲಿ ಯಾವನು ಈ ಪ್ರಕಾರದ ವ್ರತವನ್ನು ಆಚರಿಸುವನೋ ಅವನ ವ್ರತವು ಫಲಕಾರಿಯಾಗುತ್ತದೆ. ಮುಕ್ತಿರೂಪ ಫಲವನ್ನು ಕೊಡುತ್ತದೆ. ॥೪೦॥ ಹೇ ರಾಜಾ, ಅಧಿಕ ಮಾಸದ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಯ ಮಹಾತ್ಮೆ ವ್ರತವಿಧಾನಗಳ ಬಗ್ಗೆ ನೀನು ಕೇಳಿದುದೆಲ್ಲವನ್ನೂ ತಿಳಿಸಿದ್ದೇನೆ. ॥೪೧॥ ಧರ್ಮರಾಜಾ, ಪದ್ಮಿನೀ ಏಕಾದಶಿಯ ಶ್ರೇಷ್ಠವಾದ ವ್ರತವನ್ನು ಶ್ರದ್ಧೆಯಿಂದ ಆಚರಿಸಿದವನು ಸಕಲ ವ್ರತಗಳನ್ನು ಆಚರಿಸಿದಂತೆಯೇ ॥೪೨॥ ಮಲಮಾಸದ ಕೃಷ್ಣಪಕ್ಷದಲ್ಲಿ ಬರುವ ಏಕಾದಶೀ ವ್ರತದ ವಿಧಾನವೂ ಕೂಡ ಇದರಂತೆಯೇ ಇದೆ. ಸರ್ವಪಾಪಗಳನ್ನು ಕಳೆಯುವ ``ಪರಮಾ'' ಎಂಬ ಹೆಸರಿನ ಆ ಏಕಾದಶಿಯೂ ಕೂಡ ಅತಿ ಶ್ರೇಷ್ಠವಾದುದೆಂದು ತಿಳಿ. ॥೪೩॥ ಯುಧಿಷ್ಠಿರಾ. ಈ ವಿಷಯದಲ್ಲಿ ಪುಲಸ್ತ್ಯ ಋಷಿಗಳಿಂದ ನಾರದನಿಗೆ ವಿಸ್ತಾರವಾಗಿ ಹೇಳಲ್ಪಟ್ಟ ಒಂದು ಮನೋಹರವಾದ ಕಥೆಯನ್ನು ನಿನಗೆ ಈಗ ತಿಳಿಸುವೆನು ಕೇಳು. ॥೪೪॥ ಹಿಂದಕ್ಕೆ ಕಾರ್ತವೀರ್ಯರಾಜನಿಂದ ಕಾರಾಗೃಹದಲ್ಲಿ ಬಂಧಿಸಲ್ಪಟ್ಟ

ಕಾರ್ತವೀರ್ಯೇಣ ಕಾರಾಯಾಂ ನಿಕ್ಷಿಪ್ತಂ ವೀಕ್ಷ್ಯ ರಾವಣಮ್ ।
ವಿಮೋಚಿತಃ ಪುಲಸ್ತ್ಯೇನ ಯಾಚಯಿತ್ವಾ ಮಹೀಪತಿಮ್ ॥೪೫॥

ತದಾಶ್ಚರ್ಯಂ ತದಾ ಶ್ರುತ್ವಾ ನಾರದೋ ದಿವ್ಯದರ್ಶನಃ ।
ಪಪ್ರಚ್ಛ ಚ ಯಥಾ ಭಕ್ತ್ಯಾ ಪುಲಸ್ತ್ಯಂ ಮುನಿಪುಂಗವಮ್ ॥೪೬॥

ನಾರದ ಉವಾಚ

ದಶಾನನೇನ ವಿಜಿತಾಃ ಸರ್ವೇ ದೇವಾಃ ಸವಾಸವಾಃ ।
ಕಾರ್ತವೀರ್ಯೇಣ ವಿಜಿತಃ ಕಥಂ ರಣವಿಶಾರದಃ ॥೪೭॥

ನಾರದಸ್ಯ ವಚಃ ಶ್ರುತ್ವಾ ಪುಲಸ್ತ್ಯೋ ಮುನಿರಬ್ರವೀತ್ ।

ಪುಲಸ್ತ್ಯ ಉವಾಚ

ಶೃಣು ವತ್ಸ ಪ್ರವಕ್ಷ್ಯಾಮಿ ಕಾರ್ತವೀರ್ಯಸಮುದ್ಭವಮ್ ॥೪೮॥

ಪುರಾ ತ್ರೇತಾಯುಗೇ ರಾಜನ್ ಮಾಹಿಷ್ಮತ್ಯಾಂ ಬೃಹತ್ತರಃ ।
ಹೈಹಾಯಾನಾಂ ಕುಲೇ ಜಾತಃ ಕೃತವೀರ್ಯೋ ಮಹೀಪತಿಃ ॥೪೯॥

ಸಹಸ್ರಂ ಪ್ರಮದಾಸ್ತಸ್ಯ ನೃಪಸ್ಯ ಪ್ರಾಣವಲ್ಲಭಾಃ ।
ನ ತಾಸಾಂ ತನಯಂ ಕಾಚಿಲ್ಲೇಭೇ ರಾಜ್ಯಧುರಂಧರಮ್ ॥೫೦॥

---

ರಾವಣನನ್ನು ಪುಲಸ್ತ್ಯರು ಕಾರ್ತವೀರ್ಯನನ್ನು ಪ್ರಾರ್ಥಿಸಿ,ಅವನ ಮನವಲಿಸಿ ಬಂಧನದಿಂದ ಬಿಡುಗಡೆ ಮಾಡಿಸಿದ್ದರು ॥೪೫॥ ಈ ಆಶ್ಚರ್ಯ ವಿಷಯವನ್ನು ಕೇಳಿದಾಕ್ಷಣವೇ ದಿವ್ಯಜ್ಞಾನಿಯಾದ ನಾರದರುಪುಲಸ್ತ್ಯ ಮುನಿಪುಂಗವರನ್ನು ॥೪೬॥ ``ಪುಲಸ್ತ್ಯರೇ, ಇಂದ್ರಾದಿ ದೇವತೆಗಳನ್ನು ಗೆದ್ದ, ರಣವಿಶಾರದನಾದ ರಾವಣನನ್ನು ಕಾರ್ತವೀರ್ಯನು ಅದೆಂತು ಗೆದ್ದನು? ಎಂದು ಪ್ರಶ್ನಿಸಲು ॥೪೭॥ ಪುಲಸ್ತ್ಯರು ಹೇಳಿದರು - ಹೇ ನಾರದಾ, ಕಾರ್ತವೀರ್ಯನ ಉತ್ಪತ್ತಿಯ ಬಗ್ಗೆ ತಿಳಿಸುವೆನು ಕೇಳು ॥೪೮॥ಹಿಂದಕ್ಕೆ ತ್ರೇತಾಯುಗದಲ್ಲಿ ಹೈಹಯನೆಂಬ ರಾಜನ ವಂಶದಲ್ಲಿ ಹುಟ್ಟಿದ ಕೃತವೀರ್ಯನೆಂಬುವವನು ಮಾಹಿಷ್ಮತಿಯ ದೊಡ್ಡ ರಾಜನಾಗಿದ್ದನು.॥೪೯॥ ಆ ರಾಜನಿಗೆ ಅತ್ಯಂತ ಪ್ರಾಣಪ್ರಿಯರಾದ ಸಾವಿರ ರಾಣಿಯರಿದ್ದರೂ ಅವರಲ್ಲಿ ಒಬ್ಬಳೂ ಮುಂದೆ ರಾಜ್ಯಭಾರ ಮಾಡಬಲ್ಲ ಒಬ್ಬ ಗಂಡು ಮಗುವನ್ನೂ ಪಡೆಯಲಿಲ್ಲ. ॥೫೦॥ ದೇವತೆಗಳನ್ನು ಉದ್ದೇಶಿಸಿ ಯಜ್ಞಗಳನ್ನು ಮಾಡಿ ಪೂಜಿಸಿ, ಪಿತೃಗಳನ್ನು, ಸಿದ್ಧಪುರುಷರನ್ನು ಹಾಗೂ ಇತರ ಮಹಾತ್ಮರನ್ನೂ ಪೂಜಿಸಿ ಅವರು ತಿಳಿಸಿದ ಸರ್ವವ್ರತಗಳನ್ನು ಮಾಡಿದರೂ ಒಬ್ಬ ಮಗನನ್ನೂ

ಯಜನ್ ದೇವಾನ್ ಪಿತೃನ್ ಸಿದ್ಧಾನ್ ಪ್ರತಿಪೂಜ್ಯ ಬೃಹತ್ತರಾನ್ ।
ತೇಷಾಂ ವಾಕ್ಯಾದೃತಂ ಕುರ್ವನ್ನ ಲಬ್ಧಸ್ತನಯಸ್ತದಾ ॥೫೧॥

ಸುತಂ ವಿನಾ ತದಾ ರಾಜ್ಯಂ ನ ಸುಖಾಯ ಮಹೀಪತೇಃ ।
ಕ್ಷುಧಿತಸ್ಯ ತಥಾ ಭೋಗಾ ನ ಭವಂತಿ ಸುಖಪ್ರದಾಃ ॥೫೨॥

ವಿಚಾರ್ಯ ಚಿತ್ತೇ ನೃಪತಿಸ್ತಪಸ್ತಪ್ತುಂ ಮನೋ ದಧೇ ।
ತಪಸ್ಯೈವ ಸದಾ ಸಿದ್ಧಿರ್ಜಾಯತೇ ಮನಸೇಪ್ಸಿತಾ ॥೫೩॥

ಇತ್ಯುಕ್ತ್ವಾ ಸ ಹಿ ಧರ್ಮಾತ್ಮಾ ಚೀರವಾಸಾ ಜಟಾಧರಃ ।
ತಪಸ್ತಪ್ತುಂ ಗತಃ ಸದ್ಯೋ ಗೃಹೇ ನ್ಯಸ್ಯ ಸುಮಂತ್ರಿಣಮ್ ॥೫೪॥

ನಿರ್ಗತಂ ನೃಪತಿಂ ವೀಕ್ಷ್ಯ ಪದ್ಮಿನೀ ಪ್ರಮದೋತ್ತಮಾ ।
ಹರಿಶ್ಚಂದ್ರಸ್ಯ ತನಯಾ ಇಕ್ಷ್ವಾಕುಕುಲಸಂಭವಾ ॥೫೫॥

ಪತಿವ್ರತಾ ಪ್ರಿಯಂ ದೃಷ್ಟ್ವಾ ತಪಸ್ತಪ್ತುಂ ಕೃತೋದ್ಯಮಮ್ ।
ಭೂಷಣಾನಿ ಪರಿತ್ಯಜ್ಯ ಚೀರಮೇಕಂ ಸಮಾಶ್ರಯತ್ ॥೫೬॥

ಜಗಾಮ ಪತಿನಾ ಸಾರ್ಧಂ ಪರ್ವತೇ ಗಂಧಮಾದನೇ ।
ಗತ್ವಾ ತತ್ರ ತಪಸ್ತೇಪೇ ವರ್ಷಾಣಾಮಯುತಂ ನೃಪಃ ॥೫೭॥

---

ಪಡೆಯದಂತಾದನು. ॥೫೧॥ "ರಾಜನಾದವನಿಗೆ ಮಗನಿಲ್ಲದೇ ರಾಜ್ಯವು ಸುಖಪ್ರದವಾಗುವದಿಲ್ಲ ಹಾಗೂ ಹಸಿದವನಿಗೆ ಇತರ ಭೋಗವಿಲಾಸಗಳು ಸುಖಪ್ರದವಾಗುವದಿಲ್ಲ" ಎಂದು ॥೫೨॥ ಮನದಲ್ಲಿ ವಿಚಾರಿಸಿ ರಾಜನು ವನಕ್ಕೆ ಹೋಗಿ ತಪಸ್ಸನ್ನಾಚರಿಸಲು ನಿಶ್ಚಯಿಸಿದನು. ಯಾವಾಗಲೂ ತಪಸ್ಸಿನಿಂದಲೇ ಮನೋಭೀಷ್ಟಗಳು ಸಿದ್ಧಿಸುವವು ॥೫೩॥ ಎಂದು ತಿಳಿದ ಧರ್ಮಾತ್ಮನಾದ ರಾಜನು ವಲ್ಕಲ ಬಟ್ಟೆಗಳನ್ನುಟ್ಟು, ಜಟಾಧರನಾಗಿ, ಅರಮನೆಯಲ್ಲಿದ್ದು ರಾಜ್ಯಭಾರವನ್ನು ನೋಡಿಕೊಳ್ಳಲು ವೃದ್ಧಮಂತ್ರಿಯನ್ನು ನಿಯಮಿಸಿ ತಾನು ತಪಸ್ಸನ್ನಾಚರಿಸಲು ವನಕ್ಕೆ ಹೊರಟುನಿಂತನು. ॥೫೪॥ ಅಷ್ಟರಲ್ಲಿ ಇಕ್ಷ್ವಾಕು ಕುಲ ಜಾತೆಯಾದ ಸತ್ಯಹರಿಶ್ಚಂದ್ರನ ಮಗಳಾದ ಮತ್ತು ರಾಜನ ಹಿರಿಯ ರಾಣಿಯಾದ ಪದ್ಮಿನೀ ಎನ್ನುವವಳು ॥೫೫॥ ಪತಿಯಾದ ರಾಜನು ತಪಸ್ಸಿಗಾಗಿ ವನಕ್ಕೆ ಹೊರಟಿರುವದನ್ನು ನೋಡಿದಳು. ಪತಿವ್ರತೆಯಾದ ಅವಳು ಆ ಕೂಡಲೇ ತನ್ನೆಲ್ಲ ರಾಜವೇಷಭೂಷಣಗಳನ್ನು, ಅಲಂಕಾರಗಳನ್ನು ಪರಿತ್ಯಜಿಸಿ, ಚೀರವಸ್ತ್ರಗಳನ್ನುಟ್ಟು ॥೫೬॥ ಪತಿಯೊಂದಿಗೆ ಗಂಧಮಾದನ ಪರ್ವತಕ್ಕೆ ಹೊರಟುಬಂದಳು. ಆ ಪರ್ವತದಲ್ಲಿದ್ದು ರಾಜನು ಹತ್ತು ಸಹಸ್ರ ವರ್ಷಗಳವರೆಗೆ ॥೫೭॥ ಗದಾಧರನನ್ನು ಧ್ಯಾನಿಸುತ್ತ ತಪವನ್ನಾಚರಿಸಿದರೂ ಮಗನನ್ನು ಪಡೆಯಲಿಲ್ಲ. ಕೇವಲ

ನ ಲೇಭೇऽಥಾಪಿ ತನಯಂ ಧ್ಯಾಯನ್ ದೇವಂ ಗದಾಧರಮ್ ।
ಅಸ್ಥಿಸ್ನಾಯುಮಯಂ ಕಾಂತಂ ದೃಷ್ಟ್ವಾ ಸಾ ಪ್ರಮದೋತ್ತಮಾ ॥೫೮॥

ಅನಸೂಯಾಂ ಮಹಾಸಾಧ್ವೀಂ ಪಪ್ರಚ್ಛ ವಿನಯಾನ್ವಿತಾ ।
ಭರ್ತುಃ ಪ್ರತಪತಃ ಸಾಧ್ವಿ ವರ್ಷಾಣಾಮಯುತಂ ಗತಮ್ ॥೫೯॥

ತಥಾऽಪಿ ನ ಪ್ರಸನ್ನೋऽಭೂತ್ಕೇಶವಃ ಕಷ್ಟನಾಶನಃ ।
ವ್ರತಂ ಮಮ ಮಹಾಭಾಗೇ ಕಥಯಸ್ವ ಯಥಾತಥಮ್ ॥೬೦॥

ಯೇನ ಪ್ರಸನ್ನೋ ಭಗವಾನ್ ಮಮ ಭಕ್ತ್ಯಾ ಪ್ರಜಾಯತೇ ।
ಯೇನ ಜಾಯೇತ ಮೇ ಪುತ್ರಶ್ಚಕ್ರವರ್ತೀ ಮಹತ್ತರಃ ॥೬೧॥

ಶ್ರುತ್ವಾ ತಸ್ಯಾಸ್ತು ವಚನಂ ಪತಿವ್ರತಪರಾಯಣಾ ।
ಯಂ ಪ್ರವ್ರಜಂತಂ ನೃಪತಿಂ ಸ್ವಯಂ ಪ್ರವ್ರಾಜ ದೀಕ್ಷಿತಮ್ ॥೬೨॥

ತದಾ ಪ್ರೋವಾಚ ಸಂಪೃಷ್ಟಾ ಪದ್ಮಿನೀಂ ಪದ್ಮಲೋಚನಾಮ್ ।
ಮಾಸೋ ಮಲಿಮ್ಲುಚಃ ಸುಭ್ರು ಮಾಸಾದ್ವಾದಶಕಾಧಿಕಃ ॥೬೩॥

ದ್ವಾತ್ರಿಂಶದ್ಭಿರ್ಗತೈರ್ಮಾಸೈರಾಯಾತಿ ಸ ಶುಭಾನನೇ ।
ತನ್ಮಧ್ಯೇ ದ್ವಾದಶೀಯುಗ್ಮಂ ಪದ್ಮಿನೀ ಪರಮಾ ತಥಾ ॥೬೪॥

---

ಅಸ್ಥಿ ಹಾಗೂ ಸ್ನಾಯುಗಳು ಮಾತ್ರ ಉಳಿದಿರುವ ತನ್ನ ಪತಿಯನ್ನು ಕಂಡು ಪತಿವ್ರತೆ ಪದ್ಮಿನಿಯು ॥೫೮॥ ಮಹಾಸಾಧ್ವಿಯಾದ ಅನಸೂಯಾ ದೇವಿಯನ್ನು ವಿನಯದಿಂದ ಪ್ರಶ್ನಿಸಿದಳು. ಹೇ ಸಾಧ್ವೀ, ನನ್ನ ಗಂಡನು ತಪಸ್ಸು ಮಾಡುತ್ತ ಈಗ ಹತ್ತು ಸಹಸ್ರ ವರ್ಷಗಳು ಗತಿಸಿವೆ. ॥೫೯॥ ಆದರೂ ಕಷ್ಟನಿವಾರಕನಾದ ಕೇಶವನು ಪ್ರಸನ್ನನಾಗಿರುವದಿಲ್ಲ. ಹೇ ಮಹಾಭಾಗೇ, ನಾನೇನಾದರೂ ವ್ರತವನ್ನು ಆಚರಿಸಬೇಕಿದ್ದರೆ ತಿಳಿಸಿ ಅನುಗ್ರಹಿಸು ॥೬೦॥ ಭಗವಾನ್ ಕೇಶವನು ಪ್ರಸನ್ನನಾಗಿ ಶ್ರೇಷ್ಠ ಚಕ್ರವರ್ತಿಯಾಗುವ ಮಗನು ಜನಿಸುವಂತೆ ಅನುಗ್ರಹಿಸುವ ಯಾವುದಾದರೂ ವ್ರತವಿದ್ದರೆ ತಿಳಿಸು ॥೬೧॥ ಎಂದು ರಾಣಿಯು ಪ್ರಾರ್ಥಿಸಲು, ದೇವಿಯು ಇದನ್ನು ಕೇಳಿ ಪ್ರಸನ್ನಳಾಗಿ ಪತಿಯು ತಪಸ್ಸಿಗಾಗಿ ವನಕ್ಕೆ ಹೊರಟು ನಿಂತಾಗ ತಾನೂ ಕೂಡ ಅವನನ್ನು ಅನುಸರಿಸಿದ ಪತಿವ್ರತೆ ಪರಾಯಣೆ ॥೬೨॥ ಪದ್ಮಿನಿಯನ್ನು ಕುರಿತು ಹೇಳಿದಳು - ಹೇ ಸುಂದರೀ, ಹನ್ನೆರಡು ಮಾಸಗಳಿಗಂತಲೂ ಶ್ರೇಷ್ಠವಾದ ಮಲಮಾಸವೆಂಬುದಿದೆ. ॥೬೩॥ ಹೇ ಶುಭಾನನೇ, ಮೂವತ್ತೆರಡು ಮಾಸಗಳು ಕಳೆದಾಗ ಈ ಅಧಿಕಮಾಸವೆಂಬುದು (ಮಲಮಾಸವೆಂಬುದು) ಬರುವದು. ಈ ಮಾಸದಲ್ಲಿ ಬರುವ ಎರಡು ಏಕಾದಶಿಗಳೊಳಗೆ ಶುಕ್ಲಪಕ್ಷದ ಏಕಾದಶಿಯು ಅತಿಶ್ರೇಷ್ಠವಾಗಿದೆ. ॥೬೪॥ ಆ ದಿನ ವಿಧಿಪೂರ್ವಕ ಉಪವಾಸದಿಂದ

ಉಪೋಷ್ಯ ತತ್ರ ಕರ್ತವ್ಯಂ ವಿಧಿನಾ ಜಾಗರೈ ಸಮಮ್ ।
ಶೀಘ್ರಂ ಪ್ರಸನ್ನೋ ಭಗವಾನ್ ಭವಿಷ್ಯತಿ ಸುತಪ್ರದಃ ॥೬೫॥

ಇತ್ಯುಕ್ತ್ವಾ ಽಕಥಯತ್ಸರ್ವಂ ಮಯಾ ಪೂರ್ವೋದಿತಂ ನೃಪ ।
ವಿಧಿಂ ವ್ರತಸ್ಯ ವಿಧಿವತ್ ಪ್ರಸನ್ನಾ ಕರ್ದಮಾಂಗಜಾ ॥೬೬॥

ಶ್ರುತ್ವಾ ವ್ರತವಿಧಿಂ ಸರ್ವಂ ಯಥೋಕ್ತಮನಸೂಯಯಾ ।
ಚಕ್ರೇ ರಾಜ್ಞೀ ಚ ತತ್ಸರ್ವಂ ಪುತ್ರಪ್ರಾಪ್ತಿಮಭೀಪ್ಸತೀ ॥೬೭॥

ಏಕಾದಶ್ಯಾಂ ನಿರಾಹಾರಾ ಸದಾ ಜಾತಾ ಚ ನಿರ್ಜಲಾ ।
ಜಾಗರೇಣ ಯುತಾ ರಾತ್ರೌ ಗೀತನೃತ್ಯಸಮನ್ವಿತಾ ॥೬೮॥

ಪೂರ್ಣೇ ವ್ರತೇ ಚ ವೈ ಶೀಘ್ರಂ ಪ್ರಸನ್ನಃ ಕೇಶವಃ ಸ್ವಯಮ್ ।
ಬಭಾಷೇ ಗರುಡಾರೂಢೋ ವರಂ ವರಯ ಶೋಭನೇ ॥೬೯॥

ಶ್ರುತ್ವಾ ವಾಕ್ಯಂ ಜಗದ್ಧಾತುಃ ಸ್ತುತ್ವಾ ಪ್ರೀತ್ಯಾ ಶುಚಿಸ್ಮಿತಾ ।
ಯಯಾಚೇಽಗ್ರ್ಯ ವರಂ ದೇಹಿ ಮಮ ಭರ್ತುರ್ಬೃಹತ್ತರಮ್ ॥೭೦॥

ಪದ್ಮಿನ್ಯಾಸ್ತದ್ವಚಃ ಶ್ರುತ್ವಾ ಕೃಷ್ಣಃ ಪ್ರೀತಃ ಪ್ರಿಯಂವದಃ ।
ತ್ವಯಾಽಹಂ ತೋಷಿತೋ ಭದ್ರೇ ಪ್ರತ್ಯುವಾಚ ಜನಾರ್ದನಃ ॥೭೧॥

---

ಇಡೀ ರಾತ್ರಿ ಜಾಗರವನ್ನು ಮಾಡಬೇಕು. ಹೀಗೆ ಮಾಡುವುದರಿಂದ ಭಗವಂತನು ಶೀಘ್ರದಲ್ಲಿ ಪ್ರಸನ್ನನಾಗಿ ಪುತ್ರನನ್ನು ಕರುಣಿಸುವನು. ॥೬೫॥ ಹೇ ರಾಜಾ, ಕರ್ದಮರ ಮಗಳಾದ ಅನಸೂಯೆಯು ಇಷ್ಟು ಹೇಳಿ ನಾನು ಈ ಮೊದಲು ತಿಳಿಸಿದ ವ್ರತವಿಧಾನವನ್ನೆಲ್ಲ ವಿವರಿಸಿದಳು. ॥೬೬॥ ಅನಸೂಯೆಯು ತಿಳಿಸಿದ ವ್ರತವಿಧಿಯನ್ನು ಕೇಳಿ ಪುತ್ರಪ್ರಾಪ್ತಿಯನ್ನು ಬಯಸುತ್ತಿದ್ದ ರಾಣಿಯು ಏಕಾದಶೀ ವ್ರತವನ್ನು ಆಚರಿಸಿದಳು. ॥೬೭॥ ಏಕಾದಶೀ ಉಪವಾಸದಿಂದ ಇಡೀ ರಾತ್ರಿ ಗೀತನೃತ್ಯಗಳೊಂದಿಗೆ ಜಾಗರವನ್ನು ಮಾಡಿ ॥೬೮॥ ವ್ರತವನ್ನು ಪೂರ್ಣಗೊಳಿಸಲು ಕೇಶವನು ಕೂಡಲೇ ಪ್ರಸನ್ನನಾದನು. ಗರುಡಾರೂಢನಾದ ಶ್ರೀಹರಿಯು ಪ್ರತ್ಯಕ್ಷನಾಗಿ "ಹೇ ಶೋಭನೇ, ವರವನ್ನು ಕೇಳಿಕೋ" ಎಂದು ನುಡಿಯಲು ॥೬೯॥ ಜಗದ್ರಕ್ಷಕನಾದ ಶ್ರೀಹರಿಯ ಧ್ವನಿಯನ್ನು ಕೇಳಿದ ಆ ರಾಣಿಯು ಭಕ್ತಿಯಿಂದ ಸ್ತೋತ್ರ ಮಾಡಿ "ಹೇ ದೇವದೇವಾ, ನನ್ನ ಪತಿಯ ಮನೋಬಯಕೆಯನ್ನು ಪೂರೈಸಿ ಅನುಗ್ರಹಿಸು" ಎಂದು ಪ್ರಾರ್ಥಿಸಿದಳು. ॥೭೦॥ ಪ್ರಿಯಂವದನಾದ ಶ್ರೀಕೃಷ್ಣನು ಸುಪ್ರೀತನಾಗಿ - ಹೇ ಭದ್ರೆ, ನಿನ್ನಲ್ಲಿ ನಾನು ಪ್ರಸನ್ನನಾಗಿದ್ದೇನೆ. ॥೭೧॥ ಈ ಮಲಮಾಸವನ್ನು ನನ್ನ ಪ್ರೀತ್ಯಾಸ್ಪದವಾದ

ಯಥಾ ಮಲಿಮ್ಲುಚೋ ಮಾಸೋ ನಾನ್ಯೋ ಮೇ ಪ್ರೀತಿದಾಯಕಃ ।
ತನ್ಮಧ್ಯೈಕಾದಶೀ ರಮ್ಯಾ ಮಮ ಪ್ರೀತಿವಿವರ್ಧಿನೀ ॥೭೨॥

ಸಾ ತ್ವಯೋಪೋಷತಾ ಸುಭ್ರು ಯಥೋಕ್ತವಿಧಿನಾಽಮುನಾ ।
ತೇನ ತ್ವಯಾ ಪ್ರಸನ್ನೋಽಹಂ ಕೃತೋಽಸ್ಮಿ ಸುಭಗಾನನೇ ॥೭೩॥

ತವ ಭರ್ತುಃ ಪ್ರದಾಸ್ಯಾಮಿ ವರಂ ಯನ್ಮನಸೇಪ್ಸಿತಮ್ ।
ಇತ್ಯುಕ್ತ್ವಾ ನೃಪತಿಂ ಪ್ರಾಹ ವಿಷ್ಣುರ್ವಿಶ್ವಾರ್ತಿನಾಶನಃ ॥೭೪॥

ವರಂ ವರಯ ರಾಜೇಂದ್ರ ಯತ್ತೇ ಮನಸಿ ಕಾಂಕ್ಷಿತಮ್ ।
ಸಂತೋಷಿತೋಽಹಂ ಪ್ರಿಯಯಾ ತವ ಸಿದ್ಧಿಂ ಚಿಕೀರ್ಷಯಾ ॥೭೫॥

ಶ್ರುತ್ವಾ ತದ್ವಚನಂ ವಿಷ್ಣೋಃ ಪ್ರಸನ್ನೋ ನೃಪಸತ್ತಮಃ ।
ವವ್ರೇ ಸುತಂ ಮಹಾಬಾಹುಂ ಸರ್ವಲೋಕನಮಸ್ಕೃತಮ್ ॥೭೬॥

ನ ದೇವೈರ್ಮಾನುಷೈರ್ನಾಗೈರ್ದೈತ್ಯದಾನವರಾಕ್ಷಸೈಃ ।
ಜೇತುಂ ಶಕ್ಯೋ ಜಗನ್ನಾಥ ವಿನಾಂ ತ್ವಾಂ ಮಧುಸೂದನ ॥೭೭॥

ಇತ್ಯುಕ್ತೋ ಬಾಢಮಿತ್ಯುಕ್ತ್ವಾ ತತ್ರೈವಾಂತರಧೀಯತ ।
ನೃಪೋಽಪಿ ಸುಪ್ರಸನ್ನಾತ್ಮಾ ಹೃಷ್ಟಃ ಪುಷ್ಟಃ ಪ್ರಿಯಾಯುತಃ ॥೭೮॥

---

ಬೇರೊಂದು ಮಾಸವಿಲ್ಲ. ಅದರಲ್ಲಿಯೂ ಈ ಏಕಾದಶಿಯು ನನ್ನ ಪ್ರೀತಿಯನ್ನು ವಿಶೇಷವಾಗಿ ವರ್ಧಿಸುವಂಥದಾಗಿದೆ. ॥೭೨॥ ಇಂಥ ಏಕಾದಶಿಯ ದಿನ ನೀನು ವಿಧಿಪೂರ್ವಕ ಉಪವಾಸದಿಂದ ಇದ್ದು ನನ್ನನ್ನು ಪ್ರಸನ್ನಗೊಳಿಸಿರುವಿ. ॥೭೩॥ ಆದ್ದರಿಂದ ನೀನು ಕೇಳಿದಂತೆ ನಿನ್ನ ಪತಿಯ ಮನೋಭೀಷ್ಟದಂತೆ ವರವನ್ನು ಕರುಣಿಸುವೆನು. ಹೀಗೆಂದು ಹೇಳಿ ಜಗತ್ತಿನ ದುಃಖಾಪಹಾರಕನಾದ ಭಗವಂತನು ರಾಜನಿಗೆ ಹೇಳಿದನು. ॥೭೪॥ ಹೇ ರಾಜೇಂದ್ರ, ನಿನ್ನ ಮನದಲ್ಲಿರುವದನ್ನು ಕೇಳಿಕೋ. ನಿನ್ನ ಮನೋರಥದ ಸಿದ್ಧಿಯನ್ನು ಬಯಸುವ ನಿನ್ನ ಪತ್ನಿಯಿಂದ ನಾನು ಪ್ರಸನ್ನಗೊಳಿಸಲ್ಪಟ್ಟಿದ್ದೇನೆ. ॥೭೫॥ ಪರಮಾತ್ಮನಾದ ವಿಷ್ಣುವಿನ ಈ ಮಾತುಗಳನ್ನು ಕೇಳಿ ಹರ್ಷಿತನಾದ ರಾಜನು, ಸರ್ವಲೋಕ ವಂದ್ಯನಾದ ಹಾಗೂ ಶೂರನಾದ ಮಗನನ್ನು ಕರುಣಿಸುವಂತೆ ಪ್ರಾರ್ಥಿಸಿದನು. ॥೭೬॥ ಹೇ ಜಗನ್ನಾಥ ಮಧುಸೂದನ ಪ್ರಭೋ, ದೇವತೆಗಳಿಂದ, ಮನುಷ್ಯರಿಂದ, ನಾಗರಿಂದ ಹಾಗೂ ದೈತ್ಯ-ದಾನವರಾಕ್ಷಸರಿಂದ ಅಜಯ್ಯನಾದ ಮಗನನ್ನು ಕರುಣಿಸು. ನಿನ್ನ ಹೊರತು ಬೇರಿನ್ನಾರು ಇಂಥ ವರವನ್ನು ಕೊಟ್ಟಾರು ಎಂದು ರಾಜನು ಕೇಳಲು ॥೭೭॥ ಪರಮಾತ್ಮನು "ತಥಾಸ್ತು" ಎಂದು ಹೇಳಿ ಅಲ್ಲಿಯೇ ಅಂತರ್ಧಾನ ಹೊಂದಿದನು. ರಾಜನೂ ಕೂಡ ಸುಪ್ರಸನ್ನನಾಗಿ, ಹರ್ಷದಿಂದ ಮೈತುಂಬಿದಂತಾಗಿ ತನ್ನ ಪ್ರಿಯೆಯಿಂದ ಕೂಡಿಕೊಂಡು ॥೭೮॥ ಸ್ತ್ರೀ ಪುರುಷರಿಂದ ಮನೋಹಾರಿಯಾದ ತನ್ನ ನಗರಕ್ಕೆ

**ಸಮಾಯಾತ್ ಸ್ವಪುರಂ ರಮ್ಯಂ ನರನಾರೀಮನೋರಮಮ್ ।**
**ಸ ಪದ್ಮಿನ್ಯಾಂ ಸುತಂ ಲೇಭೇ ಕಾರ್ತವೀರ್ಯಂ ಮಹಾಬಲಮ್ ॥೭೯॥**

**ನ ತೇನ ಸದೃಶಃ ಕಶ್ಚಿತ್ ತ್ರಿಷು ಲೋಕೇಷು ಮಾನವಃ ।**
**ತಸ್ಮಾತ್ಪರಾಜಿತಃ ಸಂಖ್ಯೇ ರಾವಣೋ ದಶಕಂಧರಃ ॥೮೦॥**

**ನ ತಂ ಜೇತುಂ ಸಮರ್ಥೋಽಸ್ತಿ ತ್ರಿಷು ಲೋಕೇಷು ಕಶ್ಚನ ।**
**ವಿನಾ ನಾರಾಯಣಂ ದೇವಂ ಚಕ್ರಪಾಣಿಂ ಗದಾಧರಮ್ ॥೮೧॥**

**ನ ತ್ವಯಾ ವಿಸ್ಮಯಃ ಕಾರ್ಯೋ ರಾವಣಸ್ಯ ಪರಾಜಯೇ ।**
**ಮಲಿಮ್ಲುಚಪ್ರಸಾದೇನ ಪದ್ಮಿನ್ಯಾಶ್ಚಾಪ್ಯುಪೋಷಣಾತ್ ॥೮೨॥**

**ದತ್ತೋ ದೇವಾಧಿದೇವೇನ ಕಾರ್ತವೀರ್ಯೋ ಮಹಾಬಲಃ ।**
**ಇತ್ಯುಕ್ತ್ವಾ ಪ್ರಯಯೌ ವಿಪ್ರಃ ಪ್ರಸನ್ನೇನಾಂತರಾತ್ಮನಾ ॥೮೩॥**

**ಶ್ರೀಕೃಷ್ಣ ಉವಾಚ**

**ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟೋಽಹಂ ತ್ವಯಾಽನಘ ।**
**ಮಲಿಮ್ಲುಚಸ್ಯ ಮಾಸಸ್ಯ ಶುಕ್ಲಾಯಾ ವ್ರತಮುತ್ತಮಮ್ ॥೮೪॥**

---

ತಿರುಗಿ ಬಂದನು. ಅವನು ಮುಂದೆ ಕೆಲಕಾಲದ ನಂತರ ಪದ್ಮಿನಿಯಲ್ಲಿ ಬಲಿಷ್ಠನಾದ "ಕಾರ್ತವೀರ್ಯ" ಎಂಬ ಮಗನನ್ನು ಪಡೆದನು. ॥೭೯॥ ಮೂರ್ಲೋಕಗಳಲ್ಲಿಯೂ ಈ ಪುತ್ರನಿಗೆ ಸಮಾನನಾದ ಪುರುಷನಿರಲಿಲ್ಲ. ಇಂಥ ಪರಾಕ್ರಮಿಯಾದವನಿಂದ ಯುದ್ಧದಲ್ಲಿ ದಶಮುಖ ರಾವಣನು ಅನಾಯಸವಾಗಿ ಸೋಲಿಸಲ್ಪಟ್ಟನು. ॥೮೦॥ ಚಕ್ರಪಾಣಿಯಾದ ಹಾಗೂ ಗದಾಧಾರಿಯಾದ ನಾರಾಯಣನನ್ನು ಬಿಟ್ಟರೆ ತ್ರಿಲೋಕಗಳಲ್ಲಿ ಕಾರ್ತವೀರ್ಯನನ್ನು ಗೆಲ್ಲಲು ಸಮರ್ಥನಾದವನು ಯಾವನೂ ಇರಲಿಲ್ಲ. ॥೮೧॥ ಆದ್ದರಿಂದ ಹೇ ನಾರದಾ, ಕಾರ್ತವೀರ್ಯನಿಂದ ರಾವಣನು ಸೋಲಿಸಲ್ಪಟ್ಟ ವಿಷಯದಲ್ಲಿ ಆಶ್ಚರ್ಯಪಡಬೇಡ. ಅಧಿಕ ಮಾಸದ ಪ್ರಸಾದದಿಂದ ಮತ್ತು ಪದ್ಮಿನೀ ಏಕಾದಶೀ ಉಪವಾಸ ಮಾಡಿದ್ದರಿಂದ ॥೮೨॥ ದೇವಾಧಿದೇವನು ಪ್ರಸನ್ನನಾಗಿ ಕಾರ್ತವೀರ್ಯನೆಂಬ ಮಹಾಬಲಿಷ್ಠನಾದ ಮಗನನ್ನು ಕರುಣಿಸಿದನು. ಈ ಎಲ್ಲ ವಿಷಯವನ್ನು ಪ್ರಸನ್ನಚಿತ್ತದಿಂದ ತಿಳಿಸಿ ಪುಲಸ್ತ್ಯರು ಅಲ್ಲಿಂದ ಮುಂದೆ ಸಂಚಾರ ಮಾಡುತ್ತ ಹೊರಟರು. ॥೮೩॥ ಆಗ ಶ್ರೀ ಕೃಷ್ಣನು ಹೇಳುತ್ತಾನೆ - ಹೇ ಧರ್ಮರಾಜಾ, ನೀನೇನು ಕೇಳಿದ್ದೆಯೋ ಅದೆಲ್ಲದರ ಬಗ್ಗೆ ತಿಳಿಸಿದ್ದೇನೆ. ಅಧಿಕಮಾಸದ ಶುಕ್ಲಪಕ್ಷದ ಉತ್ತಮವಾದ ಏಕಾದಶೀ ವ್ರತವನ್ನು ॥೮೪॥ ಯಾರು ವಿಧಿಪೂರ್ವಕ ಶ್ರದ್ಧೆಯಿಂದ ಆಚರಿಸುವರೋ ಅವರು ಖಂಡಿತವಾಗಿ ವೈಕುಂಠವನ್ನು ಹೊಂದುವರು. ಆದ್ದರಿಂದ

ಯೇ ಕರಷ್ಯಂತಿ ಮನುಜಾಸ್ತ್ರೇ ಯಾಸ್ಯಂತಿ ಹರೇಃ ಪದಮ್ ।
ತ್ವಮೇವಂ ಕುರು ರಾಜೇಂದ್ರ ಯದಿ ಚೇಷ್ಟಮಭೀಪ್ಸಸಿ ॥೮೫॥

ಕೇಶವಸ್ಯ ವಚಃಶ್ರುತ್ವಾ ಧರ್ಮರಾಜೋऽತಿಹರ್ಷಿತಃ ।
ಚಕ್ರೇ ವ್ರತಂ ವಿಧಾನೇನ ಬಂಧುಭಿಃ ಪರಿವಾರಿತಃ ॥೮೬॥

ಸೂತ ಉವಾಚ

ಏತತ್ತ್ರೇ ಸರ್ವಮಾಖ್ಯಾತಂ ಯತ್ಪೃಷ್ಟೋऽಹಂ ಪುರಾ ದ್ವಿಜ ।
ಪುಣ್ಯಂ ಪವಿತ್ರಂ ಪರಮಂ ಕಿಂ ಭೂಯಃ ಶ್ರೋತುಮಿಚ್ಛಸಿ ॥೮೭॥

ಏವಂವಿಧಂ ಯೇऽಪಿ ವ್ರತಂ ಮನುಷ್ಯಾ ಭಕ್ತ್ಯಾ ಕರಿಷ್ಯಂತಿ ಮಲಿಮ್ಲುಚಸ್ಯ ।
ಉಪೋಷಿತಾ ಯ್ಯೈಸ್ತು ಸುಖಪ್ರದಾತ್ರೀ ಯಾ ಶುಕ್ಲಪಕ್ಷೇ ಭುವಿ ತೇऽಪಿ ಧನ್ಯಾಃ॥೮೮॥

ಶ್ರೋಷ್ಯಂತಿ ಯೇ ಹ್ಯಸ್ಯ ವಿಧಿಂ ಸಮಗ್ರಂ ತೇऽಪ್ಯಂಶಭಾಜೋಮನುಜಾಃ ಪ್ರಶಸ್ತಾಃ ।
ಯೋ ವೈಪಠಿಷ್ಯಂತಿ ಕಥಾಂ ಸಮಗ್ರಾಂ ತೇ ವೈ ಗಮಿಷ್ಯಂತಿ ಹರೇರ್ನಿವಾಸಮ್ ॥೮೯॥

॥ ಇತಿ ಶ್ರೀಮದಧಿಕಮಾಸ ಶುಕ್ಲೈಕಾದಶೀ ಪದ್ಮಿನೀ
ವ್ರತಮಾಹಾತ್ಮ್ಯಂ ಸಮಾಪ್ತಮ್ ॥

---

ನೀನೇನಾದರೂ ಮನೋಭೀಷ್ಟಸಿದ್ಧಿಯನ್ನು ಬಯಸುವಿಯಾದರೆ ನೀನೂ ಈ ವ್ರತವನ್ನು ಪ್ರಾರಂಭಿಸು. ॥೮೫॥ ಕೇಶವನ ಮಾತುಗಳನ್ನು ಕೇಳಿ ಧರ್ಮರಾಜನು ಅತಿಹರ್ಷಿತನಾಗಿ ತನ್ನೆಲ್ಲ ಬಂಧುಗಳಿಂದ ಕೂಡಿಕೊಂಡು ಶ್ರೇಷ್ಠವಾದ ಪದ್ಮಿನೀವ್ರತವನ್ನು ಆಚರಿಸಿದನು. ॥೮೬॥ ಆಗ ಸೂತರು ಶೌನಕರನ್ನು ಕುರಿತು ಹೇಳುತ್ತಾರೆ. ಭೋ ಶೌನಕರೇ, ನೀವು ಕೇಳಿದ ಅತ್ಯಂತ ಪವಿತ್ರವಾದ ಹಾಗೂ ಪುಣ್ಯಪ್ರದವೂ ಆದ ಈ ವ್ರತದ ಬಗ್ಗೆ ಎಲ್ಲವನ್ನೂ ತಿಳಿಸಿದ್ದೇನೆ. ಇನ್ನೇನಾದರೂ ಕೇಳುವುದಿದೆಯೇ ? ॥೮೭॥ ಇಂಥ ಮಹಿಮೋಪೇತವಾದ ಅಧಿಕಮಾಸದ ಏಕಾದಶೀ ವ್ರತವನ್ನು ಯಾವ ಮನುಷ್ಯರು ಭಕ್ತಿಯಿಂದ ಆಚರಿಸುತ್ತಾರೋ ಅವರೇ ಧನ್ಯರು ಮತ್ತು ಅಂಥವರಿಗೆ ಈ ಏಕಾದಶೀ ವ್ರತವು ಬಹು ಸುಖವನ್ನು ಕೊಡುವದು. ॥೮೮॥ ಈ ಏಕಾದಶೀ ವ್ರತದ ಮಹಾತ್ಮೆಯನ್ನು ಶ್ರದ್ಧೆಯಿಂದ ಪಠಣ ಹಾಗೂ ಶ್ರವಣ ಮಾಡುವವರೂ ಕೂಡ ಪುಣ್ಯಭಾಗಿಗಳಾಗಿ ಹರಿಮಂದಿರವನ್ನು ಸೇರುವರು. ॥೮೯॥

॥ ಇಲ್ಲಿಗೆ ಅಧಿಕ ಮಾಸದ ಶುಕ್ಲೈಕಾದಶೀ ವ್ರತಮಹಾತ್ಮೆಯು ಸಮಾಪ್ತವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

# ಅಧಿಕಮಾಸಕೃಷ್ಣೈಕಾದಶೀವ್ರತ ಕಥಾ

ಯುಧಿಷ್ಠಿರ ಉವಾಚ -

ಮಲಮಾಸಸ್ಯ ಕೃಷ್ಣಾ ಕಾ ಕಥ್ಯತೇ ವಿಭೋ ।
ಕಿಂ ನಾಮ ಕೋ ವಿಧಿಸ್ತಸ್ಯಾಃ ಕಥಯಸ್ವ ಜಗತ್ಪತೇ ॥೧॥

ಶ್ರೀಕೃಷ್ಣ ಉವಾಚ -

ಪರಮೇತಿ ಸಮಾಖ್ಯಾತಾ ಪವಿತ್ರಾ ಪಾಪಹಾರಿಕಾ ।
ಭುಕ್ತಿಮುಕ್ತಿ ಪ್ರದಾ ನೃಣಾಂ ಭಾಗದಾ ಚ ಯುಧಿಷ್ಠಿರ ॥೨॥

ಪೂರ್ವೋಕ್ತವಿಧಿನಾ ಕಾರ್ಯಾ ಶುಕ್ಲಾಯಾಃ ಸದೃಶೇನ ವೈ ।
ಪೂಜಯೇತ್ಪರಯಾ ಭಕ್ತ್ಯಾ ನಾಮ್ನಾ ದೇವಂ ನರೋತ್ತಮಮ್ ॥೩॥

ಅತ್ರ ತೇ ಕಥಯಿಷ್ಯಾಮಿ ಕಥಾಮೇತಾಂ ಮನೋರಮಾಮ್ ।
ಕಾಂಪಿಲ್ಯನಗರೇ ಜಾತಾಂ ಮುನೀನಾಮಗ್ರತಃ ಶ್ರುತಾಮ್ ॥೪॥

ಆಸೀದ್ದ್ವಿಜವರಃ ಕಶ್ಚಿತ್ಸುಮೇಧಾ ನಾಮ ಧಾರ್ಮಿಕಃ ।
ತಸ್ಯ ಪತ್ನೀ ಪವಿತ್ರಾಖ್ಯಾ ಪತಿವ್ರತಪರಾಯಣಾ ॥೫॥

---

"ಹೇ ವಿಭೋ, ಜಗತ್ಪತೇ, ಶ್ರೀಕೃಷ್ಣಪರಮಾತ್ಮಾ, ಅಧಿಕಮಾಸದ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯ ಹೆಸರು, ವ್ರತವಿಧಾನ ಮತ್ತು ಅದರ ಮಹಿಮೆಗಳನ್ನು ತಿಳಿಸಬೇಕು" ಎಂದು ಯುಧಿಷ್ಠಿರನು ಪ್ರಾರ್ಥಿಸಲು ॥ ೧॥ ಶ್ರೀಕೃಷ್ಣನು ಹೇಳುತ್ತಾನೆ - ಅಯ್ಯಾ, ಯುಧಿಷ್ಠಿರ ಅದಿಕ ಕೃಷ್ಣಪಕ್ಷದ ಏಕಾದಶಿಯು "ಪರಮಾ" ಎಂದು ಖ್ಯಾತವಾಗಿದೆ. ಇದು ಅತ್ಯಂತ ಪವಿತ್ರವೂ, ಪಾಪಹಾರಕವೂ, ಭುಕ್ತಿ ಮುಕ್ತಿ ಪ್ರದವೂ, ಮತ್ತು ಪುಣ್ಯದಾಯಕವೂ ಆಗಿದೆ. ॥ ೨॥ ಶುಕ್ಲಪಕ್ಷದ ಏಕಾದಶಿಯಂತೆಯೇ ಈ ಏಕಾದಶಿಯನ್ನು ಆಚರಿಸಬೇಕು. ನರೋತ್ತಮ ನಾಮಕ ಶ್ರೀಹರಿಯನ್ನು ಈ ದಿನ ಪರಮ ಭಕ್ತಿಯಿಂದ ಪೂಜಿಸಬೇಕು. ॥ ೩॥ ಈ ಸಂದರ್ಭದಲ್ಲಿ ಒಂದು ಮನೋಹಾರಿಯಾದ ಕಥೆಯನ್ನು ನಿನಗೆ ತಿಳಿಸುವೆನು ಕೇಳು. ಕಾಂಪಿಲ್ಯಂಬ ನಗರದಲ್ಲಿ ನಡೆದ ಮತ್ತು ಅನೇಕ ಜ್ಞಾನಿಗಳ ಸಮ್ಮುಖದಲ್ಲಿ ಶ್ರುತವಾದ ಈ ಕಥೆಯು ಬಹು ಚಿತ್ತಾಕರ್ಷಕವಾಗಿದೆ. ॥ ೪॥ ಹಿಂದಕ್ಕೆ ಸುಮೇಧಾ ಎಂಬ ಹೆಸರಿನ ಪರಮ ಧಾರ್ಮಿಕನಾದ ಒಬ್ಬ ದ್ವಿಜಶ್ರೇಷ್ಠನಿದ್ದನು. ಅವನ ಪತ್ನಿಯಾದ ಪವಿತ್ರಾ ಎನ್ನುವವಳು ಪತಿವ್ರತಾ ಪರಾಯಣೆಯಾಗಿದ್ದಳು. ॥ ೫॥ ಈ ಬ್ರಾಹ್ಮಣನು ಯಾವುದೋ ಒಂದು ಕರ್ಮವಶಾತ್ ಧನ ಧಾನ್ಯಗಳಿಂದ ರಹಿತನಾಗಿದ್ದನು. ಬಹು

ಕರ್ಮಣಾ ಕೇನಚಿದ್ವಿಪ್ರೋ ಧನಧಾನ್ಯವಿವರ್ಜಿತಃ ।
ನ ಕ್ವಾಪಿ ಲಭತೇ ಭಿಕ್ಷಾಂ ಯಾಚನ್ನಪಿ ನರಾನ್ ಬಹೂನ್ ॥೬॥

ನ ಭೋಜ್ಯಂ ಲಭತೇ ತಾದೃಕ್ ನ ವಸ್ತ್ರಂ ನೈವ ಮಂಡನಮ್ ।
ರೂಪಯೌವನಮಾಧುರ್ಯಾ ನಾರೀ ಶುಶ್ರೂಷತೇ ಪತಿಮ್ ॥೭॥

ಅತಿಥಿಂ ಭೋಜಯಿತ್ವಾ ತು ಸ್ವಯಂ ಸಾ ಕ್ಷುಧಿತಾ ಗೃಹೇ ।
ತಿಷ್ಠತ್ಯೇವ ವಿಶಾಲಾಕ್ಷೀ ಹ್ಯಮ್ಲಾನಮುಖಪಂಕಜಾ ॥೮॥

ನ ಭರ್ತಾರಂ ಕ್ವಚಿಚ್ಚೈವ ನಾಸ್ತ್ಯನ್ನಮಿತಿ ಭಾಷತೇ ।
ವಿಲೋಕ್ಯ ಭಾರ್ಯಾಂ ಸುದತೀಂ ಕರ್ಷತೀಂ ಸ್ವಕಲೇವರಮ್ ॥೯॥

ವಿಚಾರ್ಯ ಬ್ರಾಹ್ಮಣಶ್ಚಿತ್ತೇ ಭಾರ್ಯಾಯಾಃ ಪ್ರೇಮಬಂಧನಮ್ ।
ನಿಂದನ್ ಭಾಗ್ಯಂ ಸ್ವಕಂ ವಿಪ್ರಃ ಪ್ರೋಚೇ ವಾಕ್ಯಂ ಪ್ರಿಯಂವದಾಮ್ ॥೧೦॥

ಕಾಂತೇ, ಕರೋಮಿ ಕಿಂ ಕಾರ್ಯಂ ನ ಮಯಾ ಲಭ್ಯತೇ ಧನಮ್ ।
ಯಾಚಯಾಮಿ ನರಾನ್ ಭವ್ಯಾನ್ನ ಯಚ್ಛಂತಿ ಚ ಮೇ ಧನಮ್ ॥೧೧॥

ಕಿಂ ಕರೋಮಿ ಕ್ವ ಗಚ್ಛಾಮಿ ತ್ವಂ ಮೇ ಕಥಯ ಶೋಭನೇ ।
ವಿನಾ ಧನೇನ ಸುಶ್ರೋಣಿ ಗೃಹಕಾರ್ಯಂ ನ ಸಿದ್ಧ್ಯತಿ ॥೧೨॥

---

ಜನರನ್ನು ಪ್ರಾರ್ಥಿಸಿದರೂ ಅವನಿಗೆ ಎಲ್ಲಿಯೂ ಭಿಕ್ಷೆಯು ಸಿಗುತ್ತಿರಲಿಲ್ಲ. ॥ ೬॥ ಭೋಜ್ಯ ಪದಾರ್ಥಗಳಾಗಲೀ, ವಸ್ತ್ರಗಳಾಗಲಿ, ಅಲಂಕಾರಗಳಾಗಲೀ ಯಾವುದೂ ಅವನಿಗೆ ದೊರೆಯಲಿಲ್ಲ. ಹೀಗಿದ್ದರೂ ರೂಪ ಯೌವನ ಸಂಪನ್ನಳಾದ ಅವನ ಪತ್ನಿಯು ಸದಾ ಪತಿಸೇವೆಯಲ್ಲಿ ಆಸಕ್ತಳಾಗಿರುತ್ತಿದ್ದಳು. ॥ ೭॥ ಮನೆಗೆ ಬಂದ ಅತಿಥಿಗಳಿಗೆ ಮೊದಲು ಊಟಕ್ಕೆ ಬಡಿಸಿ ಅನಂತರ ಏನೂ ಉಳಿಯದಿದ್ದರೆ ಹಸಿದಿದ್ದರೂ ಮುಖವನ್ನು ಬಾಡಿಸಿಕೊಳ್ಳದೇ, ಪ್ರಸನ್ನವದನಳಾಗಿ ಇರುತ್ತಿದ್ದಳು. ॥ ೮॥ ಮನೆಯಲ್ಲಿ ಉಣ್ಣಲು ತಿನ್ನಲು ಏನೂ ಇಲ್ಲವೆಂದು ಅವಳೆಂದಿಗೂ ತನ್ನ ಪತಿಗೆ ತಿಳಿಸುತ್ತಿರಲಿಲ್ಲ. ಇದನ್ನರಿತ ಬ್ರಾಹ್ಮಣನು ತನ್ನ ಪತ್ನಿಯು ದಿನ ದಿನಕ್ಕೆ ಕ್ಷೀಣಿಸುತ್ತಿರುವದನ್ನು ಕಂಡು ॥ ೯॥ ಮತ್ತು ಅವಳು ತನ್ನಲ್ಲಿಟ್ಟಿರುವ ಪ್ರೇಮವನ್ನು ತಿಳಿದು ತನ್ನ ದೈವವನ್ನು ನಿಂದಿಸುತ್ತ ತನ್ನ ಪ್ರಿಯೆಗೆ ಹೇಳಿದನು. ॥೧೦॥ ಹೇ ಕಾಂತೆ, ನಾನೇನು ಮಾಡಲಿ? ಎಷ್ಟು ಪ್ರಯತ್ನಿಸಿದರೂ ನನಗೆ ಧನವು ಸಿಗುತ್ತಿಲ್ಲ. ದೊಡ್ಡ ದೊಡ್ಡ ಶ್ರೀಮಂತ ಜನರನ್ನು ಬೇಡಿದರೂ ಅವರು ನನಗೆ ಧನವನ್ನು ಕೊಡುತ್ತಿಲ್ಲ. ॥೧೧॥ ಹೇ ಶೋಭನೇ, ಏನು ಮಾಡಲಿ? ಎಲ್ಲಿಗೆ ಹೋಗಲಿ? ನೀನೇ ಹೇಳು. ಹೇ ಪ್ರಿಯೇ, ಧನವಿಲ್ಲದೇ ಗೃಹಕಾರ್ಯವು

ದೇಹ್ಯಾಜ್ಞಾಂ ಪರದೇಶಾಯ ಗಚ್ಛಾಮಿ ಧನಲಬ್ಧಯೇ ।
ತಸ್ಮಿನ್ ದೇಶೇ ಚ ಯದ್ಭಾವ್ಯಂ ಭಾಗ್ಯಂ ತತ್ರೈವ ಲಭ್ಯತೇ ॥೧೩॥

ಉದ್ಯಮೇನ ವಿನಾ ಸಿದ್ಧಿಃ ಕರ್ಮಣಾಂ ನೋಪಲಭ್ಯತೇ ।
ತಸ್ಮಾದ್ಬುಧಾಃ ಪ್ರಶಂಸಂತಿ ಸರ್ವಥೈವ ಶುಭೋದ್ಯಮಮ್ ॥೧೪॥

ಶ್ರುತ್ವಾ ಕಾಂತಸ್ಯ ವಚನಂ ಸಾಶ್ರುನೇತ್ರಾ ವಿಚಕ್ಷಣಾ ।
ಪ್ರೋವಾಚ ಪ್ರಾಂಜಲಿರ್ಭೂತ್ವಾ ವಿನಯಾನತಕಂಧರಾ ॥೧೫॥

ತ್ವತ್ತೋ ನಾಸ್ತಿ ಸುವಿಜ್ಞಾತಾ ತ್ವಯಾಽಽಜ್ಞಪ್ತಾ ಬ್ರವೀಮ್ಯಹಮ್ ।
ಹಿತೈಷಿಣೋ ನರಾ ಬ್ರೂಯುಃ ಶಶ್ವದಾಪದ್ಗತಾ ಅಪಿ ॥೧೬॥

ಪೂರ್ವದತ್ತಂ ಹಿ ಲಭತೇ ಯತ್ರ ಕುತ್ರ ಮಹೀತಲೇ ।
ವಿನಾ ದಾನಂ ನ ಲಭ್ಯೇತ ಮೇರೌ ಕನಕಪರ್ವತೇ ॥೧೭॥

ಪೂರ್ವದತ್ತಾ ಹಿ ಯಾ ವಿದ್ಯಾ ಪೂರ್ವದತ್ತಂ ಹಿ ಯದ್ಧನಮ್ ।
ಪೂರ್ವದತ್ತಾ ಹಿ ಯಾ ಭೂಮಿರಿಹ ಜನ್ಮನಿ ಲಭ್ಯತೇ ॥೧೮॥

ಯದ್ಧಾತ್ರಾ ಲಿಖಿತಂ ಭಾಲೇ ತತ್ ತತ್ರೈವ ಹಿ ಲಭ್ಯತೇ ।
ವಿನಾ ದತ್ತೇನ ಕಿಂ ಕ್ವಾಪಿ ಲಭ್ಯತೇ ನೈವ ಕಿಂಚನ ॥೧೯॥

---

ಸಾಗುವುದೆಂತು ? ॥೧೨॥ ಧನಸಂಪಾದನೆಗಾಗಿ ಇನ್ನು ನಾನು ಪರದೇಶಕ್ಕೆ ಹೊರಡುವೆನು. ನನಗೆ ಅನುಜ್ಞೆಯನ್ನು ಕೊಡು. ಆ ದೇಶದಲ್ಲಿ ನನ್ನ ದೈವದಲ್ಲಿದ್ದಂತೆ ಸಂಪಾದನೆಯಾಗುವುದು. ॥೧೩॥ ಪ್ರಯತ್ನವಿಲ್ಲದೇ ಕರ್ಮಗಳ ಸಿದ್ಧಿಯಾಗುವುದಿಲ್ಲ. ಆದ್ದರಿಂದ ಬುದ್ಧಿವಂತರು ಸದಾ ಶುಭೋದ್ಯಮವನ್ನೇ ಪ್ರಶಂಸಿಸುತ್ತಾರೆ. ॥೧೪॥ ಪತಿಯ ಈ ಮಾತುಗಳನ್ನು ಕೇಳಿ ವ್ಯವಹಾರಕುಶಲಳಾಗಿದ್ದ ಪತ್ನಿಯು ಕಣ್ಣೀರು ಸುರಿಸುತ್ತ ವಿನಯದಿಂದ ಕೈಜೋಡಿಸಿಕೊಂಡು ಬಾಗಿ ನಿಂತು ನುಡಿದಳು. ॥೧೫॥ ಸ್ವಾಮಿ, ನಾನೇನು ನಿಮಗಿಂತ ಹೆಚ್ಚು ತಿಳಿದವಳಲ್ಲ. ಆದರೂ ನಿಮ್ಮಿಂದ ಆಜ್ಞಪ್ತಳಾಗಿ ಕೆಲ ಮಾತುಗಳನ್ನು ಹೇಳುವೆನು. ತಮ್ಮ ಹಿತವನ್ನು ಬಯಸುವ ಜನರು ತಾವು ಆಪತ್ತಿನಲ್ಲಿದ್ದರೂ ಹೀಗೆ ಅಂದುಕೊಳ್ಳುತ್ತಾರೆ ಏನೆಂದರೆ ॥೧೬॥ ಈ ಭೂಮಿಯ ಮೇಲೆ ಎಲ್ಲಿದ್ದರೂ ಪೂರ್ವದಲ್ಲಿ ಕೊಟ್ಟದ್ದೇ ಸಿಗುತ್ತದೆ. ದಾನ ಮಾಡಿರದವನಿಗೆ ಸುವರ್ಣದ ಮೇರುಪರ್ವತದ ಮೇಲಿದ್ದರೂ ಏನೂ ದೊರೆಯಲಾರದು. ॥೧೭॥ ಪೂರ್ವಜನ್ಮದಲ್ಲಿ ದಾನ ಮಾಡಿದ ವಿದ್ಯೆ, ಧನ, ಭೂಮಿ ಮೊದಲಾದವುಗಳು ಈ ಜನ್ಮದಲ್ಲಿ ದೊರೆಯುತ್ತವೆ. ॥೧೮॥ ವಿಧಿಯು ಹಣೆಬರಹದಲ್ಲಿ ಬರೆದದ್ದೇ ಎಲ್ಲಿದ್ದರೂ ಅಲ್ಲೇ ದೊರೆಯುತ್ತದೆ. ಪೂರ್ವದಲ್ಲಿ ಕೊಡದೇ ಇದ್ದುದು ಈಗ

ಪೂರ್ವಜನ್ಮನಿ ವಿಪ್ರೇಂದ್ರ ನ ಮಯಾ ನ ತ್ವಯಾ ಕ್ವಚಿತ್ ।
ಸತ್ಪಾತ್ರಾಣಾಂ ಕರೇ ದತ್ತಂ ಸ್ವಲ್ಪಂ ಭೂರ್ಯಪಿ ಸದ್ಧನಮ್ ॥೨೦॥

ಇಹ ದೇಶೇಽಪರೇ ವಾಪಿ ದತ್ತಂ ಸರ್ವತ್ರ ಲಭ್ಯತೇ ।
ಅನ್ನಮಾತ್ರಂ ತು ವಿಶ್ವೇಶೋ ವಿನಾ ದತ್ತಂ ನ ಯಚ್ಛತಿ ॥೨೧॥

ತಸ್ಮಾದತ್ರೈವ ಭೋ ವಿಪ್ರ ಸ್ಥಾತವ್ಯಂ ಭವತಾ ಮಯಾ ।
ಭವದ್ವಿನಾ ನ ತಿಷ್ಠಾಮಿ ಕ್ಷಣಮಾತ್ರಂ ಮಹಾಮುನೇ ॥೨೨॥

ನ ಮಾತಾ ನ ಪಿತಾ ಭ್ರಾತಾ ನ ಶ್ವಶ್ರೂಃ ನ ಶ್ವಶುರೋ ಜನಾಃ ।
ನ ಸತ್ಕುರ್ವಂತಿ ಕೇಽಪಿ ಸ್ತ್ರೀಂ ಸ್ವಜನಾಶ್ಚ ಪರೇ ಕುತಃ ॥೨೩॥

ಭರ್ತೃಹೀನಾಂ ವಿನಿಂದಂತಿ ದುರ್ಭಗೇತಿ ವದಂತಿ ಚ ।
ತಸ್ಮಾದತ್ರ ಸ್ಥಿತೋ ಭೂತ್ವಾ ವಿಹರಸ್ವ ಯಥಾಸುಖಮ್ ॥೨೪॥

ಭವತೋ ಭಾಗ್ಯಭೋಗೇನ ಪ್ರಾಪ್ತಿಸ್ಸ್ಯಾತ್ರ ಭವಿಷ್ಯತಿ ।
ಶ್ರುತ್ವಾ ತಸ್ಯಾಸ್ತು ವಚನಂ ಸ್ಥಿತಸ್ತತ್ರ ವಿಚಕ್ಷಣಃ ॥೨೫॥

---

ಎಲ್ಲಿದ್ದರೂ, ಎಷ್ಟೂ ದೊರೆಯಲಾರದು. ಹೇ ಸ್ವಾಮಿನ್, ಪೂರ್ವಜನ್ಮದಲ್ಲಿ ನಾನಾಗಲೀ, ತಾವಾಗಲೀ ಸತ್ಪಾತ್ರನಾದ ಬ್ರಾಹ್ಮಣನಿಗೆ ಸ್ವಲ್ಪಾಗಲೀ ಅಥವಾ ಬಹುವಾಗಲಿ ಶುದ್ಧ ಧನವನ್ನು ದಾನಮಾಡಿರುವದಿಲ್ಲ. ॥೨೦॥ ಈ ದೇಶದಲ್ಲಾಗಲೀ ಅಥವಾ ಪರದೇಶದಲ್ಲಾಗಲೀ ಎಲ್ಲಿದ್ದರೂ ಪೂರ್ವದಲ್ಲಿ ಕೊಟ್ಟಿದ್ದರೆ ಮಾತ್ರ ದೊರೆಯುವದಷ್ಟೇ ! ವಿಶ್ವೇಶನಾದ ಶ್ರೀಹರಿಯು, ಪೂರ್ವದಲ್ಲಿ ಅನ್ನದಾನ ಮಾಡಿರದವನಿಗೆ ಈ ಜನ್ಮದಲ್ಲಿ ಅನ್ನವನ್ನೂ ಕೊಡಲಾರನು. ॥ ೨೧॥ ಆದ್ದರಿಂದ ಸ್ವಾಮಿ, ನೀವು ಮತ್ತು ನಾನು ಕೂಡಿ ಇಲ್ಲಿಯೇ ಇರುವದು ಯೋಗ್ಯವಾಗಿದೆ. ಹೇ ಮಹಾಮುನೇ, ತಮ್ಮನ್ನು ಬಿಟ್ಟು ಒಂದು ಕ್ಷಣವೂ ನಾನು ಇರಲಾರೆನು. ।೨೨॥ ತಂದೆ - ತಾಯಿ ಅಣ್ಣ-ತಮ್ಮ, ಅತ್ತೆ-ಮಾವ ಮೊದಲಾದ ಸ್ವಕೀಯರು ಗಂಡನಿಂದ ದೂರಳಾದ ಸ್ತ್ರೀಯನ್ನು ಗೌರವಿಸುವದಿಲ್ಲ. ಸ್ವಕೀಯರೇ ಹೀಗೆ ಮಾಡುವಾಗ ಪರಕೀಯರು ಗೌರವಿಸುವರೇ ॥೨೩॥ ಭರ್ತೃಹೀನಳಾದ ಸ್ತ್ರೀಯನ್ನು ಎಲ್ಲರೂ ನಿಂದಿಸುವರು, 'ದುರ್ಭಗೆ' ಎಂದು ಜರಿಯುವರು. ಆದ್ದರಿಂದ ಇಲ್ಲಿಯೇ ನನ್ನೊಂದಿಗೆ ಸುಖವಾಗಿ ಇರಿ. ॥೨೪॥ ತಮ್ಮ ಭಾಗ್ಯದಿಂದ ಏನಾದರೂ ಪ್ರಾಪ್ತಿಯಾಗುವದು. ಪತ್ನಿಯ ಹಿತನುಡಿಗಳನ್ನು ಕೇಳಿದ ಸುಮೇಧನು ಪರದೇಶ ಪ್ರಯಾಣವನ್ನು ರದ್ದುಪಡಿಸಿ ಅಲ್ಲಿಯೇ ನಿಂತುಕೊಂಡನು. ॥೨೫॥ ಅಷ್ಟರಲ್ಲಿ ಮುನಿಶ್ರೇಷ್ಠರಾದ

ತಾವತ್ತತ್ರ ಸಮಾಯಾತಃ ಕೌಂಡಿನ್ಯೋ ಮುನಿಸತ್ತಮಃ ।
ದೃಷ್ಟ್ವಾ ಸಮಾಗತಂ ಹೃಷ್ಟಃ ಸುಮೇಧಾ ದ್ವಿಜಸತ್ತಮಃ ॥ ೨೬ ॥
ಸಭಾರ್ಯಃ ಸಹಸೋತ್ಥಾಯ ನನಾಮ ಶಿರಸಾಽಸಕೃತ್ ।
ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಸಫಲಂ ಜೀವಿತಂ ಮಮ ॥ ೨೭ ॥
ಯದ್ದೃಷ್ಟೋಽಸಿ ಮಹದ್ಭಾಗ್ಯಾದಿತ್ಯುವಾಚ ಮುನೀಶ್ವರಮ್ ।
ದತ್ವಾ ಸುವಿಷ್ಟರಂ ತಸ್ಮೈ ಪೂಜಯಾಮಾಸ ತಂ ದ್ವಿಜಮ್ ॥ ೨೮ ॥
ಭೋಜಯಿತ್ವಾ ವಿಧಾನೇನ ಪಪ್ರಚ್ಛ ಪ್ರಮದೋತ್ತಮಾ ।
ವಿದ್ವನ್ ಕೇನ ಪ್ರಕಾರೇಣ ದಾರಿದ್ರ್ಯಸ್ಯ ಕ್ಷಯೋ ಭವೇತ್ ॥ ೨೯ ॥
ವಿನಾ ದತ್ತಂ ಕಥಂ ಲಭ್ಯೇದ್ಧನಂ ವಿದ್ಯಾ ಕುಟುಂಬಿನೀ ।
ಮಾಂ ಮೇ ಭರ್ತಾ-ಪರಿತ್ಯಜ್ಯ ಗಂತುಕಾಮೋಽದ್ಯ ವರ್ತತೇ ॥ ೩೦ ॥
ಅನ್ಯದೇಶಾನ್ ಪರಾಂಲ್ಲೋಕಾನ್ ಯಾಚಿತುಂ ಪರಪತ್ತನೇ ।
ಸಂಪ್ರಾರ್ಥ್ಯ ತು ಮಯಾ ವಿದ್ವನ್ ಹೇತುವಾಕ್ಯೈರ್ಮಹತ್ತರೈಃ ॥ ೩೧ ॥
ನಾದತ್ತಂ ಲಭ್ಯತೇ ಕಿಂಚಿದಿತ್ಯುಕ್ತ್ವಾ ಸ ನಿವಾರಿತಃ ।
ಮಮ ಭಾಗ್ಯಾನ್ಮುನೀಂದ್ರಾದ್ಯ ತ್ವಮತ್ರೈವ ಸಮಾಗತಃ ॥ ೩೨ ॥

---

ಕೌಂಡಿಣ್ಯರು ಅಲ್ಲಿಗೆ ದಯಮಾಡಿಸಿದರು. ಮನೆಗೆ ಬಂದ ಮುನಿಗಳನ್ನು ಕಂಡು ಹರ್ಷಭರಿತನಾದ ಸುಮೇಧನು ॥ ೨೬॥ ತನ್ನ ಹೆಂಡತಿಯೊಂದಿಗೆ ಮೇಲೆದ್ದು ಅವರಿಗೆ ಶಿರಸಾ ನಮಸ್ಕರಿಸಿದನು. 'ಭೋ ಮುನಿವರ, ಸುದೈವದಿಂದ ತಮ್ಮ ದರ್ಶನವಾಗಿದ್ದರಿಂದ ನಾನಿಂದು ಧನ್ಯನಾದೆನು, ಅನುಗೃಹೀತನಾದೆನು, ನನ್ನ ಜೀವನನವು ಇಂದು ಸಫಲವಾಯಿತು. ॥ ೨೭॥ ಎಂದು ನುಡಿಯುತ್ತ ಕೌಂಡಿಣ್ಯರಿಗೆ ಉಚ್ಚಾಸನವನ್ನು ಕೊಟ್ಟು ದಂಪತಿಗಳಿಬ್ಬರೂ ಅವರನ್ನು ಭಕ್ತಿಯಿಂದ ಪೂಜಿಸಿ ಸತ್ಕರಿಸಿದರು. ॥ ೨೮॥ ಋಷಿಗಳು ಭೋಜನಾನಂತರ ಪ್ರಸನ್ನಚಿತ್ತರಾಗಿ ಕುಳಿತಾಗ ಸುಮೇಧನ ಪತ್ನಿಯು ವಿನಯದಿಂದ ಪ್ರಶ್ನಿಸಿದಳು- ಭೋ ಜ್ಞಾನಿವರ್ಯರೇ, ಏನು ಮಾಡುವುದರಿಂದ ನಮ್ಮ ದಾರಿದ್ರ್ಯವು ನಾಶವಾಗುವದು ? ॥ ೨೯ ॥ ಪೂರ್ವದಲ್ಲಿ ದಾನ ಮಾಡದೇ ಈಗ ಧನ ಮತ್ತು ವಿದ್ಯೆಗಳು ಹೇಗೆ ಲಭಿಸುವವು ? ನನ್ನ ಪತಿಯು ನನ್ನನ್ನು ಬಿಟ್ಟು ಪರದೇಶಕ್ಕೆ ಹೋಗುವ ವಿಚಾರದಲ್ಲಿದ್ದಾರೆ. ॥ ೩೦॥ ಪರದೇಶಕ್ಕೆ ಹೋಗಿ ಅಲ್ಲಿಯ ಪಟ್ಟಣಗಳಲ್ಲಿರುವ ಜನರಲ್ಲಿ ಧನಯಾಚನೆ ಮಾಡಬೇಕೆಂದು ಆಲೋಚಿಸುತ್ತಿದ್ದಾರೆ. ಪೂಜ್ಯರೇ, ಆದರೆ ನಾನು ಯುಕ್ತಿಯುಕ್ತ ಕೆಲ ಮಾತುಗಳನ್ನು ಹೇಳಿ ॥ ೩೧॥ ಮತ್ತು 'ಪೂರ್ವದಲ್ಲಿ ಕೊಡದಿದ್ದುದು ಈಗ ಸಿಗಲಾರದು. ಎಂದು ತಿಳಿಸಿ, ಪರಿಪರಿಯಿಂದ ಪ್ರಾರ್ಥಿಸಿ ಪರದೇಶಕ್ಕೆ ಹೋಗದಂತೆ

ದಾರಿದ್ರ್ಯಂ ತ್ವತ್ಪ್ರಸಾದಾನ್ಮೇ ಶೀಘ್ರಂ ನಶ್ಯತ್ಯಸಂಶಯಮ್ ।
ಕೇನೋಪಾಯೇನ ವಿಪ್ರೇಂದ್ರ ದಾರಿದ್ರ್ಯಂ ನಶ್ಯತಿ ಧ್ರುವಮ್ ॥೩೩॥

ಕಥಯಸ್ವ ಕೃಪಾಸಿಂಧೋ ವ್ರತಂ ತೀರ್ಥಂ ತಪಾದಿಕಮ್ ।
ಶ್ರುತ್ವಾ ತಸ್ಯಾಃ ಸುಶೀಲಾಯಾ ಭಾಷಿತಂ ಮುನಿಪುಂಗವಃ ॥೩೪॥

ಪ್ರೋವಾಚ ಪ್ರವರಂ ಚಿತ್ತೇ ವಿಚಾರ್ಯ ವ್ರತಮುತ್ತಮಮ್ ।
ಸರ್ವಪಾಪೌಘಶಮನಂ ದುಃಖದಾರಿದ್ರ್ಯ ನಾಶನಮ್ ॥೩೫॥

ಪರಮಾ ನಾಮ ವಿಖ್ಯಾತಾ ವಿಷ್ಣೋಃಸ್ತಿಥಿರನುತ್ತಮಾ ।
ಮಲಿಮ್ಲುಚೇ ತು ಯಾ ಕೃಷ್ಣಾ ಭುಕ್ತಿಮುಕ್ತಿಫಲಪ್ರದಾ ॥೩೬॥

ತಸ್ಯಾಮುಪೋಷಣಂ ಕೃತ್ವಾ ಧನಧಾನ್ಯಯುತೋ ಭವೇತ್ ।
ವಿಧಿನಾ ಜಾಗರೈಃ ಸಾಕಂ ಗೀತಂ ನೃತ್ಯಾದಿಕಂ ಚರೇತ್ ॥೩೭॥

ಧನದೇನ ಪುರಾ ಚೀರ್ಣಂ ವ್ರತಮೇತತ್ಸುಶೋಭನಮ್ ।
ತದಾ ಹೃಷ್ಟೇನ ರುದ್ರೇಣ ಧನಾನಾಮಧಿಪಃ ಕೃತಃ ॥೩೮॥

---

ತಡೆಹಿಡಿದಿದ್ದೇನೆ. ಹೇ ಮುನಿವರ, ನನ್ನ ಸುದೈವದಿಂದ ಇಂದು ತಾವು ಇಲ್ಲಿಯೇ ದಯಮಾಡಿಸಿರುವಿರಿ. ॥೩೨॥ ತಮ್ಮ ಅನುಗ್ರಹದಿಂದ ನಮ್ಮ ದಾರಿದ್ರ್ಯವು ಇನ್ನು ಶೀಘ್ರದಲ್ಲೇ ನಾಶವಾಗುವಲ್ಲಿ ಸಂದೇಹವಿಲ್ಲ. ಭೋ ಪೂಜ್ಯರೇ, ಯಾವ ಉಪಾಯದಿಂದ ನಮ್ಮ ದಾರಿದ್ರ್ಯವು ನಿಶ್ಚಿತವಾಗಿ ನಾಶವಾಗುವದೋ ಆ ಉಪಾಯವನ್ನು ॥ ೩೩॥ ಹೇ ಕೃಪಾಸಿಂಧೋ, ನಮಗೆ ತಿಳಿಸಿರಿ. ವ್ರತ, ತೀರ್ಥಸ್ನಾನ, ಜಪತಪಾದಿಗಳೇನಾದರೂ ಇದ್ದರೆ ದಯವಿಟ್ಟು ತಿಳಿಸಿ ಅನುಗ್ರಹಿಸಿರಿ. ಸುಶೀಲೆಯ ಈ ದೀನವಚನಗಳನ್ನು ಕೇಳಿ ಮನಕರಗಿದ ಕೌಂಡಿಣ್ಯರು ॥ ೩೪॥ ಸರ್ವಪಾಪಗಳನ್ನು ಮತ್ತು ದುಃಖ ದಾರಿದ್ರ್ಯಗಳನ್ನು ಕಳೆಯುವ ಯಾವ ವ್ರತವಿದೆ ಎಂದು ತಮ್ಮ ಮನದಲ್ಲಿ ವಿಚಾರಿಸಿ ತಿಳಿದು ಸುಶೀಲೆಗೆ ಹೇಳಿದರು. ॥ ೩೫॥ ಹೇ ಭದ್ರೇ, ಮಲಮಾಸದ ಕೃಷ್ಣಪಕ್ಷದಲ್ಲಿ ಬರುವ 'ಪರಮಾ' ಎಂಬ ಹೆಸರಿನಿಂದ ಖ್ಯಾತವಾದ ಏಕಾದಶಿಯು ಅತಿ ಶ್ರೇಷ್ಠವಾಗಿದ್ದು ಭುಕ್ತಿ ಮುಕ್ತಿ ಫಲಗಳನ್ನು ಕೊಡುವಂಥದಾಗಿದೆ. ॥೩೬॥ ಆ ದಿನ ವಿಧ್ಯುಕ್ತವಾಗಿ ಉಪವಾಸವನ್ನು ಮಾಡಿ ರಾತ್ರಿ ಗೀತನೃತ್ಯಗಳೊಂದಿಗೆ ಜಾಗರವನ್ನು ಮಾಡುವವನು ಧನ ಧಾನ್ಯಗಳ ಸಮೃದ್ಧಿಯನ್ನು ಹೊಂದುವನು. ॥ ೩೭॥ ಹಿಂದಕ್ಕೆ ಕುಬೇರನು ಸುಶೋಭನವಾದ ಈ ವ್ರತವನ್ನು ಆಚರಿಸಿದ್ದರಿಂದ ಸಂತುಷ್ಟನಾದ ರುದ್ರನು ಅವನನ್ನು ಧನಾಧಿಪನನ್ನಾಗಿ ಮಾಡಿದನು. ॥೩೮॥ ಮಗನನ್ನು ಮಾರಾಟ ಮಾಡಿದ ಹರಿಶ್ಚಂದ್ರನು ಈ ವ್ರತವನ್ನು ಆಚರಿಸಿದ್ದರಿಂದ ಮತ್ತೆ ಹೆಂಡತಿ ಮಗನನ್ನು

ಹರಿಶ್ಚಂದ್ರೇಣ ಚ ಕೃತಂ ಪುರಾ ಕ್ರೀತಸುತೇನ ವೈ ।
ಪುನಃ ಪ್ರಾಪ್ತಾ ಪ್ರಿಯಾ ತೇನ ರಾಜ್ಯಂ ನಿಹತಕಂಟಕಮ್ ॥೩೯॥

ತಸ್ಮಾತ್ಕುರು ವಿಶಾಲಾಕ್ಷಿ ವ್ರತಮೇತತ್ಸುಶೋಭನಮ್ ।
ವಿಧಿನಾ ವಿಧಿಯುಕ್ತೇನ ಸಮಂ ಜಾಗರಣೇನ ಚ ॥೪೦॥

ಇತ್ಯುಕ್ತ್ವಾ ತದ್ವಿಧಿಂ ಸರ್ವಂ ಕಥಯಾಮಾಸ ಪಾಂಡವ ।
ಪ್ರೀತ್ಯಾ ಪರಮಸಂತುಷ್ಟಸ್ತತೋ ಭಕ್ತ್ಯಾ ಪ್ರಸಾದತಃ ॥೪೧॥

ಪುನಃ ಪ್ರೋವಾಚ ತಂ ವಿಪ್ರಂ ಪಂಚರಾತ್ರಿವ್ರತಂ ಶುಭಮ್ ।
ಯಸ್ಯಾನುಷ್ಠಾನಮಾತ್ರೇಣ ಭುಕ್ತಿಮುಕ್ತಿಶ್ಚ ಪ್ರಾಪ್ಯತೇ ॥೪೨॥

ಪರಮಾದಿವಸೇ ಪ್ರಾತಃ ಕೃತ್ವಾ ಪೌರ್ವಾಹ್ಣಿಕಂ ವಿಧಿಮ್ ।
ಕುರ್ಯಾತ್ ಸುನಿಯಮಾನ್ ಶಕ್ತ್ಯಾ ಪಂಚರಾತ್ರಿವ್ರತಾದರಾತ್ ॥೪೩॥

ಪ್ರಾತಃ ಸ್ನಾತ್ವಾ ನಿರಾಹಾರೋ ಯಸ್ತಿಷ್ಠೇದ್ದಿನಪಂಚಕಮ್ ।
ಸ ಗಚ್ಛೇದ್ವೈಷ್ಣವಂ ಸ್ಥಾನಂ ಪಿತೃಮಾತೃಪ್ರಿಯಾಸಮಮ್ ॥೪೪॥

ಏಕಾಶನಸ್ತು ಯೋ ಭೂಯಾದ್ದಿನಾನಾಂ ಪಂಚಕಂ ನರಃ ।
ಸರ್ವಪಾಪವಿನಿರ್ಮುಕ್ತಃ ಸ್ವರ್ಗಲೋಕೇ ಮಹೀಯತೇ ॥೪೫॥

---

ಹಾಗೂ ನಿಷ್ಕಂಟಕವಾದ ರಾಜ್ಯವನ್ನು ಪಡೆದನು. ॥೩೯॥ ಹೇ ವಿಶಾಲಾಕ್ಷಿ, ಮಂಗಳಪ್ರದವಾದ ಈ ಶ್ರೇಷ್ಠವ್ರತವನ್ನು ವಿಧಿಪೂರ್ವಕ ಜಾಗರದೊಂದಿಗೆ ಆಚರಿಸು. ॥೪೦॥ ಹೀಗೆ ಹೇಳಿ ಕೌಂಡಿಣ್ಯರು ಪರಮ ಸಂತುಷ್ಟರಾಗಿ ಆ ವ್ರತದ ವಿಧಾನವನ್ನೆಲ್ಲ ತಿಳಿಸಿದರು. ॥೪೧॥ ಅನಂತರ ಸುಮೇಧ ಬ್ರಾಹ್ಮಣನಿಗೆ ಯಾವ ವ್ರತಾನುಷ್ಠಾನದಿಂದ ಭುಕ್ತಿ ಹಾಗೂ ಮುಕ್ತಿಗಳು ಲಭಿಸುವವೋ ಅಂಥ ಪಂಚರಾತ್ರವ್ರತದ ಬಗ್ಗೆ ಹೇಳಿದರು. ॥೪೨॥ 'ಪರಮಾ' ಏಕಾದಶಿಯ ದಿನ ಪ್ರಾತಃಕಾಲದಲ್ಲೆದ್ದು ಸ್ನಾನಾಹ್ನಿಕಗಳನ್ನು ಮುಗಿಸಿ ಪಂಚರಾತ್ರಿವ್ರತದಲ್ಲಿ ಅತ್ಯಂತ ಶ್ರದ್ಧೆಯುಳ್ಳವನಾಗಿ ಆ ವ್ರತದ ನಿಯಮಗಳನ್ನು ಧಾರಣಮಾಡಬೇಕು. ॥೪೩॥ ಪ್ರಾತಃಕಾಲದಲ್ಲಿ ಸ್ನಾನ ಮಾಡಿ ಏಕಾದಶಿಯಿಂದ ೫ ದಿನಗಳ ವರೆಗೆ ಯಾವನು ನಿರಾಹಾರಿಯಾಗಿರುವನೋ ಅವನು ತನ್ನ ತಂದೆ, ತಾಯಿ, ಹೆಂಡತಿಯೊಡನೆ ವಿಷ್ಣುಲೋಕಕ್ಕೇ ಹೋಗುವನು. ॥೪೪॥ ಇನ್ನು ಪ್ರತಿ ದಿನ ಒಪ್ಪತ್ತು ಊಟ ಮಾಡಿ ೫ ದಿನಗಳನ್ನು ಕಳೆಯುವವನು ಸರ್ವಪಾಪಗಳಿಂದ ಮುಕ್ತನಾಗಿ ಸ್ವರ್ಗಲೋಕವನ್ನು ಪಡೆಯುವನು. ॥೪೫॥ ತಾನು ಸ್ನಾನಾಹ್ನಿಕ ಮುಗಿಸಿ ಪ್ರತಿದಿನ ಬ್ರಾಹ್ಮಣಭೋಜನವನ್ನು ಮಾಡಿಸಿದರೆ ಅದರಿಂದ ಎಲ್ಲ ದೇವತೆಗಳು, ಅಸುರರು ಹಾಗೂ ಮನುಷ್ಯರಿಗೆ ಭೋಜನ

ಸ್ನಾತ್ವಾ ಯೋ ಭೋಜಯೇದ್ವಿಪ್ರಂ ದಿನಾನಾಂ ಪಂಚಕಂ ನರಃ ।
ಭೋಜಿತಂ ತೇನ ವಿಧಿನಾ ಸದೇವಾಸುರ ಮಾನುಷಮ್ ॥೪೬॥

ಪೂರ್ಣಕುಂಭಂ ಸುತೋಯೇನ ಯೋ ದದಾತಿ ದ್ವಿಜಾತಯೇ ।
ದತ್ತಂ ತೇನೈವ ಸಕಲಂ ಬ್ರಹ್ಮಾಂಡಂ ಸಚರಾಚರಮ್ ॥೪೭॥

ತಿಲಪಾತ್ರಂ ತು ಯೋ ದದ್ಯಾತ್ ಬ್ರಾಹ್ಮಣಾಯ ವಿಪಶ್ಚಿತೇ ।
ತಿಲಸಂಖ್ಯಾಸಮಾಃ ಸಾಧ್ವಿ ಸ ವಸೇನ್ನಾಕಮಂಡಲೇ ॥೪೮॥

ಘೃತಪಾತ್ರಂ ತು ಯೋ ದದ್ಯಾತ್ ಸ್ನಾತ್ವಾ ಪಂಚದಿನಂ ನರಃ ।
ಸ ಭುಕ್ತ್ವಾ ವಿಪುಲಾನ್ಭೋಗಾನ್ಸೂರ್ಯಲೋಕೇ ಮಹೀಯತೇ ॥೪೯॥

ಬ್ರಹ್ಮಚರ್ಯೇಣ ಯಸ್ತಿಷ್ಠೇದ್ದಿನಾನಾಂ ಪಂಚಕಂ ನರಃ ।
ಭುನಕ್ತಿ ಸ ಸ್ವರ್ಗಭೋಗಾನ್ ಸ್ವರ್ವೇಶ್ಯಾಭಿಸಮಂ ಮುದಾ ॥೫೦॥

ಏವಂವಿಧಂ ವ್ರತಂ ಸಾಧ್ವಿ ಕುರು ತ್ವಂ ಪತಿನಾ ಶುಭೇ ।
ಧನಧಾನ್ಯಯುತಾ ಭೂತ್ವಾ ಸ್ವರ್ಗಂ ಯಾಸ್ಯಸಿ ಸುವ್ರತೇ ॥೫೧॥

ಇತ್ಯುಕ್ತಾ ಸಾ ವ್ರತಂ ಚಕ್ರೇ ಕೌಂಡಿನ್ಯೇನ ಯಥೋದಿತಮ್ ।
ಭರ್ತ್ರಾ ಸಮಂ ಭಾವಯುತಾ ಸ್ನಾತ್ವಾ ಮಾಸಿ ಮಲಿಮ್ಲುಚೇ ॥೫೨॥

---

ಮಾಡಿಸಿದಂತಾಗುವದು. ॥ ೪೬॥ ಶ್ರೇಷ್ಠವಾದ ಜಲದಿಂದ ತುಂಬಿದ ಪೂರ್ಣಕುಂಭವನ್ನು ಬ್ರಾಹ್ಮಣರಿಗೆ ದಾನ ಮಾಡಿದರೆ ಅದರಿಂದ ಚರಾಚರ ಬ್ರಹ್ಮಾಂಡವನ್ನೇ ದಾನಮಾಡಿದಂತಾಗುವದು. ॥ ೪೭॥ ಜ್ಞಾನಿಯಾದ ಬ್ರಾಹ್ಮಣನಿಗೆ ತಿಲಪಾತ್ರವನ್ನು ಕೊಡುವವನು ಪಾತ್ರೆಯಲ್ಲಿರುವ ತಿಲಗಳ ಸಂಖ್ಯೆಯಷ್ಟು ವರ್ಷಗಳವರೆಗೆ ಸ್ವರ್ಗಲೋಕದಲ್ಲಿ ವಾಸಿಸುವನು. ॥ ೪೮॥ ಸ್ನಾನಾನಂತರ ೫ ದಿನಗಳಲ್ಲಿಯೂ ಪ್ರತಿದಿನ ಘೃತಪೂರ್ಣಪಾತ್ರೆಯನ್ನು ದಾನ ಮಾಡುವವನು ವಿಪುಲ ಭೋಗಗಳನ್ನು ಭೋಗಿಸಿ ಕೊನೆಗೆ ಸೂರ್ಯ ಲೋಕವನ್ನು ಸೇರುವನು. ॥ ೪೯॥ ೫ ದಿನಗಳೂ ಬ್ರಹ್ಮಚರ್ಯದಿಂದ ಇರುವವನು ಸ್ವರ್ಗದಲ್ಲಿ ಸ್ತ್ರೀಯರೊಂದಿಗೆ ಅಲ್ಲಿಯ ಭೋಗಗಳನ್ನು ಭೋಗಿಸುವನು. ॥ ೫೦॥ ಹೇ ಸಾಧ್ವೀ, ಈ ಪ್ರಕಾರವಾಗಿರುವ ಈ ವ್ರತವನ್ನು ನಿನ್ನ ಪತಿಯೊಂದಿಗೆ ಆಚರಿಸು. ಇದರಿಂದ ಧನಧಾನ್ಯಗಳನ್ನು ಹೊಂದಿ ಕೊನೆಗೆ ಸ್ವರ್ಗಲೋಕವನ್ನು ಪಡೆಯುವಿ. ॥ ೫೧॥ ಈ ಪ್ರಕಾರ ಕೌಂಡಿಣ್ಯ ಋಷಿಗಳಿಂದ ಉಪದೇಶಿಸಲ್ಪಟ್ಟಂತೆ ಆ ಸಾಧ್ವಿಯು ಭಕ್ತಿಯುತಳಾಗಿ ತನ್ನ ಪತಿಯೊಂದಿಗೆ ಮಲಮಾಸದಲ್ಲಿ ಸ್ನಾನಾಹ್ನಿಕಗಳನ್ನು ಮುಗಿಸಿ ಪಂಚರಾತ್ರವ್ರತವನ್ನು ಮಾಡಿದಳು. ॥ ೫೨॥ ಪರಮಾವ್ರತ ಮತ್ತು ಪಂಚರಾತ್ರಿವ್ರತವು ಸಮಾಪ್ತಿಯಾಗುತ್ತಿದ್ದಂತೆಯೇ

ಪಂಚರಾತ್ರವ್ರತೇ ಪೂರ್ಣೇ ಪರಾಯಾಃ ಪ್ರಿಯಸಂಯುತಾ ।
ಸಾಽಪಶ್ಯದ್ರಾಜಭವನಾದಾಯಾಂತಂ ನೃಪನಂದನಮ್ ॥೫೩॥

ದತ್ವಾ ನವೀನಂ ಭವನಂ ಭವ್ಯವಸ್ತುಸಮನ್ವಿತಮ್ ।
ವಾಸಯಾಮಾಸ ವಿಧಿನಾ ವಿಧಿನಾ ಪ್ರೇರಿತಃ ಸ್ವಯಮ್ ॥೫೪॥

ದತ್ವಾ ಗ್ರಾಮಂ ವೃತ್ತಿಕರಂ ಬ್ರಾಹ್ಮಣಾಯ ಸುಮೇಧಸೇ ।
ಪ್ರಸನ್ನಸ್ತಪಸಾ ರಾಜಾ ತಂ ಸ್ತುತ್ವಾ ಸ್ವಗೃಹಂ ಯಯೌ ॥೫೫॥

ಮಲಿಮ್ಲುಚಸ್ಯ ಮಾಸಸ್ಯ ಪರಾಯಾ ಪರಮಾದರಾತ್ ।
ಉಪೋಷಣಾತ್ಸ ಕೃಷ್ಣಾಯಾಃ ಪಂಚರಾತ್ರವ್ರತೇನ ಚ ॥೫೬॥

ಸರ್ವಪಾಪವಿನಿರ್ಮುಕ್ತಃ ಸರ್ವಸೌಖ್ಯಸಮನ್ವಿತಃ ।
ಭುಕ್ತ್ವಾ ಭೋಗಾನ್ ಪ್ರಿಯಾಸಾರ್ಧಮಂತೇ ವಿಷ್ಣುಪುರಂ ಯಯೌ॥೫೭॥

ಯೇ ಕರಿಷ್ಯಂತಿ ಮನುಜಾಃ ಪರಾಯಾಃ ವ್ರತಮುತ್ತಮಮ್ ।
ಪಂಚರಾತ್ರಭವಂ ಪುಣ್ಯಂ ಮಯಾ ವಕ್ತುಂ ನ ಶಕ್ಯತೇ ॥೫೮॥

ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ।
ಧೇನುಮುಖ್ಯಾನಿ ದಾನಾನಿ ತೇನ ಚೀರ್ಣಾನಿ ಸರ್ವಥಾ ॥೫೯॥

---

ಅರಮನೆಯಿಂದ ರಾಜಕುಮಾರನು ತನ್ನೆಡೆಗೆ ಬರುತ್ತಿರುವುದನ್ನು ಕಂಡಳು. ॥೫೩॥ ಆ ರಾಜಕುಮಾರನಾದರೋ ಬ್ರಹ್ಮದೇವನಿಂದ ಪ್ರೇರಿತನಾಗಿ ಅಲ್ಲಿಗೆ ಬಂದು ಆ ದಂಪತಿಗಳಿಗೆ ಸಕಲ ಭವ್ಯವಸ್ತುಗಳಿಂದ ಸುಸಜ್ಜಿತವಾದ ಒಂದು ಹೊಸ ಮಹಲನ್ನು ಕೊಟ್ಟು ಅದರಲ್ಲಿ ಅವರಿಬ್ಬರೂ ವಿಧ್ಯುಕ್ತವಾಗಿ ವಾಸಮಾಡುವಂತೆ ಮಾಡಿದನು. ॥೫೪॥ ಇಷ್ಟಲ್ಲದೇ ಆ ರಾಜಕುಮಾರನು ಸುಮೇಧ ಬ್ರಾಹ್ಮಣನ ತಪಸ್ಸಿನಿಂದ ಸಂತುಷ್ಟನಾಗಿ ಅವನಿಗೆ ಉಪಜೀವನಕ್ಕಾಗಿ ಒಂದು ಗ್ರಾಮವನ್ನು ಕೊಟ್ಟು ಅವನನ್ನು ಸ್ತುತಿಸಿ ತನ್ನ ಅರಮನೆಗೆ ಹೊರಟು ಬಂದನು. ॥ ೫೫॥ ಮಲಮಾಸದ ಕೃಷ್ಣಪಕ್ಷದ ಏಕಾದಶೀವ್ರತ ಮತ್ತು ಪಂಚರಾತ್ರವ್ರತ ಇವುಗಳ ಪ್ರಭಾವದಿಂದ ॥ ೫೬॥ ಸುಮೇಧನು ಸರ್ವಪಾಪಗಳಿಂದ ಮುಕ್ತನಾಗಿ ಸಕಲಸೌಖ್ಯಗಳಿಂದ ಯುಕ್ತನಾಗಿ, ತನ್ನ ಪ್ರಿಯೆಯೊಂದಿಗೆ ಸುಖಭೋಗಗಳನ್ನು ಭೋಗಿಸಿ ಕೊನೆಗೆ ವಿಷ್ಣುಲೋಕವನ್ನು ಸೇರಿದನು. ॥ ೫೭॥ ಹೇ ರಾಜಾ, ಉತ್ತಮವಾದ ಪರಮಾ ಏಕಾದಶೀ ವ್ರತವನ್ನೂ ಮತ್ತು ಪಂಚರಾತ್ರ ವ್ರತವನ್ನು ಯಾರು ಆಚರಿಸುವರೋ ಅವರ ಪುಣ್ಯಫಲವನ್ನು ವರ್ಣಿಸುವದು ನನ್ನಿಂದ ಸಾಧ್ಯವಿಲ್ಲ. ॥ ೫೮॥ ಈ ವ್ರತಗಳನ್ನು ಆಚರಿಸಿದವನು ಪುಷ್ಕರಾದಿ ಸಕಲ ತೀರ್ಥಗಳಲ್ಲಿ ಹಾಗೂ ಗಂಗಾದಿ ನದಿಗಳಲ್ಲಿ ಸ್ನಾನ ಮಾಡಿದಂತೆಯೇ,

ಗಯಾಶ್ರಾದ್ಧಂ ಕೃತಂ ತೇನ ಪಿತರಃ ಪರಿತೋಷಿತಾಃ ।
ವ್ರತಾನಿ ತೇನ ಚೀರ್ಣಾನಿ ವ್ರತಖಂಡೋದಿತಾನಿ ವೈ ॥೬೦॥

ದ್ವಿಪದಾಂ ಬ್ರಾಹ್ಮಣಃ ಶ್ರೇಷ್ಠೋ ಗೌರ್ವರಿಷ್ಠಾ ಚತುಷ್ಪದಾಮ್ ।
ದೇವಾನಾಂ ವಾಸವಃ ಶ್ರೇಷ್ಠಸ್ತಥಾ ಮಾಸೋ ಮಲಿಮ್ಲುಚಃ ॥೬೧॥

ಮಲಿಮ್ಲುಚೇ ಪಂಚರಾತ್ರಂ ಮಹಾಪಾಪಹರಂ ಸ್ಮೃತಮ್ ।
ಪಂಚರಾತ್ರೇ ಚ ಪರಮಾ ಪದ್ಮಿನೀ ಪಾಪತೋಷಿಣೀ ॥೬೨॥

ಸಾಧ್ಯಶಕ್ತೈಃ ಪ್ರಕರ್ತವ್ಯಾ ಯಥಾಶಕ್ತ್ಯಾ ವಿಚಕ್ಷಣೈಃ ।
ಮಾನುಷಂ ಜನುರಾಸಾದ್ಯ ನ ಸ್ನಾತೋ ಯೈರ್ಮಲಿಮ್ಲುಚೇ ॥೬೩॥

ತೇ ಜನ್ಮಘಾತಿನೋ ನೂನಂ ನೋಪೋಷ್ಯ ಹರಿವಾಸರೇ ।
ಚತುರಶೀತಿಲಕ್ಷಾಣಿ ಲಭಂತೇ ಯೋನಿಸಂಕಟೇ ॥೬೪॥

ಪ್ರಾಪ್ಯತೇ ಮಾನುಷಂ ಜನ್ಮ ದುರ್ಲಭಂ ಪುಣ್ಯಸಂಚಯೇ ।
ತಸ್ಮಾತ್ಕಾರ್ಯಂ ಪ್ರಯತ್ನೇನ ಪರಮಾಯಾ ವ್ರತಂ ಶುಭಮ್ ॥೬೫॥

ಶ್ರೀಕೃಷ್ಣ ಉವಾಚ -

ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟೋಽಹಂ ತ್ವಯಾಽನಘ ।
ಮಲಿಮ್ಲುಚಸ್ಯ ಮಾಸಸ್ಯ ಪರಮಾಯಾಃ ಸಮುದ್ಭವಮ್ ॥೬೬॥

ಗೋದಾನವೇ ಮೊದಲಾದ ದಾನಗಳನ್ನು ಕೊಟ್ಟಂತೆಯೇ ॥೫೯॥ ಗಯಾಶ್ರಾದ್ಧವನ್ನು ಮಾಡಿ ತನ್ನ ಪಿತೃಗಳನ್ನು ತೃಪ್ತಿಬಡಿಸಿದಂತಾಗುತ್ತದೆ. ಹೆಚ್ಚೇನು- ವ್ರತಖಂಡದಲ್ಲಿ ಹೇಳಿದ ಸಕಲ ವ್ರತಗಳನ್ನು ಆಚರಿಸಿದಂತಾಗುತ್ತದೆ. ॥೬೦॥ ದ್ವಿಪಾದರಲ್ಲಿ ಬ್ರಾಹ್ಮಣರು, ಚತುಷ್ಪಾದರಲ್ಲಿ ಗೋವು ಹಾಗೂ ದೇವತೆಗಳಲ್ಲಿ ಇಂದ್ರನು ಶ್ರೇಷ್ಠರಾಗಿರುವಂತೆ ಮಾಸಗಳಲ್ಲಿ ಮಲಮಾಸವು ಶ್ರೇಷ್ಠವಾಗಿದೆ. ॥೬೧॥ ಮಲಮಾಸದಲ್ಲಿ ಪಂಚರಾತ್ರವ್ರತವು ಮಹಾಪಾಪಗಳನ್ನು ಕಳೆಯುವದು. ಈ ಪಂಚರಾತ್ರಗಳಲ್ಲಿ, ಪಾಪನಾಶಕವಾದ ಪದ್ಮಿನೀ ಏಕಾದಶೀ ವ್ರತವು ಶ್ರೇಷ್ಠವಾಗಿದೆ. ॥ ೬೨॥ ಅಶಕ್ತರಾದವರು ಈ ವ್ರತವನ್ನು ತಮ್ಮ ಶಕ್ತ್ಯನುಸಾರ ಆಚರಿಸಬೇಕು. ಮನುಷ್ಯಜನ್ಮವನ್ನು ಪಡೆದು ಮಲಮಾಸದಲ್ಲಿ ಸ್ನಾನ ಮಾಡಿ ಏಕಾದಶೀವ್ರತವನ್ನು ಆಚರಿಸದಿದ್ದರೆ ॥೬೩॥ ಅವರು ನಿಶ್ಚಯವಾಗಿಯೂ ಆತ್ಮಘಾತಿಗಳಾಗುತ್ತಾರೆ. ೮೪ ಲಕ್ಷ ಯೋನಿಗಳಲ್ಲಿ ಪುನಃ ಪುನಃ ಜನಿಸಿ ಸಂಕಟ ಪಡುತ್ತಾರೆ. ॥೬೪॥ ಏನಾದರೂ ಪುಣ್ಯಸಂಗ್ರಹವಿದ್ದಾಗ ಮಾತ್ರ ಮನುಷ್ಯಜನ್ಮವು ಬರುವುದು. ಇಂಥ ಅವಕಾಶವಿದ್ದಾಗ ಅವಶ್ಯವಾಗಿ ಪರಮಾ ವ್ರತವನ್ನು ಆಚರಿಸಬೇಕು. ॥೬೫॥ ಇಷ್ಟೆಲ್ಲ ತಿಳಿಸಿ ಶ್ರೀಕೃಷ್ಣನು ಪುನಃ ಹೇಳುತ್ತಾನೆ- ಹೇ

ತತ್ತೇ ಸರ್ವಂ ಸಮಾಖ್ಯಾತಂ ಕುರುಷ್ವಾವಹಿತೋ ನೃಪ ॥೬೭॥

ಮಾಹಾತ್ಮ್ಯಂ ಯದುಪತಿನೋದಿತಂ ನಿಶಮ್ಯ ತಚ್ಚಕ್ರೇ
ವ್ರತಮಥ ಚ ಪ್ರಿಯಾಸಮೇತಃ ।
ಭುಕ್ತ್ವಾಽಸೌ ದಿವಿ ಭುವಿ ದುರ್ಲಭಾಂಶ್ಚ ಭೋಗಾನ್ನೀತೋಽಸೌ
ಸುರವರಮಂದಿರಂ ಸುಹೃಷ್ಟಃ ॥೬೮॥

ಯೇಽಪ್ಯೇವಂ ಭುವಿ ಮನುಜಾ ಮಲಿಮ್ಲುಚಾಸ್ಯಾಂ ಸುಸ್ನಾತಾಃ
ಶುಭವಿಧಿನಾ ಸಮಾಚರಂತಿ ।
ತೇ ಮುಕ್ತ್ವಾ ದಿವಿ ವಿಭವಂ ಸುರೇಂದ್ರತುಲ್ಯಂ
ಗಚ್ಛೇಯುಸ್ತ್ರಿಭುವನವಂದಿತಸ್ಯ ಗೇಹಮ್ ॥೬೯॥

**॥ ಇತಿ ಶ್ರೀಮದಧಿಕಮಾಸ ಕೃಷ್ಣೈಕಾದಶೀ**
**ಪರಮಾವ್ರತಮಾಹಾತ್ಮ್ಯಂ ಸಮಾಪ್ತಮ್ ॥೨೬॥**

ಯುಧಿಷ್ಠಿರ, ನೀನು ಕೇಳಿದುದೆಲ್ಲವನ್ನೂ ತಿಳಿಸಿದ್ದೇನೆ ಮಲಮಾಸದ ಪರಮಾ ಏಕಾದಶೀವ್ರತದ ಬಗ್ಗೆ ಎಲ್ಲವನ್ನೂ ಹೇಳಿದ್ದೇನೆ. ॥೬೬॥ ಎಲ್ಲವನ್ನೂ ಚೆನ್ನಾಗಿ ತಿಳಿದು ಆಚರಿಸಿ ಕೃತಾರ್ಥನಾಗು. ॥೬೭॥ ಶ್ರೀಕೃಷ್ಣನು ತಿಳಿಸಿದ ಅಧಿಕಮಾಸದ ಏಕಾದಶಿಗಳ ಮಹಾತ್ಮೆಯನ್ನು ಕೇಳಿದ ಯುಧಿಷ್ಠಿರನು ತನ್ನ ಪತ್ನಿ ದ್ರೌಪದಿಯೊಂದಿಗೆ ಕೂಡಿಕೊಂಡು ಆ ವ್ರತಗಳನ್ನು ಆಚರಿಸಿದನು. ವ್ರತಪ್ರಭಾವದಿಂದ ಇಹದಲ್ಲಿಯೂ ಹಾಗೂ ಸ್ವರ್ಗಲೋಕದಲ್ಲಿಯೂ ದುರ್ಲಭವಾದ ಭೋಗಗಳನ್ನು ಹೊಂದಿ ಕೊನೆಗೆ ವಿಷ್ಣುಮಂದಿರವನ್ನು ಸೇರಿದನು. ॥೬೮॥ ಇಂತು ಮಹಿಮೋಪೇತವಾಗಿರುವ ಅಧಿಕಮಾಸದ ಏಕಾದಶೀವ್ರತವನ್ನು ಇಲ್ಲಿ ಯಾರು ಸ್ನಾನ ಮಾಡಿ ಶ್ರದ್ಧೆಯಿಂದ ವಿಧಿಪೂರ್ವಕ ಆಚರಿಸುವರೋ ಅವರು ಸಂಸಾರದಿಂದ ಮುಕ್ತರಾಗಿ ಸ್ವರ್ಗಲೋಕದಲ್ಲಿ ದೇವೇಂದ್ರನಂತಿದ್ದು ಕೊನೆಗೆ ತ್ರಿಭುವನ ವಂದಿತನಾದ ವಿಷ್ಣುವಿನ ವೈಕುಂಠಲೋಕವನ್ನು ಪಡೆಯುವರು. ॥೬೯॥

**॥ ಇಲ್ಲಿಗೆ ಶ್ರೀಅಧಿಕಮಾಸದ ಕೃಷ್ಣಪಕ್ಷದ ಪರಮಾ ಏಕಾದಶೀವ್ರತದ ಮಹಾತ್ಮೆಯು ಸಮಾಪ್ತವಾಯಿತು. ॥**

**॥ ಶ್ರೀಕೃಷ್ಣಾರ್ಪಣಮಸ್ತು ॥**